# ದೇವಗಿರಿ ಪತನ

(ಐತಿಹಾಸಿಕ ಕಾದಂಬರಿ)

ಶ್ರೀನಿವಾಸರಾವ್ ಕೊರಟಿ

ಆನಂದ ಪ್ರಕಾಶನ

ಚಾಮರಾಜಪೇಟೆ :: ಬೆಂಗಳೂರು ೧೮

ಪ್ರಥಮ ಮುದ್ರಣ : ಜುಲೈ ೧೯೬೦



**ಬೆಲೆ:** ಸಾದಾ ಪ್ರತಿ **ರೂ. ೨**
ಉತ್ತಮ ಪ್ರತಿ **ರೂ. ೩**

*Business Office:*
**ANANDA PRAKASHANA,**
Gayatri Buildings,
Sultanpet, :: Bangalore 2.

ಮುದ್ರಕರು :
ಶ್ರೀ ಸತ್ಯನಾರಾಯಣ ಪ್ರೆಸ್.
ಬೆಂಗಳೂರು

# ಪ್ರ ಸ್ತಾ ವ ನೆ

ಕನ್ನಡ ನಾಡಿನ ಇತಿಹಾಸದಲ್ಲಿ ವಿಜಯನಗರ ಸಾಮ್ರಾಜ್ಯವು ಒಂದು ಸುಂದರ ಅಧ್ಯಾಯ. ಈ ಸಾಮ್ರಾಜ್ಯವು ಸುಮಾರು ಮೂರು ಶತಮಾನಗಳಿಗೂ (ಕ್ರಿ. ಶ. ೧೩೩೬–೧೬೪೧) ಹೆಚ್ಚಾಗಿ ಬಾಳಿತು. ಸಂಗಮ, ಸಾಳ್ವ, ತುಳು ಮತ್ತು ಅರವೀಡು ವಂಶಗಳಿಗೆ ಸೇರಿದ ಇಪ್ಪತ್ತುನಾಲ್ಕು ಮಂದಿ ದೊರೆಗಳು ವೈಭವದಿಂದ ಆಳಿದರು. ಮೂರು ನಾಲ್ಕು ಮಂದಿ ಅರಸರನ್ನು ಬಿಟ್ಟರೆ ಉಳಿದವರೆಲ್ಲರೂ ಸಮರ್ಥರಾದ ದೊರೆಗಳೇ ಆಗಿದ್ದರು.

ಕ್ರಿ.ಶ. ೭೧೧ ರಿಂದ ೧೨೯೬ರ ವರೆಗೆ ಭಾರತಕ್ಕೆ ಕಾಲಿರಿಸಿದ ಯವನರು ಕ್ರಮಕ್ರಮವಾಗಿ ಸಿಂಧೂ, ಗಾಂಧಾರ, ಪಂಜಾಬ್, ದಿಲ್ಲಿ, ಕನೌಜ್, ವಂಗ ಮತ್ತು ಮಾಳವ ದೇಶಗಳನ್ನು ಆಕ್ರಮಿಸಿ, ಉತ್ತರಾಪಥವನ್ನೆಲ್ಲಾ ತಮ್ಮ ಪದಾಕ್ರಾಂತಗೊಳಿಸಿದ ಮೇಲೆ, ದಕ್ಷಿಣಾಪಥದ ಮೇಲೆ ಕಣ್ಣುಹಾಕಿದರು. ಪರಸ್ಪರ ಅಂತಃಕಲಹ, ದ್ವೇಷಾಸೂಯೆಗಳಲ್ಲಿ ಮಗ್ನರಾಗಿದ್ದ ದೇವಗಿರಿಯ ಯಾದವರೂ, ಓರಂಗಲ್ಲಿನ ಕಾಕತೀಯರೂ, ದ್ವಾರಸಮುದ್ರದ ಹೊಯ್ಸಳರೂ ಮಧುರೆಯ ಪಾಂಡ್ಯರೂ ಎಚ್ಚತ್ತುಕೊಳ್ಳಲಿಲ್ಲ. ಇದರ ಪರಿಣಾಮವಾಗಿ ಅವುಗಳು ಅಲ್ಲಾವುದ್ದೀನ್ ಖಿಲ್ಜಿಯ ದಂಡನಾಯಕ ಮಲ್ಲಿಕಾಪೂರನ ಎದುರಿಗೆ ನಿಲ್ಲಲಾರದೆ ಉಧ್ವಸ್ತವಾದವು.

ದೇವಗಿರಿ ಯಾದವರ ಸಂತತವಾದ ಹೋರಾಟ ಹಾಗೂ ಪತನ; ಓರಂಗಲ್ಲಿನ ಕಾಕತೀಯರಿಗೆ ಬಂದ ದುರವಸ್ಥೆ – ಪ್ರತಾಪರುದ್ರನ ಕಾರಾಗೃಹವಾಸ; ದ್ವಾರಸಮುದ್ರದ ಹೊಯ್ಸಳರ ನಾಶ – ಮುಮ್ಮಡಿ ವೀರಬಲ್ಲಾಳನ ನಿಷ್ಫಲ ಹೋರಾಟ; ಮಧುರೆಯ ಪಾಂಡ್ಯದೊರೆಗಳ ಪರಾಭವ – ಸುಂದರ ಪಾಂಡ್ಯನ ಪಿತೃದ್ರೋಹ; ಕುಮ್ಮಟದುರ್ಗದ ನಾಶ–ಕಂಪಿಲರಾಯ, ಕುಮಾರ ರಾಮರ ಅನುಪಮತ್ಯಾಗ, ಬಲಿದಾನಗಳು ಜಡನಿದ್ರೆಯಲ್ಲಿದ್ದ ಜನತೆಯನ್ನು ಎಚ್ಚರಿಸಿ, ಯವನರಿಂದ ತಮ್ಮ ಸ್ವಾತಂತ್ರ್ಯ, ಸ್ವಧರ್ಮ, ಸಂಸ್ಕೃತಿಗಳಿಗೆ ಬಂದೊದಗಿದ್ದ ಗಂಡಾಂತರದ ಕಲ್ಪನೆಮಾಡಿಕೊಟ್ಟವು. ದಕ್ಷಿಣಾಪಥದಲ್ಲಿ ಹಿಂದೂಧರ್ಮ ಸಂಸ್ಕೃತಿಗಳಿಗೆ ಯವನರಿಂದ ಒದಗಿದ್ದ ಗಂಡಾಂತರವನ್ನು

ತಪ್ಪಿಸಲು, ಜನತೆಯಲ್ಲಿ ಸ್ವಾಭಿಮಾನ, ಸ್ವದೇಶ ಪ್ರೇಮಗಳನ್ನು ಕೊನರಿಸಲು ವಿಜಯನಗರ ಸಾಮ್ರಾಜ್ಯವು ಜನ್ಮ ತಾಳಿತು. ಸ್ವರಾಜ್ಯ, ಸ್ವಧರ್ಮ - ಸಂಸ್ಕೃತಿಗಳ ಪಾಲನೆ - ಸಂವರ್ಧನೆ - ಈ ಧ್ಯೇಯಕ್ಕಾಗಿ ಜನ್ಮ ತಾಳಿದ್ದ ಸಾಮ್ರಾಜ್ಯವು ಉನ್ನತವಾಗಿದ್ದ ಈ ಧ್ಯೇಯಸಾಧನೆಗಾಗಿ ಬಾಳಿತು, ಅದರಲ್ಲೇ ಮಡಿಯಿತು.

ವಿಜಯನಗರ ಸಾಮ್ರಾಜ್ಯದ ಶ್ವೇತಛತ್ರದ ಅಡಿಯಲ್ಲಿ ಕನ್ನಡಿಗ, ತೆಲುಗು, ತಮಿಳು ಬಾಂಧವರು ಒಂದಾಗಿ ದುಡಿದು ಈ ಸಾಮ್ರಾಜ್ಯದ ಕೀರ್ತಿವೈಭವಗಳನ್ನು ಬೆಳೆಸಲು ಕಾರಣರಾಗಿದ್ದರೂ, ವಿಜಯನಗರ ಸಾಮ್ರಾಜ್ಯವು ಕನ್ನಡ ಸಾಮ್ರಾಜ್ಯವೆಂಬ ಬಗ್ಗೆ ಹೆಚ್ಚು ವಿವಾದವಿಲ್ಲ. ಅರವೀಡು ವಂಶದ ದೊರೆಗಳನ್ನು ಬಿಟ್ಟರೆ, ಮಿಕ್ಕೆಲ್ಲ ರಾಜಮನೆತನಗಳು ಕನ್ನಡ ಮನೆತನಗಳು. ಅವರು ಕನ್ನಡಿಗ ಅರಸರಾಗಿದ್ದಂತೆ, ಕನ್ನಡ ಸಾಹಿತ್ಯ-ಸಂಸ್ಕೃತಿಗಳ ಅಭಿಮಾನಿಗಳೂ ಆಗಿದ್ದರು ಅವರು ಪಂಪಾವಿರೂಪಾಕ್ಷ ಸ್ವಾಮಿಯ ಅಂಕಿತದಲ್ಲಿ "ಶ್ರೀ ವಿರೂಪಾಕ್ಷ" ಎಂಬ ಕನ್ನಡ ಅಂಕಿತವನ್ನೇ ಶಾಸನಗಳಲ್ಲಿ ಉಪಯೋಗಿಸುತ್ತಿದ್ದರು. ಮುಂದಿನ ಅರಸರು "ಶ್ರೀ ರಾಮ" ಎಂಬ ಮುದ್ರಿಕೆಯನ್ನು ಉಪಯೋಗಿಸಿದರೂ ಅದರ ಲಿಪಿ ಕನ್ನಡವೇ ಆಗಿತ್ತು. ವಿಜಯನಗರದ ದೊರೆಗಳಿಗೆ ಬೇಲೂರಿನ ಶ್ರೀ ಚನ್ನಕೇಶವ ಸ್ವಾಮಿಯಲ್ಲಿ ಬಹಳ ಭಕ್ತಿ ಇತ್ತು. ಶೃಂಗೇರಿ ಪೀಠಕ್ಕೆ ಜಗದ್ಗುರುಗಳಾದ ವಿದ್ಯಾರಣ್ಯರು ಕರ್ನಾಟಕ ಸಾಮ್ರಾಜ್ಯ ಪ್ರತಿಷ್ಠಾಪನಾಚಾರ್ಯರೆನಿಸಿದ್ದರು. ಶ್ರೀಮಠದ ಬಗ್ಗೆ ದೊರೆಗಳಿಗೆ ಇದ್ದ ಭಕ್ತಿಗೌರವಗಳು ಅಪಾರ.

ಬುಕ್ಕರಾಯನು 'ಕರ್ನಾಟ ಕ್ಷಿತಿನಾಥ'ನೆನಿಸಿದ್ದರೆ, ಪ್ರೌಢದೇವರಾಯನು 'ಕನ್ನಡ ರಾಜ್ಯಲಕ್ಷ್ಮಿ - ಕರ್ನಾಟ ಕ್ಷಿತಿಪಾಲ'ನೆನಿಸಿದ್ದನು. ಸಾಳ್ವ ನರಸಿಂಹನಿಗೆ 'ರಾಯ          'ನೆಂಬ ಬಿರುದಿತ್ತು. ಕೃಷ್ಣದೇವರಾಯನು 'ಕನ್ನಡರಾಜ್ಯ          'ನೆನಿಸಿದ್ದನು. ಅರವೀಡು ವಂಶದ ಅಳಿಯ ರಾಮರಾಯನಿಗೆ 'ಪ್ರಾಚ್ಯ ಕರ್ನಾಟಕರಾಜ್ಯ ಸ್ಥಾಪನಾಚಾರ್ಯ' ಎಂಬ ಬಿರುದು ಇತ್ತು. ಇವುಗಳಿಂದ ವಿಜಯನಗರ ಸಾಮ್ರಾಜ್ಯವು ಕನ್ನಡ ಸಾಮ್ರಾಜ್ಯವಾಗಿತ್ತೆಂದು ಧಾರಾಳವಾಗಿ ಹೇಳಬಹುದು.

ಆದರೂ, ವಿಜಯನಗರದ ವೈಶಿಷ್ಟ್ಯವೆಂದರೆ ಅರಸರು ಯಾರೇ ಇರಲಿ, ಯಾವ ಮತ ಪಂಗಡಗಳ ಅಭಿಮಾನಿಗಳೇ ಇರಲಿ, ವಿಜಯನಗರ ಸಾಮ್ರಾಜ್ಯವು ಯಾವ ಆದರ್ಶ ಸಾಧನೆಗಾಗಿ ಜನ್ಮ ತಾಳಿತೋ, ಅದರ ಅನುಷ್ಠಾನಕ್ಕಾಗಿ ದುಡಿದರು. ಅವರು ಹಿಂದೂ ಧರ್ಮವನ್ನು ರಕ್ಷಿಸಿದರು. ಭಾರತೀಯ ಸಂಸ್ಕೃತಿಯ ವಿಕಾಸಕ್ಕೆ ಹೆಣಗಿದರು. ಭಾರತೀಯ ಸಾಹಿತ್ಯ ಕಲೆಗಳನ್ನೂ ಪೋಷಿಸಿದರು. ಒಂದು ಮಾತಿನಲ್ಲಿ ಹೇಳುವುದಾದರೆ ವಿಜಯನಗರ ಸಾಮ್ರಾಟರು ಸ್ವರಾಜ್ಯವನ್ನು ಪಾಲಿಸುವ, ಸ್ವಧರ್ಮ ಮತ್ತು ಸ್ವಸಂಸ್ಕೃತಿಗಳನ್ನು ಸಂಪೂರ್ಣವಾಗಿ ಸಂವರ್ಧಿಸುವ ಉದಾತ್ತ ಆದರ್ಶವನ್ನು ತಮ್ಮ ಕಾರ್ಯನೀತಿಯಾಗಿ ಸ್ವೀಕರಿಸಿದ್ದರು.

ವಿಜಯನಗರ ಸಾಮ್ರಾಜ್ಯವು ಕ್ರಿ. ಶ. ೧೩೩೬ರಲ್ಲಿ ಭುವನೇಶ್ವರಿಯ ಕೃಪಾಪ್ರಸಾದದಿಂದಲೂ, ವಿದ್ಯಾರಣ್ಯರ ತಪಃಪ್ರಭಾವದಿಂದಲೂ, ಹಕ್ಕಬುಕ್ಕರ ಮಹತ್ವಾಕಾಂಕ್ಷೆಯಿಂದಲೂ ಸ್ಥಾಪನೆಯಾದರೂ, ಈ ಸಾಮ್ರಾಜ್ಯ ಅಸ್ತಿತ್ವಕ್ಕೆ ಬರಲು ದಕ್ಷಿಣಾಪಥಕ್ಕೆ ಒದಗಿದ ಯವನರ ದುರಾಕ್ರಮಣವೇ ಮುಖ್ಯ ಕಾರಣ. ಈ ಸಾಮ್ರಾಜ್ಯ ಮಂದಿರಕ್ಕೆ ಬೇಕಾದ ಅಡಿಗಲ್ಲನ್ನು – ಅಸ್ತಿವಾರ – ಸುಭದ್ರವಾಗಿ ಹಾಕಿದವರೇ ದೇವಗಿರಿಯ ಯಾದವರು, ಮತ್ತು ಕುಮ್ಮಟದವರು ಹಾಗೂ ರಾಮದೇವರಾಯನ ಮಹಾತ್ಯಾಗ, ಮುಮ್ಮಡಿಸಿಂಗ, ಕಂಪಿಲರಾಯ, ಕುಮಾರರಾಮರ ಬಲಿದಾನ, ಆನೆಗೊಂದಿಯ ಜಂಬುಕೇಶ್ವರ ರಾಯನ ಸಾಹಸ, ವಿದ್ಯಾರಣ್ಯರ ತಪಃಪ್ರಭಾವ – ಎಂಬುದನ್ನು ಯಾರೂ ಮರೆಯಲಾರರು. ಈ ದೃಷ್ಟಿಯಲ್ಲಿ ಸಾಮ್ರಾಜ್ಯಸ್ಥಾಪನೆಗೆ ದೇವಗಿರಿಯ ಪತನ (ಕ್ರಿ.ಶ. ೧೨೯೪) ನಾಂದಿಯಾಯಿತು. ಶ್ರೀರಂಗರಾಯನು ಗೋವಳಕೊಂಡದ ಯವನರಿಗೆ ಸೋತು ತನ್ನ ರಾಜ್ಯಕೋಶಗಳನ್ನು ಕಳೆದುಕೊಂಡು (ಕ್ರಿ. ಶ. ೧೬೫೬) ದೇಶಭ್ರಷ್ಟನಾಗಿ ಅಲೆದ್ದಾ ಪಾಂಡ್ಯದ್ಧೋ ದ ಪತನವಾಯಿತು.

ಈ ಮೂರೂವರೆ ಶತ ನ್ನುಟದುರ್ಗದ -ಜಯನಗರ ಸಾಮ್ರಾಜ್ಯವು ಅನೇಕ ಏಳುಬೀಳುಗಳನ್ನು ನೋಡಿತು. ಅದು ವೈಭವದ ತುತ್ತತುದಿಯನ್ನು ಮುಟ್ಟಿತು; ಪತನದ ದಾರಿಯನ್ನೂ ಹಿಡಿಯಿತು. ಆದರೆ ವಿಜಯನಗರ ಸಾಮ್ರಾಜ್ಯವು ಭಾರತದ ಇತಿಹಾಸ – ಸಂಸ್ಕೃತಿಗಳ ಪರಂಪರೆಗೆ ನೀಡಿದ

ಕಾಣಿಕೆಯನ್ನೂ, ದಕ್ಷಿಣಾಪಥದ ಹಿಂದೂ ಸಮಾಜದ ಪುನರುಜ್ಜೀವನಕ್ಕೆ ಕೊಟ್ಟ ಅಂತಃಸ್ಫೂರ್ತಿಯನ್ನೂ ಯಾರೂ ನಿರ್ಲಕ್ಷಿಸುವಂತಹುದಲ್ಲ.

"ದೇವಗಿರಿ, ಓರಂಗಲ್ಲು, ದೋರಸಮುದ್ರ, ಕಂಚೀಪುರ ಮೊದಲಾದ ವಿದ್ಯಾಸ್ಥಾನಗಳನ್ನು ಸೂರೆಗೊಂಡು ಹೊಯ್ಸಳವಂಶವು ಮೃತಪಟ್ಟು ದಕ್ಷಿಣ ಪ್ರಾಂತ್ಯವು ನಾಥನಿಲ್ಲದೆ ಹಂಬಲಿಸುತ್ತಿದ್ದ ಸಮಯದಲ್ಲಿ ವಿಜಯನಗರದ ವೀರ ಪತಾಕೆಯು ಎದ್ದು ನಿಂತು ಅಭಯಪ್ರದಾನ ಮಾಡಿತು. ದಕ್ಷಿಣದೇಶದ ವೀರರು, ವಿದ್ವಾಂಸರು, ಕಲಾವಂತರು, ವರ್ತಕರು ವಿಜಯನಗರವನ್ನು ಸೇರಿದರು. ಅಲ್ಲಿನ ಮಹರಾಯರ ನೆರಳಿನಲ್ಲಿ ಆರ್ಯಸಂಸ್ಕೃತಿಯು ಪುನರುಜ್ಜೀವಿತವಾಗಿ ಮನುಷ್ಯಕುಲಕ್ಕೆ ಪ್ರಶಂಸೆಯನ್ನು ತರುವ ಪುರುಷರತ್ನಗಳು ಎಲ್ಲಾ ವಿಧವಾದ ಕಾರ್ಯಗಳಲ್ಲೂ ಪ್ರವರ್ತಿಸತೊಡಗಿದರು. ವಿದ್ಯಾರಣ್ಯರು, ವ್ಯಾಸತೀರ್ಥರೇ ಮೊದಲಾದ ಯತಿಗಳು; ಸಾಯಣಾಚಾರ್ಯರು, ಜಯತೀರ್ಥರು, ಅಪ್ಪಯ್ಯ ದೀಕ್ಷಿತರೇ ಮೊದಲಾದ ಮಹಾವಿದ್ವಾಂಸರು ; ಮಾಧವಾಚಾರ್ಯರು, ಲಕ್ಕಣ್ಣ ದಣಾಯಕರು, ಸಾಳುವ ತಿಮ್ಮಯ್ಯ ಮೊದಲಾದ ಮಂತ್ರಿಶ್ರೇಷ್ಠರು ; ಬುಕ್ಕ ರಾಜ, ಸಾಳವ ನರಸಿಂಹ, ರಾಮರಾಜರಂತಹ ಮಹಾಯೋಧರು ; ಗದುಗಿನ ನಾರಾಯಣ (ಚಾಮರಸ ?), ಪುರಂದರದಾಸರು, ಪೆದ್ದನ್ನ ಮೊದಲಾದ ಕವಿ ಶ್ರೇಷ್ಠರು; (ಪ್ರೌಢದೇವರಾಯ ?) ಕೃಷ್ಣದೇವ, ವೆಂಕಟಪತಿ ಮೊದಲಾದ ರಾಜಶ್ರೇಷ್ಠರು ಈ ವಿಜಯನಗರ ಸಾಮ್ರಾಜ್ಯವೆಂಬ ಮಹಾಚಂಪಕ ವೃಕ್ಷದಲ್ಲಿ ಅರಳಿದ ಕೆಲವು ಕುಸುಮಗಳು" ಎಂದು ಶ್ರೀ ಹಟ್ಟಿ ಕೃಷ್ಣ ಅವರು ಉದ್ಗಾರ ತೆಗೆದಿದ್ದಾರೆ.

ಈ ಸಾಮ್ರಾಜ್ಯದ ಸಮಗ್ರ ಇತಿಹಾಸವನ್ನು ಕಾದಂಬರಿ ರೂಪದಲ್ಲಿ ಕನ್ನಡ ಜನತೆಗೆ ಕೊಡಬೇಕೆಂಬ ಯೋಜನೆ ಹಾಕಿಕೊಂಡು ಈ ಕಾದಂಬರಿ ಮಾಲೆಯನ್ನು ಸಿದ್ಧಗೊಳಿಸಲಾಗಿದೆ. ಸಾಮ್ರಾಜ್ಯದ ಇತಿಹಾಸದ ಯಾವ ಪ್ರಮುಖ ಘಟ್ಟಗಳನ್ನೂ ಬಿಡದೆ, ಯಾವ ಪ್ರಮುಖ ವ್ಯಕ್ತಿಗಳನ್ನೂ ಮರೆಯದೆ ಸುರಮ್ಯ, ಸ್ವತಂತ್ರ ಕಾದಂಬರಿಗಳಾಗಿ ಕನ್ನಡಿಗರ ಮುಂದೆ ಪ್ರಥಮ ಬಾರಿಗೆ ತರುವ ಪ್ರಯತ್ನ ಮಾಡಲಾಗಿದೆ. ಇವುಗಳಲ್ಲಿ ಕೆಲವು ಕಾದಂಬರಿಗಳು ಈ ಮೊದಲೇ ಪ್ರಕಟವಾಗಿದ್ದರೂ, ವಿಜಯನಗರ ಸಾಮ್ರಾಜ್ಯದ ಕಥಾನಕವನ್ನು ನಾಲ್ಕು ಘಟ್ಟಗಳಲ್ಲಿ ಚಿತ್ರಿಸಲ್ಪಡುತ್ತಿರುವುದು ಇದೇ ಮೊದಲು.

**I ಸಾಮ್ರಾಜ್ಯೋದಯ** (ಕ್ರಿ.ಶ. ೧೨೯೪—೧೩೩೬)

೧. ದೇವಗಿರಿ ಪತನ (೧ ಮತ್ತು ೨ನೇ ಭಾಗಗಳು)

೨. ಕನ್ನಡಿಗರ ಕಾಳರಾತ್ರಿ

೩. ರಾಜ್ಯೋದಯ

**II ಸಾಮ್ರಾಜ್ಯ ವೈಭವ** (ಕ್ರಿ.ಶ. ೧೩೩೬—೧೫೨೮)

೧. ರಾಯ ಪರಾಭವ

೨. ಗಜ ಬೇಂಟೆಕಾರ

೩. ರಾಜ್ಯಕ್ರಾಂತಿ

೪. ತ್ರೌಳವೇಶ್ವರ

೫. ಜಗನ್ಮೋಹಿನಿ

೬. ಶಾಂತಿವಾದಿ

**III ಸಾಮ್ರಾಜ್ಯ ದುರಂತ** (ಕ್ರಿ.ಶ. ೧೫೨೮—೧೫೬೫)

೧. ರಾಜದ್ರೋಹಿ

೨. ಅಮಾತ್ಯರತ್ನ

೩. ಹುಚ್ಚು ದೊರೆ

೪. ರಕ್ಕಸತಂಗಡಿ

**IV ಸಾಮ್ರಾಜ್ಯ ಪತನ** (ಕ್ರಿ.ಶ. ೧೫೬೫—೧೬೫೬)

೧. ರಘುನಾಥ ವಿಜಯ

೨. ದೇವಿಕೋಟೆ

೩. ಜ್ಞಾತಿ ಕಲಹ

೪. ರಾಜ್ಯಕ್ಷಯ.

ಈ ಕಾದಂಬರಿಗಳನ್ನು ಇದುವರೆಗೆ ವಿಜಯನಗರ ಸಾಮ್ರಾಜ್ಯದ ಬಗ್ಗೆ ಪ್ರಕಟವಾಗಿರುವ ಎಲ್ಲ ಸಂಶೋಧಕ ಲೇಖನ ಹಾಗೂ ಇತಿಹಾಸಗಳ

ಆಧಾರದ ಮೇಲಿನಿಂದ ನಿರ್ಮಿಸಲಾಗಿದೆ. ಇವು ಓದುಗರ ಮೆಚ್ಚಿಕೆಗೆ ಪಾತ್ರವಾಗುವುವೆಂದು ನಂಬಲಾಗಿದೆ.

ಇವುಗಳಲ್ಲಿ ಕೆಲವು ಕಾದಂಬರಿಗಳನ್ನು ಈ ಮೊದಲು ಪ್ರಕಟಿಸಿ ಸಹಾಯಮಾಡಿದ ಪ್ರಕಾಶಕರಿಗೂ, ಈ ಯೋಜನೆ ಕಾರ್ಯರೂಪಕ್ಕೆ ಬರಲು ನೆರವು ನೀಡಿದ ಮಿತ್ರರಿಗೂ, ಸಂಸ್ಥೆಗಳಿಗೂ ಲೇಖಕನು ಕೃತಜ್ಞನಾಗಿದ್ದಾನೆ. ಅಂತೆಯೇ ಈ ಸಾಮ್ರಾಜ್ಯ ಕಥಾನಕ ಕಾದಂಬರಿ ಮಾಲೆಯನ್ನು ಪ್ರಕಟಿಸಲು ನೆರವಾದ ಕೃಷ್ಣ ಪಬ್ಲಿಕೇಷನ್ಸ್ ಅವರಿಗೆ ಲೇಖಕನು ಋಣಿಯಾಗಿದ್ದಾನೆ.

೧೦೪, ರಾಘವೇಂದ್ರ ಕಾಲೋನಿ,
೫ನೇ ರಸ್ತೆ, ಚಾಮರಾಜಪೇಟೆ,
ಬೆಂಗಳೂರು ೧೮.

**ಶ್ರೀನಿವಾಸರಾವ್ ಕೊರಟಿ.**

# ಪ್ರಕಾಶಕರ ಮಾತು

❖

ನಮ್ಮ ಪ್ರಕಾಶನದಿಂದ ಪ್ರಕಟವಾಗುತ್ತಿರುವ ಮೊದಲನೆಯ ಕುಸುಮವೇ ದೇವಗಿರಿ ಪತನ. ಇದನ್ನು ಬರೆದ ಶ್ರೀನಿವಾಸರಾವ್ ಕೊರಟಿಯವರು ಈಗಾಗಲೇ ಹಲವಾರು ಐತಿಹಾಸಿಕ ಕಾದಂಬರಿಗಳನ್ನು ಕನ್ನಡ ಜನತೆಗೆ ನೀಡಿದ್ದಾರೆ. ಅವರು ವಿಜಯನಗರ ಸಾಮ್ರಾಜ್ಯದ ಬಗ್ಗೆ ಬರೆದಿರುವ ಕಾದಂಬರಿಗಳನ್ನು ಪ್ರಕಟಿಸಲು ನಮಗೆ ಹೆಮ್ಮೆಯುಂಟಾಗುತ್ತಿದೆ.

ನಮ್ಮ ಪ್ರಕಾಶನದಿಂದ ಕನ್ನಡ ಸಾಹಿತ್ಯದಲ್ಲಿ ನುರಿತ, ಜನಪ್ರಿಯ ಲೇಖಕರ ಉತ್ಕೃಷ್ಟ ಕೃತಿಗಳನ್ನು ಪ್ರಕಟಿಸುವ ಯೋಜನೆಯನ್ನು ಹಾಕಿಕೊಂಡಿದ್ದೇವೆ. ಸಣ್ಣ ಕಥೆ, ಕಾದಂಬರಿ, ನಾಟಕ ಮುಂತಾದ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲೂ ಉತ್ತಮ ಸಾಹಿತ್ಯವನ್ನು ಕನ್ನಡಿಗರಿಗೆ ಒದಗಿಸಬೇಕೆಂಬುದೇ ನಮ್ಮ ಧ್ಯೇಯವಾಗಿದೆ. ಜನತೆಯ ಅಭಿರುಚಿಯನ್ನು ಉತ್ತಮಪಡಿಸಲು ಲೇಖಕರ ಹೊಣೆಗಾರಿಕೆ ಇರುವಷ್ಟೇ ಪ್ರಕಾಶಕರ ಹೊಣೆಗಾರಿಕೆ ಇದೆ. ಆದರೆ, ಇಂತಹ ಪ್ರಯತ್ನದ ಯಶಸ್ಸು–ವಿಫಲತೆ ನಿಂತಿರುವುದು ಕನ್ನಡ ಸಾಹಿತ್ಯಾಭಿಮಾನಿಗಳಾದ ಓದುಗರ ಮೇಲೆ. ತಮಗೆ ಎಂತಹ ಸಾಹಿತ್ಯ ಬೇಕೆಂಬುದನ್ನು ನಮಗೆ ತಿಳಿಸಿದರೆ ಅದನ್ನು ಒದಗಿಸಲು ಸಾಧ್ಯವಾದಷ್ಟು ಪ್ರಯತ್ನಿಸುತ್ತೇವೆ. ಒಟ್ಟಿನಲ್ಲಿ ನಮ್ಮ ಪ್ರಕಟನೆಗಳ ವಾಚಕ ಬಳಗ ಬೆಳೆಯಬೇಕು, ನಮ್ಮ ಪ್ರಕಾಶನದಿಂದ ನಾಡುನುಡಿಗಳ ಸೇವೆ ಸಲ್ಲಬೇಕೆಂಬ ಮಹತ್ವಾಕಾಂಕ್ಷೆ ನಮ್ಮದು. ನಮ್ಮ ಪ್ರಯತ್ನಕ್ಕೆ ಕನ್ನಡನಾಡಿನ ಓದುಗರು ಹಾರ್ದಿಕ ಬೆಂಬಲ ನೀಡುವರೆಂಬ ನಂಬಿಕೆ ನಮಗಿದೆ.

೨೫–೭–೧೯೬೦,
ಬೆಂಗಳೂರು

**ಆನಂದ ಪ್ರಕಾಶನ.**

# ಇದೇ ಲೇಖಕರ ಇತರ ಕೃತಿಗಳು

---

| ಸಾಮಾಜಿಕ : | ಐತಿಹಾಸಿಕ : |
|---|---|
| ಚೈತ್ರಯಾತ್ರೆ | ಜಗನ್ಮೋಹಿನಿ |
| ತೂರಿ ಬಂದ ತಾರೆ | ಶಾಂತಿವಾದಿ |
| ಕಣ್ಣೀರಿನ ಕಡಲು | ರಾಜದ್ರೋಹಿ |
| ಮಂಗಳದೀಪ | ಅಮಾತ್ಯರತ್ನ |
| ವಿದ್ಯಾಧರೆ | ಹುಚ್ಚು ದೊರೆ |
| ಮಿಸ್ ಲೀಲಾವತಿ | ರಕ್ಕಸತಂಗಡಿ |
| ಗೃಹಿಣಿ | ರಾಯ ಪರಾಭವ |
| ಮಮತೆಯ ಸುಳಿ | ಚಾಲುಕ್ಯ ವಿಕ್ರಮ |

ಮೈಸೂರು ಹುಲಿ
ರಘುನಾಥ ವಿಜಯ
ಧರ್ಮದೀಕ್ಷೆ

ರಾಜಾ ತೇಜಸಿಂಹ (ಅಚ್ಚಿನಲ್ಲಿ)
ಕನ್ನಡಿಗರ ಕಾಳರಾತ್ರಿ ,,
ರಾಜ್ಯೋದಯ ,,
ಪರಮೇಶ್ವರ ಪುಲಿಕೇಶಿ ,,

---

# ೧

ವ್ಯಾಘ್ರ ರಾಜನಿಗೆ ತನ್ನ ಏಕಾಂತಕ್ಕೆ ಭಂಗ ತಂದವರ ಮೇಲೆ ಭಯಂಕರ ಸಿಟ್ಟು ಬಂದಿತ್ತು. ಅದು ತನ್ನ ಮುಂಗಾಲನ್ನು ನೆಲಕ್ಕೆ ಬಡಿದು, ತೀಕ್ಷ್ಣ ಕಣ್ಣುಗಳಿಂದ ಆಕ್ರಮಣಕಾರರನ್ನು ರೋಷದಿಂದ ನೋಡಿ, ಭಯಂಕರವಾಗಿ ಒಮ್ಮೆ ಗರ್ಜಿಸಿತು. ಅದರ ರವಕ್ಕೆ ಭೂಮ್ಯಾಕಾಶಗಳು ನಡುಗಿದವು; ವನ್ಯ ಮೃಗಗಳು ತತ್ತರಿಸಿದವು. ಬೇಟೆಗೆಂದು ಬಂದಿದ್ದ ಬೇಡರ ಪಡೆ ಹೆದರಿ ಹಿಮ್ಮೆಟ್ಟಿತು.

ಆದರೆ ರಾಮದೇವರಾಯ ಮಾತ್ರ ಹೆದರಲಿಲ್ಲ. ವ್ಯಾಘ್ರನ ಪ್ರಚಂಡ ಗರ್ಜನೆಗೆ ಕಂಪಿಸಲಿಲ್ಲ. ಅವನು ತನ್ನ ಜತೆಯಲ್ಲಿ ಬಂದಿದ್ದ ಬೇಡರ ಪಡೆ ಹೆದರಿ ಹಿಮ್ಮೆಟ್ಟುವುದನ್ನು ನೋಡಿಯೂ, ಮೃತ್ಯುವಿನ ದವಡೆಗೆ ನುಗ್ಗುವಂತೆ, ಹುಲಿಯ ಮೇಲೆ ಬಿದ್ದನು; ಪ್ರಾಣದ ಹಂಗು ತೊರೆದು ಅದರ ಮೇಲೆ ಆಕ್ರಮಣ ಮಾಡಿದನು.

ವ್ಯಾಘ್ರನಿಗೆ ಭಯಂಕರ ಸಿಟ್ಟು ಬಂದಿತ್ತು. ತನ್ನ ರಾಜ್ಯದೊಳಗೆ ನುಗ್ಗಿ ತನ್ನ ಏಕಾಂತಕ್ಕೆ ಭಂಗತಂದು, ಈಗ ತನ್ನನ್ನು ಕೊಲ್ಲಲೆತ್ನಿಸಿದ್ದ ರಾಮದೇವರಾಯನ ಮೇಲೆ ಸೇಡು ತೀರಿಸಿಕೊಳ್ಳಲೆಂಬಂತೆ ಅದು ಅವನನ್ನು ಕ್ರೂರವಾಗಿ ನೋಡಿ, ಪಂಜದಿಂದ ನೆಲವನ್ನು ಬಡಿಯಿತು. ಅದರ ರಭಸಕ್ಕೆ ಮಣ್ಣಿನ ಕಣಗಳು ಸಿಡಿದು ದೂರ ಹಾರಿದವು. ಅದು ತನ್ನ ಅಸಮಾಧಾನ, ಸಿಟ್ಟು ಸೆಡವುಗಳ ದ್ಯೋತಕವಾಗಿ ಗುರ್ ಗುಟ್ಟಿ ಮೈಯನ್ನು ತೂರಿ, ಬಿಸಿಲ್ಲಿಂದ ಹಾರುವ ಅಂಬಿನಂತೆ, ರಾಮದೇವರಾಯನ ಮೇಲೆ ಬಿದ್ದಿತು.

ನೋಡುತ್ತಿದ್ದ ಬೇಟೆಗಾರರು ‘ ಅಯ್ಯೋ ’ ಎಂದು ಚೀರಿದರು. ತಮ್ಮ ಒಡೆಯನ ಗತಿ ಮುಗಿಯಿತೆಂದು ಉದ್ಗಾರ ತೆಗೆದು ಅವನ ರಕ್ಷಣೆಗೆ ಧಾವಿಸಿದರು.

ರಾಮದೇವರಾಯನು ಮೃತ್ಯುಮುಖದಲ್ಲೂ ಅಂಜಲಿಲ್ಲ, ಅಳಕಲಿಲ್ಲ. ಚಿತ್ತಸ್ಥೈರ್ಯವನ್ನೂ, ಧೈರ್ಯವನ್ನೂ ಕಳೆದುಕೊಳ್ಳಲಿಲ್ಲ. ಅವನು ಕುಶಲಿ

ಯಾದ ಬೇಟೆಗಾರನಂತೆ, ತನ್ನ ಮೇಲೆ ಬೀಳಲು ಬಂದ ದೈತ್ಯಾಕಾರದ ಹುಲಿಯ ಪೆಟ್ಟನ್ನು ಜಾಣ್ಮೆಯಿಂದ ತಪ್ಪಿಸಿಕೊಂಡನು. ಮತ್ತೆ ತನ್ನ ಮೇಲೆ ಬೀಳಲು ಬಂದ ಅದನ್ನು ಕೊಂದು ಯಮಸದನಕ್ಕೆ ಅಟ್ಟಲು ಉದ್ಯುಕ್ತನಾಗಿ ಕೈಗೆ ಭಲ್ಲೆಯನ್ನು ತೆಗೆದುಕೊಂಡು ಹುಲಿಗೆ ಗುರಿ ಇಟ್ಟು ಎಸೆದನು. ಆದರೆ ಅದರ ವೇಗಕ್ಕೆ ಕಾಲುಜಾರಿ ನೆಲಕ್ಕೆ ಕುಸಿದನು. ದುರ್ದೈವದಿಂದ ಭಲ್ಲೆ ಗುರಿ ತಪ್ಪಿತು. ಆದರೂ ಅದರ ಮೊನೆ ವ್ಯಾಘ್ರನ ದೇಹದ ಮೇಲೆ ಬಲವಾದ ಗಾಯಗೊಳಿಸಿ, ದೂರ ಸಿಡಿದಿತ್ತು. ಪೆಟ್ಟು ತಿಂದ ಹುಲಿ ಇಮ್ಮಡಿ ಸಿಟ್ಟಿನಿಂದ ನೆಲಕ್ಕೆ ಬಿದ್ದ ರಾಮದೇವರಾಯನ ಮೇಲೆ ಎರಗಿತು. ನೆಲಕ್ಕೆ ನಿಶ್ಚೇಷ್ಟಿತನಾಗಿ ಬಿದ್ದಿದ್ದ ರಾಮದೇವರಾಯನು ಚೇತರಿಸಿಕೊಂಡು, ಅಪಾಯವನ್ನು ನೆನೆದು ಸೊಂಟದಲ್ಲಿದ್ದ ಕಠಾರಿಯನ್ನು ಕೈಗೆ ತೆಗೆದು ಕೊಳ್ಳುವುದರೊಳಗಾಗಿ ವ್ಯಾಘ್ರನ ಆಕ್ರಮಣಕ್ಕೆ ತುತ್ತಾಗಿದ್ದನು. ಅವನು ತನ್ನ ಎಡ ತೋಳನ್ನೂ ಹುಲಿಯ ಬಾಯಿಗೆ ತುರುಕಿ, ಕಾಲುಗಳಿಂದ ಹುಲಿಯ ದೇಹವನ್ನು ಅಪ್ಪಿ, ಬಲಗೈಯ ಕಠಾರಿಯಿಂದ ಅದರ ಹೊಟ್ಟೆಯನ್ನು ಬಗೆಯಲು ಶಕ್ತಿ ಮೀರಿ ಪ್ರಯತ್ನಿಸಿದನು. ಈ ಪ್ರಯತ್ನದಲ್ಲಿ ಅವನ ದೇಹದ ಹಲವು ಕಡೆ ವ್ಯಾಘ್ರನಖದಿಂದ ಗಾಯಗಳಾಗಿ ರಕ್ತ ಸೋರುತ್ತಿತ್ತು. ಆದರೂ ತನ್ನ ಅಪ್ಪುಗೆಯನ್ನು ಅವನು ಬಿಡಲಿಲ್ಲ. ಅದು ಅವನ ಪಾಲಿಗೆ ಮೃತ್ಯುವಿಗೆ ಆಲಿಂಗನೆಯೇ ಆಗಿತ್ತು. ಅವನು ವೀರ ಯೋಧನಂತೆ, ತನಗಿಂತಲೂ ಹೆಚ್ಚು ಬಲಶಾಲಿಯಾಗಿದ್ದ ವ್ಯಾಘ್ರನೊಡನೆ ಸಾವು ಬದುಕಿನ ಹೊರಾಟದಲ್ಲಿ ತೊಡಗಿದ್ದನು.

ಬೇಟೆಗಾರರ ಪಡೆ ಅವನ ಸುತ್ತಲೂ ನಿಂತು ಭೀಕರ ಹೋರಾಟವನ್ನು ಅವಾಕ್ಕಾಗಿ ನೋಡುತ್ತಿತ್ತು. ಅವರಿಗೆ ತಮ್ಮ ಒಡೆಯನ ನೆರವಿಗೆ ಹೋಗುವ ತವಕ. ಆ ದುಷ್ಟ ಹಿಸ್ರಮೃಗದ ಕೈಯಿಂದ ತಮ್ಮ ಒಡೆಯನನ್ನು ಪಾರುಮಾಡುವ ತವಕ. ಆದರೆ ಅವರು ಯಾರೂ ಕೈಗೆ ಶಸ್ತ್ರ ತೆಗೆದುಕೊಂಡು ವ್ಯಾಘ್ರನಿಗೆ ಈಡು ಹೊಡೆಯುವಂತೆ ಇರಲಿಲ್ಲ. ಈಡು ತಪ್ಪಿದರೆ ತಮ್ಮ ದೊರೆಯೇ ಮೃತ್ಯುವಶನಾಗಬಹುದು ! ಒಮ್ಮೆ ವ್ಯಾಘ್ರ–ಮತ್ತೊಮ್ಮೆ ರಾಮದೇವರಾಯ– ಹೀಗೆ ಇಬ್ಬರೂ ಮಣ್ಣಿನಲ್ಲಿ ಹೊರಳಿ ಮರಣೋತ್ಕಮಣದ ಭೀಕರ ಹೋರಾಟದಲ್ಲಿ ತೊಡಗಿದ್ದರು. ಯಾವ ಗಳಿಗೆಯಲ್ಲಾದರೂ ಈ ಮೃಗ-ಮಾನವರ ಹೋರಾಟ

ದುರಂತದಲ್ಲಿ ಮುಕ್ತಾಯವಾಗಬಹುದಾಗಿತ್ತು ! ಇದನ್ನು ಅವರು ನಿರು ಪಾಯರಾಗಿ ನೋಡಿಕೊಂಡಿರಬೇಕಾದ ಪ್ರಸಂಗ ಬಂದಿತ್ತು.

ಅಷ್ಟರಲ್ಲಿ ಒಂದು ವಿಸ್ಮಯ ಘಟನೆ ನಡೆಯಿತು. ವ್ಯಾಘ್ರನು, ಅತಿಯಾಗಿ ರಕ್ತ ಸೋರಿ ದುರ್ಬಲನಾಗುತ್ತ ನಡೆದಿದ್ದ ರಾಮದೇವರಾಯನ ವಜ್ರಮುಷ್ಠಿ ಯಿಂದ ಬಿಡಿಸಿಕೊಂಡು ಅವನನ್ನು ತನ್ನ ಕ್ರೂರ ಕೋರೆದಾಡೆಯಿಂದ ಸೀಳಿ ಬಿಸಡಲು, ತನ್ನ ಬಲವನ್ನೆಲ್ಲಾ ಬಿಟ್ಟು ಅವನ ಮೇಲೆ ಎರಗಿತು. ಈ ಸಮಯ ದಲ್ಲಿ ಎಲ್ಲಿಂದಲೋ ಬಂದು ಭಲ್ಲೆ ಹಾರಿ ಬಂದು ಅದರ ಬಾಯಿಯೊಳಗೆ ಪ್ರವೇಶ ಮಾಡಿ ಬಲವಾಗಿ ಗಾಯಗೊಳಿಸಿತು. ಈ ಪೆಟ್ಟಿಗೆ ಹುಲಿಯು ಭಯಂಕರವಾಗಿ ಚೀರಿ, ನಾಲ್ಕು ಮಾರು ದೂರದಲ್ಲಿ ದೊಪ್ಪನೆ ಉರುಳಿತು. ಅದು ಮತ್ತೊಮ್ಮೆ ಎದ್ದು ತನ್ನ ಆಕ್ರಮಣವನ್ನು ಮುಂದುವರೆಸಬೇಕೆನ್ನುವುದ ರಲ್ಲಿ ದೈತ್ಯಾಕಾರದ ಬೇಡನೊಬ್ಬನು ಮಿಂಚಿನ ವೇಗದಲ್ಲಿ ಹುಲಿಯ ಮೇಲೆ ಬಿದ್ದು ಕೈಲಿದ್ದ ಖಡ್ಗದಿಂದ ಅದನ್ನು ತೀವ್ರವಾಗಿ ಗಾಯಗೊಳಿಸಿ ಯಮ ಸದನಕ್ಕೆ ಅಟ್ಟಿದನು.

ಇಷ್ಟೆಲ್ಲ ಘಟನೆಯು ರಾಮದೇವರಾಯ ಹಾಗೂ ಬೇಡರ ಪಡೆಯ ಕಣ್ಣ ಮುಂದೆ ಮಿಂಚಿನ ವೇಗದಲ್ಲಿ ನಡೆದುಹೋಗಿತ್ತು. ತಮ್ಮಿಂದ ಆಗದೇ ಇದ್ದ ಈ ಸಾಹಸ ಕಾರ್ಯವನ್ನು ಎಸಗಿದ ಆ ವೀರನು ಯಾರು? ಎಲ್ಲಿಂದ ಬಂದನು–ಎಂದು ಅವರು ಚಕಿತರಾಗಿ ನೋಡುತ್ತಾ ನಿಂತರು. ರಾಮ ದೇವರಾಯನಿಗಂತೂ ತನ್ನನ್ನು ಮೃತ್ಯುವಿನ ದವಡೆಯಿಂದ ಪಾರುಮಾಡಿದ ಆ ಮಹಾ ಪುರುಷನು ಯಾರು? ಎಂದು ವಿಸ್ಮಯ, ಅಭಿಮಾನ, ಕೃತಜ್ಞತೆ ಗಳು ಏಕಕಾಲದಲ್ಲಿ ಉಂಟಾಗಿದ್ದವು. ಅವನ್ನು ತಡೆ ಹಿಡಿಯಲಾಗದೆ.

"ಅಯ್ಯಾ ವೀರಾಗ್ರಣಿ, ನೀನು ಯಾರು? ದುಷ್ಟ ವ್ಯಾಘ್ರನ ಕೈಯಿಂದ ನನ್ನನ್ನು ಪಾರು ಮಾಡಿದ ನೀನು ಯಾರು? ನೀನು ನನ್ನ ಪಾಲಿನ ಭಾಗ್ಯ ದೇವತೆಯಂತೆ ಇಲ್ಲಿಗೆ ಹೇಗೆ ಬಂದೆ?"

ಎಂದು ಪ್ರಶ್ನಿಸಿದನು

"ಪ್ರಭು, ಮಾತನಾಡಿ ದಣಿಯಬಾರದು. ತಾವು ತುಂಬಾ ಗಾಯ ಗೊಂಡಿದ್ದೀರಿ ಮೊದಲು ನಿಮ್ಮ ಗಾಯಗಳಿಗೆ ಚಿಕಿತ್ಸೆ ನಡೆಯಲಿ. ಅನಂತರ

ನನ್ನ ಕಥೆ ಕೇಳೋಣವಾಗಲಿ!" ಎಂದು ಆಗಂತುಕನು ವಿನಯದಿಂದ ಹೇಳಿದನು.

"ಅಯ್ಯಾ, ವೀರವರ, ನಿನ್ನ ಮಾತು ಕೇಳಿ ಕಿವಿಗೆ ಅಮೃತ ವರ್ಷವಾದಂತೆ ಆಗಿದೆ. ನೀನು ಸಾಮಾನ್ಯನಲ್ಲ–ನೀನು ಯಾರು? ಇಲ್ಲಿಗೆ ಹೇಗೆ ಬಂದೆ, ತಿಳಿಸುವ ಕೃಪೆ ಮಾಡಬೇಕು"

"ಪ್ರಭು, ನಾನೊಬ್ಬ ಅನಾಮಧೇಯ ರಾಜಪುತ್ರ! ಜ್ಞಾತಿ ಕಲಹದಿಂದ ಮನನೊಂದು ಕೆಳದಿ ಸಮೇತ ದೇಶಾಂತರ ಹೊರಟಿರುವ ಒಬ್ಬ ನಿರ್ಭಾಗ್ಯ ರಾಜಪುತ್ರ. ನಾನು ದೇಶಕೋಶಗಳನ್ನು ಜ್ಞಾತಿಗಳಿಗೆ ಬಿಟ್ಟ ಮೇಲೆ ನನಗೆ ಅಶ್ರಯ ಕೊಡುವ ದೊರೆಗಳನ್ನು ಹುಡುಕಿಕೊಂಡು ಅಲೆಯುತ್ತಿದ್ದೆ. ಮಾರ್ಗಾಂತರದಲ್ಲಿ ಹೀಗೆ ಬಂದೆ. ಪ್ರಯಾಣದಿಂದ ದಣಿದು ಇಲ್ಲಿನ ಜಲಾಶಯದ ಬಳಿ ವಿಶ್ರಮಿಸಿಕೊಳ್ಳುತ್ತಿರುವಾಗ ಸಮೀಪದಲ್ಲಿ ಹುಲಿಯ ಗರ್ಜನೆ ಕೇಳಿಸಿತು. ನಿಮ್ಮ ಪರಿವಾರದವರ ಚೀರಾಟವೂ ಕೇಳಿತು. ಗಾಬರಿಯಿಂದ ಇತ್ತ ಬಂದೆ. ನನ್ನ ಊಹೆ ನಿಜವಾಯಿತು. ನೀವು ಆಪತ್ತಿನಲ್ಲಿ ಇದ್ದಿರಿ. ದೇವರು ದೊಡ್ಡವನು. ನಾನು ಇಟ್ಟ ಭಲ್ಲೆಯ ಗುರಿ ತಪ್ಪಲಿಲ್ಲ. ನೀವು ಉಳಿದು ಕೊಂಡಿರಿ. ನಿಜಕ್ಕೂ ನಾನು ಭಾಗ್ಯಶಾಲಿ!"

"ಅಯ್ಯಾ, ರಾಜಪುತ್ರ, ನಿನ್ನಂತಹ ವೀರರೂ, ಪರಾಕ್ರಮಿಗಳೂ, ಭೂತದಯಾ ಪ್ರೇರಿತರೂ ಆಪತ್ತಿನಲ್ಲಿ ನಮಗೆ ದೊರೆತುದು ನಮ್ಮ ಪೂರ್ವಾರ್ಜಿತ ಪುಣ್ಯ ವಿಶೇಷವೇ ಸರಿ! ನೀನು ಎಂದಿಗೂ ಅನಾಮಧೇಯನಲ್ಲ– ನಿರ್ಭಾಗ್ಯನಲ್ಲ. ನೀನು ಯಾರೋ ಮಹಾಪುರುಷನೇ ಸರಿ. ಅಜ್ಞಾತನಾಗಿ ಹೀಗೆ ಪ್ರಯಾಣ ಮಾಡುತ್ತಿರುವುದಕ್ಕೆ ಜ್ಞಾತಿಕಲಹಕ್ಕಿಂತಲೂ ಬೇರೆ ಮಹತ್ವದ ಕಾರಣವಿರಬೇಕು. ಯಾರು ನೀನು? ನಿನ್ನ ನಿಜವಾದ ನಾಮಧೇಯವೇನು? ನೀನು ಪ್ರಾಣ ಉಳಿಸಿದನನ್ನೊಡನೆ ಸಂಕೋಚವೆ?" ಎಂದು ರಾಮದೇವ ಕಳಕಳಿಯಿಂದ ಕೇಳಿದನು.

"ಪ್ರಭು, ನನ್ನ ವಿಷಯದಲ್ಲಿ ತಮಗಿರುವ ಅಭಿಮಾನಕ್ಕೆ ನಾನು ಎಷ್ಟರ ಮಟ್ಟಿಗೆ ಪಾತ್ರನೋ ತಿಳಿಯದು. ನನ್ನನ್ನು ಜನ ಮುಮ್ಮಡಿಸಿಂಗನೆಂದು ಕರೆಯುತ್ತಾರೆ. ನಾನು ಮಲೆನಾಡಿನ ಪೂವಾಲಿ ಅರಸು ಮನೆತನಕ್ಕೆ ಸೇರಿದ್ದೇನೆ!"

"ಏನು ? ನೀವು ಮಲೆನಾಡಿನ ಕರ್ಣಾದ ತೋರಣದ ಮುಮ್ಮಡಿಸಿಂಗರೇ ?"

"ಹೌದುಪ್ರಭು ! ಆನಿರ್ಭಾಗ್ಯನೇ ನಾನು !"

"ಇದೇನು ನೀವು ಈ ಸ್ಥಿತಿಯಲ್ಲಿ ? ಇಲ್ಲಿ ದೇಸಿಗರಂತೆ ತಿರುಗುತ್ತಿದ್ದೀರಿ ?"

"ಅದೊಂದು ದೊಡ್ಡ ಕಥೆ ಪ್ರಭು, ಜ್ಞಾತಿಗಳ ಮೋಸದ ಬಲೆಗೆ ಬಿದ್ದು. ದೇಶಕೋಶಗಳನ್ನು ಕಳೆದುಕೊಂಡೆ. ಪರದೇಶಿಯಂತೆ ಆಶ್ರಯ ನೀಡಬಲ್ಲ ದೊರೆಗಳನ್ನು ಹುಡುಕುತ್ತಾ ಹೊರಟಿದ್ದೇವೆ ಪ್ರಭು ! ತಾವು ದಯ ಮಾಡಿ ನಮಗೆ ಆಶ್ರಯ ನೀಡಬೇಕು. ತಮ್ಮ ಉಪಕಾರವನ್ನು ನಾವು ಆಜನ್ಮ ಪರ್ಯಂತ ಸ್ಮರಿಸುತ್ತೇವೆ" ಎಂದು ಗದ್ಗದಕಂಠದಲ್ಲಿ ಮುಮ್ಮಡಿಸಿಂಗನು ನುಡಿದನು.

"ಅಯ್ಯಾ, ಮುಮ್ಮಡಿಸಿಂಗ, ನಿಮ್ಮ ಕೀರ್ತಿಯನ್ನು ನಾನು ಸಾಕಷ್ಟು ಕೇಳಿದ್ದೇನೆ. ನೀವು ಸಣ್ಣ ಸಂಸ್ಥಾನದ ದೊರೆಯಾದರೂ ನಿಮ್ಮ ಶೌರ್ಯಾದಿ ಸದ್ಗುಣಗಳಿಂದ ಈ ನಾಡಿನಲ್ಲೆಲ್ಲಾ ಪ್ರಖ್ಯಾತಿ ಪಡೆದಿರುವಿರಿ. ನಿಮ್ಮಂತಹ ವೀರಪುರುಷನಿಗೆ ಆಶ್ರಯ ಕೊಡುವ ಭಾಗ್ಯ ನಮಗೆ ಇದೆಯೆ ? ಅದರಲ್ಲೂ ನಮ್ಮ ಪ್ರಾಣ ಉಳಿಸಿರುವ ನಿನ್ನ ಉಪಕಾರವನ್ನು ತೀರಿಸುವ ಭಾಗ್ಯ ನಮಗೇ ಇದೆಯೆ ? ಅಯ್ಯಾ, ಮುಮ್ಮಡಿಸಿಂಗ ನಿಮ್ಮನ್ನು ನನ್ನ ಮಿತ್ರರಾಗಿ ದೇವಗಿರಿಗೆ ಸ್ವಾಗತಿಸುತ್ತೇನೆ. ನನ್ನ ಸಕಲ ಸೈನ್ಯ ಪಡೆಗಳಿಗೆ ನೀವು ಮಹಾದಂಡ ನಾಯಕರಾಗಿ ನಿಂತು, ನಿಮ್ಮ ಸ್ನೇಹ ಸೌಭಾಗ್ಯವನ್ನು ನಮಗೆ ದಯಪಾಲಿಸಬೇಕು."

"ಪ್ರಭು, ಅಲ್ಪನ ಮೇಲೆ ತಮ್ಮ ಕೃಪೆ ಅನಂತವಾಯಿತು. ನಾನು ತಮ್ಮ ಕೃಪೆಗೆ ಎಳ್ಳಷ್ಟೂ ಬಾಧ್ಯನಲ್ಲ. ಆದರೆ ತಮ್ಮ ಅನುಗ್ರಹವನ್ನು ತಿರಸ್ಕರಿಸಲಾರೆ ! ತಮ್ಮ ಸೇವೆಯನ್ನು ನನ್ನ ಭಾಗ್ಯ ವಿಶೇಷವೆಂದು ತಿಳಿಯುತ್ತೇನೆ !"

ಎಂದು ಹೇಳಿ ಕೃತಜ್ಞತೆಯ ಕಣ್ಣೀರು ಮಿಡಿದ ಮುಮ್ಮಡಿಸಿಂಗ ತನ್ನ ಎಲ್ಲ ಕಷ್ಟಗಳಿಗೆ ಕೊನೆಬಂದಿತೆಂದು.

ತನ್ನ ಪ್ರಾಣ ಉಳಿಸಿದ ಮುಮ್ಮಡಿಸಿಂಗನಿಗೆ ತಾನು ಕಿಂಚಿತ್ತಾದರೂ ಸಹಾಯ ಮಾಡಲು ಸಾಧ್ಯವಾದುದಕ್ಕೆ ರಾಮದೇವರಾಯನೂ ಸಮಾಧಾನದ ನಿಟ್ಟುಸಿರು ಬಿಟ್ಟನು.

# ೧

ಕ್ರಿ. ಶ. ೧೫೯೦ ನೇ ಸಂವತ್ಸರದಲ್ಲಿ ಇಂದಿನ ತುಮಕೂರು ಜಿಲ್ಲೆಯ ನಿಡುಗಲ್ಲು ಎಂಬ ರಾಜ್ಯವು ಚೋಳವಂಶದ ಅರಸನೊಬ್ಬನಿಗೆ ಸೇರಿತ್ತು. ಅವನಿಗೆ ಮುಮ್ಮಡಿಸಿಂಗನು ಆಶ್ರಿತ ದೊರೆಯಾಗಿ ತುಂಗಭದ್ರ ಮತ್ತು ವೇದವತಿ ನದಿಗಳ ನಡುವಣ ಮಲೆ ರಾಜ್ಯವನ್ನು ಆಳುತ್ತಿದ್ದನು. ಅದಕ್ಕೆ ತೋರಣವೆಂದು ಹೆಸರಿತ್ತು. ಮುಮ್ಮಡಿಸಿಂಗನು ತೋರಣದ ಅಧಿಪತಿಯಾದಮೇಲೆ ಅಕ್ಕಪಕ್ಕದ ಅನೇಕ ಪಾಳೆಯಗಾರರನ್ನೂ ಗೆದ್ದು ಕಿರಾತರಿಗೆ ಒಡೆಯನಾದನು. ವೀರಕಸ್ತೂರಿ ನಾಯಕನೆಂಬ ವೀರನು ತೋರಣದ ಸಂಸ್ಥಾಪಕನಾಗಿದ್ದನು. ಅವನು ಪೂವಲವೆಂಬ ಬೇಡರ ಕುಲಕ್ಕೆ ಸೇರಿದ್ದನು. ಬೇಡರಿಗೆ ಕಿರಾತರೆಂದೂ ವ್ಯಾಧರೆಂದೂ, ಪುಳಿಂದರೆಂದೂ, ನಿಷಾಧರೆಂದೂ ಕರೆಯುವರು. ಇವರಿಗೆ ವಾಲ್ಮೀಕಿವಂಶದವರೆಂಬ ಬೇರೆ ಹೆಸರೂ ಇದೆ. ಇಂತಹ ಸುಪ್ರಸಿದ್ದ ಬೇಡರ ವಂಶದಲ್ಲಿ ಕಾಮುಗೇತಿ ಮತ್ತು ಕಣ್ಣಪ್ಪಯ್ಯ ಎಂಬ ಮಹಾ ಪುರುಷರು ಹುಟ್ಟಿ ತಮ್ಮ ವಂಶದ ಕೀರ್ತಿಯನ್ನು ದಿಗಂತ ವಿಶ್ರಾಂತಗೊಳಿಸಿದರು. ಅವರ ನಂತರ ಈ ಎರಡು ಕುಲಗಳು ಇಪ್ಪತ್ತೆಂಟು ಶಾಖೆಗಳಾಗಿ ಒಡೆಯಿತು. ಅವುಗಳಿಗೆ ಬೆಡಗುಗಳೆಂದು ಕರೆಯುವರು. ಇಂತಹ ಬೆಡಗುಗಳಲ್ಲಿ ಮುಮ್ಮಡಿಸಿಂಗನು ಹುಟ್ಟಿದ್ದ ಪೂವಾಲಿ ಕುಲವೂ ಒಂದು. ಈ ಕುಲದ ಅರಸರು ಕಾಲಾನುಕ್ರಮದಲ್ಲಿ ಹರಪನಹಳ್ಳಿ, ತರೀಕೆರೆ, ಗುಡಿಕೋಟೆ ಮುಂತಾದ ಪಾಳೆಪಟ್ಟುಗಳನ್ನು ಆಳಿ ಕೀರ್ತಿಶೇಷರಾದರು.

ಮುಮ್ಮಡಿಸಿಂಗನು ತೋರಣದ ಗದ್ದುಗೆಯನ್ನು ಏರುವ ವೇಳೆಗೆ ಅದನ್ನು ಮೂವರು ದೊರೆಗಳು ಆಳಿದ್ದರು. ನಾಲ್ಕನೆಯ ದೊರೆಯೇ ಮುಮ್ಮಡಿಸಿಂಗ. ಅವನು ಸಿಂಹಾಸನವನ್ನೇರಿದ ಅತ್ಯಲ್ಪಕಾಲದಲ್ಲೇ ಜ್ಞಾತಿ ಕಲಹದ ಬೇಗೆಯಿಂದ ರಾಜ್ಯ ಕೋಶಗಳನ್ನು ತೊರೆದು ದೇಶಾಂತರ ಹೋಗಬೇಕಾದ ಪ್ರಸಂಗ ಬಂದಿತ್ತು.

ಮುಮ್ಮಡಿಸಿಂಗನ ತಂದೆ ಇಮ್ಮಡಿಸಿಂಗನಿಗೆ ಇಬ್ಬರು ಪತ್ನಿಯರು ಇದ್ದರು. ಇವರಲ್ಲಿ ಪಟ್ಟದ ರಾಣಿಯಾದ ಕೇತಲ ದೇವಿಯ ಹೊಟ್ಟೆಯಲ್ಲಿ ಮುಮ್ಮಡಿಸಿಂಗನು ಹುಟ್ಟಿದನು. ಕಿರಿಯ ರಾಣಿ ಓಬಲದೇವಿಯಲ್ಲಿ ಮಾರ ಸಿಂಗನೆಂಬ ಮಗನು ಹುಟ್ಟಿದ್ದನು. ಈ ಮಲಸಹೋದರರಿಗೆ ಬಾಲ್ಯ ದಿಂದಲೂ ಒಂದು ಬಗೆಯ ಮತ್ಸರ ಬೆಳೆದು ಬಂದಿತ್ತು. ತಂದೆಯ ಮರಣದ ನಂತರ ಹಿರಿಯ ಮಗನಾದ ಮುಮ್ಮಡಿಸಿಂಗನ ಕೈಗೆ ರಾಜ್ಯ ಸೂತ್ರಗಳು ಹೋದದ್ದು ಮಾರಸಿಂಗನಿಗೆ ಸಹಿಸದಾಯಿತು. ಆದರೆ ಪ್ರಜಾನುರಾಗಿಯೂ, ರಾಜ್ಯಕ್ಕೆ ನಿಜವಾದ ಹಕ್ಕುದಾರನೂ ಆಗಿದ್ದ ಮುಮ್ಮಡಿಸಿಂಗನ ಮೇಲೆ ಮಾರ ಸಿಂಗನು ಕೈಮಾಡುವಂತೆ ಇರಲಿಲ್ಲ. ಅವನು ತನ್ನ ದ್ವೇಷವನ್ನು ಹೊಟ್ಟೆ ಯೊಳಗೆ ಇಟ್ಟುಕೊಂಡು ಮೇಲೆ ವಿಶ್ವಾಸ ನಟಿಸುತ್ತಿದ್ದನು. ಕಾಲಾನಂತರ ದಲ್ಲಿ ಅವನ ಸುತ್ತ ದ್ರೋಹಿಗಳ ಗುಂಪೊಂದು ಬೆಳೆಯಿತು. ಮಾರಸಿಂಗನು ಆ ಸ್ವಾರ್ಥಸಾದಕರ ಮಾತು ಕೇಳಿಕೊಂಡು ಮುಮ್ಮಡಿಸಿಂಗನನ್ನು ಅಧಿಕಾರ ದಿಂದ ತಳ್ಳಿ ತಾನೇ ಸಿಂಹಾಸನವನ್ನು ಆಕ್ರಮಿಸಿಕೊಳ್ಳಲು ಸೂಕ್ತ ಸಮಯ ಕ್ಕಾಗಿ ಕಾಯುತ್ತಿದ್ದನು. ಅವನು ನಿರೀಕ್ಷಿಸುತ್ತಿದ್ದ ಅವಕಾಶವು ತಾನಾಗಿ ಒದಗಿ ಬಂದಿತ್ತು.

ಮುಮ್ಮಡಿಸಿಂಗನು ನಲವತ್ತರ ಹರೆಯವನ್ನು ಸಮೀಪಿಸಿದ್ದರೂ ಇನ್ನೂ ಅವನಿಗೆ ಪುತ್ರಸಂತಾನವಾಗಿರಲಿಲ್ಲ. ಅವನಿಗೆ ತಕ್ಕ ಪತ್ನಿ ಮಂಚಲೆ. ಮಂಚಲ ದೇವಿಗೆ ತಾನು ಮಹಾ ರಾಣಿಯಾದರೂ ತಾಯಿಯಾಗುವಭಾಗ್ಯ ಪಡೆಯದೆ ಇದ್ದುದಕ್ಕಾಗಿ ಕೊರಗು ಇದ್ದೇ ಇತ್ತು. ಇಂದು ನಾಳೆ ತನಗೆ ಮಕ್ಕಳಾಗ ಬಹುದೆಂದು ದಿನಗಳನ್ನು ನೂಕಿಕೊಂಡು ಬಂದಿದ್ದಳು. ಅವಳಿಗೆ ವಯಸ್ಸು ಮುವತ್ತಕ್ಕೆ ಸಮೀಪಿಸಿದ್ದರೂ ಇನ್ನೂ ಮಕ್ಕಳಾಗುವ ಸೂಚನೆ ಕಂಡಿರಲಿಲ್ಲ. ಇದರಿಂದ ಅವಳಿಗೆ ತುಂಬಾ ನಿರಾಶೆಯುಂಟಾಗಿತ್ತು. ಈ ಜನ್ಮದಲ್ಲಿ ತನಗೆ ಸಂತಾನ ಭಾಗ್ಯವಿಲ್ಲವೇನೋ ಎಂಬ ಹತಾಶ ಭಾವನೆಯು ಬಂದಿತ್ತು.

ಆದರೆ ಹೃದಯದಲ್ಲಿ ಅಷ್ಟೇ ದುಃಖವನ್ನು ಹುದುಗಿಸಿಕೊಂಡಿದ್ದರೂ ಹತಾಶ ಪತ್ನಿಯನ್ನು ಮುಮ್ಮಡಿಸಿಂಗನೇ ಸಮಾಧಾನ ಮಾಡುತ್ತಿದ್ದನು : "ದೇವರು ಕಣ್ತೆರೆದು ನೋಡಿದರೆ ಕೊರಡು ಕೊನರುವಾಗ ತಮಗೆ ಸಂತಾನವಾಗದೇ ಹೋದಿತೆ ? ನಾವು ಮಾಡಿದ ದಾನಧರ್ಮಗಳು ನಿಷ್ಫಲವಾದೀತೆ ?" ಎಂದು

ಪತ್ನಿಯನ್ನು ಸಮಾಧಾನ ಮಾಡುತ್ತಿದ್ದನು. ಆದರೆ ಅವರು ಮಾಡಿದ ಪುಣ್ಯ ಕಾರ್ಯಗಳೂ, ತೀರ್ಥಯಾತ್ರೆಗಳೂ-ವ್ರತನಿಯಮಗಳೂ ನಿಷ್ಪ್ರಯೋಜನ ವೆಂದು ತಿಳಿದಾಗ ಭಗ್ನಮನೋರಥಳಾದ ಮುಂಚಲದೇವಿ ಅದೇ ಕೊರಗಿ ನಿಂದ ಹಾಸಿಗೆ ಹಿಡಿದಳು. 'ಆ ಪುಣ್ಯ ನನಗೆ ಇಲ್ಲ-ನನ್ನಿಂದ ಮುಮ್ಮಡಿ ಸಿಂಗನ ವಂಶ ನಿಲ್ಲಬಾರದು' ಎಂದು ಆಲೋಚಿಸಿ, ಕಡೆಗೆ ಪತಿಯ ಮುಂದೆ ಈ ಮಾತನ್ನು ತೆಗೆದಳು:

"ಪ್ರಭು, ನಿಮ್ಮನ್ನು ಕೈಹಿಡಿದು ನಾನು ಭಾಗ್ಯಶಾಲಿಯಾದೆ. ಆದರೆ ನನ್ನಂತಹ ನಿರ್ಭಾಗ್ಯಳ ಕೈಹಿಡಿದು ನೀವು ಮಾತ್ರ ಭಾಗ್ಯಹೀನರಾದಿರಿ. ತಮ್ಮಲ್ಲಿ ನನ್ನದೊಂದು ಕೋರಿಕೆ ಇದೆ. ಅದನ್ನು ನಡೆಸಿಕೊಡಬೇಕು!"

ಎಂದು ದೈನ್ಯದಿಂದ ಪ್ರಾರ್ಥಿಸಿದಳು.

"ಏನದು ಮುಂಚಲ? ನನ್ನೊಡನೆ ಹೇಳಲು ಇಷ್ಟು ಸಂಕೋಚವೆ?"

"ಪ್ರಭು, ನನ್ನ ಕೋರಿಕೆಯನ್ನು ತಾವು ಎಂದೂ ತಿರಸ್ಕರಿಸಿಲ್ಲ-ಈಗಲೂ ತಾವು ತಿರಸ್ಕರಿಸಬಾರದು....ಈ ಮಾತನ್ನು ನಾನು ತಮಗೆ ಈ ಮೊದಲೇ ಹೇಳ ಬೇಕೆಂದಿದ್ದೆ. ಆದರೆ ನೀವು ಅವಕಾಶ ಕೊಡಲಿಲ್ಲ. ಈಗಲಾದರೂ ನನ್ನ ಮಾತನ್ನು ಕೇಳಿ. ನನಗೆ ಈ ಜನ್ಮದಲ್ಲಿ ಪುತ್ರಸಂತಾನವಿಲ್ಲ. ನನ್ನಿಂದ ತಮ್ಮ ವಂಶನಿಲ್ಲಬಾರದು. ಪವಿತ್ರವಾದ ಪೂವಾಲಿವಂಶದ ಕುಡಿ ನನ್ನಿಂದ ಕರಟಾಗಬಾರದು. ನೀವು ನನ್ನ ಸಲುವಾಗಿ ಇನ್ನೊಂದು ವಿವಾಹವಾಗಬೇಕು. ಆ ಪುಣ್ಯವಂತೆಯ ದೆಸೆಯಿಂದಲಾದರೂ ಬರಿದಾದ ಮನೆ ತುಂಬಿ ಕೊಳ್ಳಲಿ."

'ಮುಂಚಲೆ, ನೀನು ಏನೂ ತಿಳಿಯದ ಅಜ್ಞೆಯಲ್ಲ. ದೇವರು ನಮಗೆ ಎಲ್ಲ ಭಾಗ್ಯವನ್ನು ಕೊಟ್ಟು ಈ ಕೊರಗನ್ನು ತಂದಿಟ್ಟಿದ್ದಾನೆಂದರೆ ಯಾರು ನಂಬುತ್ತಾರೆ. ನನಗೆ ಮೇಲಿಂದ ಮೇಲೆ ಅನಿಸುತ್ತಿದೆ: ನಾವು ಮಾಡಿದ ದಾನ ಧರ್ಮಗಳ ಫಲ ವ್ಯರ್ಥವಾಗುವುದಿಲ್ಲ. ಆದರೆ ಫಲ ದೊರೆಯುವುದು ನಿಧಾನ ವಾಗಿದೆ, ಅಷ್ಟೇ. ನಾವು ದುಡುಕದೆ ಕಾಯಬೇಕು ಮುಂಚಲೆ. ಕರ್ಮ ಫಲವು ಹೂ ಬಿಟ್ಟು ಕಾಯಾಗಿ ಹಣ್ಣಾಗುವವರೆಗೆ ಕಾಯಬೇಕು. ಅಲ್ಲಿಯವರೆಗೆ ನಾವು ಚಿತ್ತಸಂಯಮದಿಂದ ಇರಬೇಕು. ನಂಬಿದ ದೇವರು ನಮ್ಮ ಕೈಬಿಡುವು ದಿಲ್ಲವೆಂಬ ಭರವಸೆ ನನಗೆ ಇದೆ.'

"ಪ್ರಭು, ಆ ಭರವಸೆ–ನಂಬಿಕೆಗಳು ನನಗೆ ಈಗ ಇಲ್ಲವಾಗಿವೆ. ನಾವು ಮಾಡಿದ ಯಾವ ತಪ್ಪಗೆ ಈ ಶಿಕ್ಷೆ? ನನಗಿಂತಲೂ ಕಾಡಿನ ಮೃಗಪಕ್ಷಿಗಳು ಲೇಸು. ಸಂತಾನಭಾಗ್ಯ ಪಡೆದಿರುತ್ತವೆ. ನಾನು ನಿರ್ಭಾಗ್ಯೆ, ನನ್ನಿಂದ ತಮಗೆ ಆ ಭಾಗ್ಯವಿಲ್ಲ!"

"ಇದೆ, ಮಂಚಲೆ, ನನ್ನ ಮಾತನ್ನು ಕೇಳು. ರಾಜ ಜ್ಯೋತಿಷಿಗಳು ಮೇಲಿಂದ ಮೇಲೆ ಹೇಳಿದ್ದಾರೆ. ನನಗೆ ಈ ಜನ್ಮದಲ್ಲಿ–ನಿನ್ನಿಂದಲೇ ಪುತ್ರ ಸಂತಾನ ಭಾಗ್ಯವಿದೆಯಂತೆ. ನಾವು ಈಗ ಅನನ್ಯಭಕ್ತಿಯಿಂದ ಕಂಪಿಲನಾಥ ನನ್ನು ಸೇವಿಸಿದರೆ, ನಮ್ಮ ಸಮಸ್ತ ಪಾಪಗಳು ಪರಿಹಾರವಾಗಿ, ಖಂಡಿತ ವಾಗಿಯೂ ನಮ್ಮ ಇಷ್ಟಾರ್ಥ ಸಿದ್ಧಿಸುತ್ತದೆ. ನೀನು ಅಧೀರಳಾಗಬೇಡ" ಎಂದು ಹೇಳಿದ ಮೇಲೆ ಮಂಚಲದೇವಿಯ ಬಾಳ್ಗತ್ತಲೆಯಲ್ಲಿ ಒಂದು ಆಶಾಕಿರಣ ಮೂಡಿತು.

ದಂಪತಿಗಳಿಬ್ಬರೂ ಅನನ್ಯಭಕ್ತಿಯಿಂದ ಕಂಪಿಲನಾಥನನ್ನು ಸೇವಿಸಿ ಬರಲು ತೋರಣವನ್ನು ಬಿಟ್ಟುಹೋದರು.

ಅವರು ಕಂಪಿಲಕ್ಕೆ ಹೋದ ಸಮಯವನ್ನು ನೋಡಿಕೊಂಡು ಮಾರ ಸಿಂಗನು ಮುಮ್ಮಡಿಸಿಂಗನಿಗೆ ದ್ರೋಹ ಬಗೆದನು. ಅವನು ಮುಮ್ಮಡಿಸಿಂಗನ ಬೆಂಬಲಿಗರನ್ನೂ, ಪಕ್ಷಪಾತಿಗಳನ್ನೂ, ಮೋಸದಿಂದ ಕೊಲ್ಲಿಸಿದನು. ತನ್ನನ್ನು ಪ್ರತಿಭಟಿಸುವವರನ್ನು ಸೆರೆಯಲ್ಲಿಟ್ಟು, ಸಿಂಹಾಸನವನ್ನು ಆಕ್ರಮಿಸಿಕೊಂಡು ತಾನೇ ದೊರೆ ಎಂದು ಘೋಷಿಸಿದನು. ಮುಮ್ಮಡಿಸಿಂಗನನ್ನು ಕಂಪಿಲದಲ್ಲಿ ಕೊಲೆಮಾಡಲು ಕೊಲೆಗಡುಕರನ್ನು ಕಳುಹಿಸಿಕೊಟ್ಟನು. ಅವನು ಪ್ರಾಣದಿಂದ ಇರುವವರೆಗೆ, ಸಿಂಹಾಸನ ತನಗೆ ಭದ್ರವಿಲ್ಲವೆಂದು ಅವನಿಗೆ ತಿಳಿದಿತ್ತು. ಅಂತಲೇ ಮುಮ್ಮಡಿಸಿಂಗನ ಕಗ್ಗೊಲೆಗೆ ಸಂಚುಮಾಡಿದನು. ಆದರೆ ಮುಮ್ಮಡಿಸಿಂಗನ ಸುದೈವದಿಂದ ಈ ಸುದ್ದಿ ಹೇಗೋ ಬೈಚನೆಂಬ ಸೇವಕನಿಗೆ ತಿಳಿಯಿತು. ಅವನು ಮುಮ್ಮಡಿಸಿಂಗನ ಅಭಿಮಾನಿಯಾಗಿದ್ದ ಸ್ವಾಮಿನಿಷ್ಠ ಸೇವಕನಾಗಿದ್ದನು.

ಅವನು ಕಂಪಿಲಕ್ಕೆ ತೆರಳಿ, ನಡೆದ ಹತ್ಯಾಕಾಂಡವನ್ನೆಲ್ಲಾ ತಿಳಿಸಿ, ಅವರು ಕೂಡಲೇ ಅಲ್ಲಿಂದ ಓಡಿಹೋಗಿ ತಲೆತಪ್ಪಿಸಿಕೊಳ್ಳಬೇಕೆಂದು ಸಲಹೆ ಮಾಡಿದನು. ಈ ಸಮಯದಲ್ಲಿ ಇದರ ಹೊರತು ಬೇರೆ ದಾರಿ ಕಾಣಿಸಲಿಲ್ಲ. ಜೀವವೊಂದು ಉಳಿದರೆ, ರಾಜ್ಯಕೋಶಗಳನ್ನು ಸಂಪಾದಿಸಿಕೊಳ್ಳಬಹುದೆಂದು

ಮುಮ್ಮಡಿಸಿಂಗನು ಪತ್ನಿಯೊಡನೆ ಹೊರಟನು. ತನಗೆ ಆಶ್ರಯ ಕೊಡಬಲ್ಲ ದೊರೆಯನ್ನು ಹುಡುಕಿಕೊಂಡು ಬರುತ್ತಿರುವಾಗ, ಅವನ ಭಾಗ್ಯದ ಬಾಗಿಲು ತೆರೆದಂತೆ ದೇವಗಿರಿಯ ಸಾಮ್ರಾಟ ರಾಮದೇವರಾಯನ ಸಖ್ಯಉಂಟಾಗಿತ್ತು. ರಾಮದೇವರಾಯನು ಮುಮ್ಮಡಿಸಿಂಗನಿಗೆ ಆಶ್ರಯವನ್ನು ಕೊಟ್ಟುದ್ದಲ್ಲದೆ ತನ್ನ ಸಮಸ್ತ ಸೈನ್ಯಕ್ಕೆ ಅವನನ್ನು ಮಹಾದಂಡನಾಯಕನಾಗಿ ನೇಮಿಸಿ ಬೆಳವಾಡಿರಾಜ್ಯಕ್ಕೆ ಸಾಮಂತನನ್ನಾಗಿ ಮಾಡಿದ್ದನು. ಆ ಮೂಲಕ ಅವನಿಂದಾದ ಸಹಾಯಕ್ಕೆ ಉಚಿತ ರೀತಿಯಲ್ಲಿ ಕೃತಜ್ಞತೆಯನ್ನು ತೋರಿಸಿದ್ದನು.

## ೨

ಕಂಪಿಲನಾಥನು ತನ್ನನ್ನು ಮೊರೆ ಹೊಕ್ಕವರನ್ನು ಕೈಬಿಡಿಲಿಲ್ಲ ಮುಮ್ಮಡಿಸಿಂಗನಿಗೆ ತಾತ್ಕಾಲಿಕವಾಗಿ ಸಂಕಷ್ಟಗಳು ಒದಗಿ, ರಾಜ್ಯ ಕೋಶಗಳು ಕೈ ಬಿಟ್ಟಿದ್ದರೂ ಅವನಿಗೆ ತಕ್ಕ ದೊರೆ ಅವನಿಗೆ ಆಶ್ರಯ ನೀಡಿದ್ದನು. ಅವನಿಗೆ ರಾಮದೇವರಾಯನ ಆಶ್ರಯ ದೊರತದ್ದು ದರಿದ್ರನಿಗೆ ಕಾಮಧೇನು-ಕಲ್ಪ ವೃಕ್ಷಗಳು ದೊರೆತಂತೆ ಆಗಿತ್ತು. ಈಗ ರಾಮದೇವರಾಯನ ಸಹಾಯದಿಂದ ತನ್ನ ರಾಜ್ಯವನ್ನು ಅಪಹರಿಸಿದ ದ್ರೋಹಿ ಮಾರಸಿಂಗನ ಮೇಲೆ ಸೇಡು ತೀರಿಸಿಕೊಳ್ಳ ಬಹುದಿತ್ತು ; ಕೈ ಬಿಟ್ಟ ಹೋಗಿದ್ದ ರಾಜ್ಯಕೋಶಗಳನ್ನು ಮರಳಿ ಪಡೆಯುಬಹುದಾಗಿತ್ತು.

ಕುಟುಂಬಿಕ ಜೀವನದಲ್ಲೂ ಮುಮ್ಮಡಿಸಿಂಗನಿಗೆ ನೆಮ್ಮದಿಯುಂಟಾಗಿತ್ತು. ಇದುವರೆಗೆ ಮಕ್ಕಳಿಲ್ಲದ ಚಿಂತೆಯಿಂದ ಕೊರಗಿ ಕೆಂಗೆಟ್ಟಿದ್ದ ಆ ದಂಪತಿಗಳಿಗೆ ಕಂಪಿಲನಾಥನ ಅನುಗ್ರಹ ಉಂಟಾಗಿತ್ತು. ಬಹು ಕಾಲದ ಮೇಲೆ ಮಂಚಲ ದೇವಿಯು ಗರ್ಭ ತಳೆದು, ಸಕಾಲದಲ್ಲಿ ತೇಜಸ್ವಿಯಾದ ಬಾಲಕನೊಬ್ಬನಿಗೆ ಜನ್ಮವಿತ್ತಳು. ಕಂಪಿಲನಾಥನ ಅನುಗ್ರಹದಿಂದ ಹುಟ್ಟಿದ ಆ ಮಗುವಿಗೆ ಕಂಪಿಲರಾಯನೆಂದು ಹೆಸರಿಟ್ಟರು. ಆ ಮುದ್ದು ಮಗುವಿನ ಆಟಪಾಟಗಳಲ್ಲಿ, ಬಾಲಲೀಲೆಗಳಲ್ಲಿ ಆ ದಂಪತಿಗಳು ತಮ್ಮ ಕೊರಗನ್ನು ಮರೆತರು.

ಪ್ರಥಮ ಬಾರಿಗೆ ಅವರಿಗೆ ಜೀವನದಲ್ಲಿ ಉತ್ಸಾಹ ತೃಪ್ತಿಗಳು ಉಂಟಾಗಿದ್ದವು. ಅವನು ರಾಮದೇವರಾಯನ ವಿಶ್ವಾಸಕ್ಕೆ ಪಾತ್ರನಾಗಿ, ದಿನ ದಿನಕ್ಕೂ ಆಸ್ಥಾನದಲ್ಲಿ ಅವನ ಪ್ರತಿಷ್ಠೆ ಬೆಳೆಯುತ್ತಾ ಹೋಗಿತ್ತು. ಇದು ಕೆಲವು ಆಸ್ಥಾನಿಕರಿಗೆ ಸಹಿಸದಾಯಿತು. ಅವರು ಮುಮ್ಮಡಿಸಿಂಗನ ವಿಷಯದಲ್ಲಿ ದೊರೆಯ ಮನಸ್ಸನ್ನು ಕೆಡಿಸಲು ಪ್ರಯತ್ನಿಸಿದರು. ಆದರೆ ಮುಮ್ಮಡಿಸಿಂಗನ ನಿಷ್ಠೆಯನ್ನು ಕಂಡ ರಾಮದೇವರಾಯನು ಯಾರ ಮಾತನ್ನು ಕೇಳಲಿಲ್ಲ. ಅವನಿಗೆ ಆಪತ್ತಿನಲ್ಲಿ ತನಗೆ ನೆರವಾದ ಮುಮ್ಮಡಿಸಿಂಗನು ಆಪ್ತಮಿತ್ರನೂ, ಬಂಧುವೂ, ಸೇವಕನೂ ಆಗಿದ್ದನು. ಅವನನ್ನು ತನ್ನ ಒಡಹುಟ್ಟಿದವನೆಂಬತೆ ದೊರೆಯು ನಡೆಸಿಕೊಳ್ಳುತ್ತಿದ್ದನು.

ಮುಮ್ಮಡಿಸಿಂಗನು ರಾಮದೇವರಾಯನ ಆಶ್ರಯವನ್ನು ಪಡೆದರೂ, ಕೈ ತಪ್ಪಿಹೋಗಿದ್ದ ರಾಜ್ಯಕೋಶಗಳನ್ನು ಪಡೆಯಲು ಅವನ ನೆರವನ್ನು ಯೋಚಿಸಲು ಅವನ ಸ್ವಾಭಿಮಾನ ಅಡ್ಡ ಬಂದಿತ್ತು. ತನ್ನ ವಿಷಯದಲ್ಲಿ ಇತರ ಆಸ್ಥಾನಿಕರ ಅಭಿಪ್ರಾಯವೇನೆಂಬುದು ಅವನಿಗೆ ತಿಳಿಯದೆ ಇರಲಿಲ್ಲ. ಹೀಗಿರುವಲ್ಲಿ ತಾನು ದೇವಗಿರಿಯ ಸೈನ್ಯವನ್ನು ಸ್ವಾರ್ಥ ಸಾಧನೆಗಾಗಿ ಬಳಸಿಕೊಳ್ಳುವುದು ಇಷ್ಟವಿರಲಿಲ್ಲ. ಸಾಧ್ಯವಾದರೆ ತಾನೇ ಒಂದು ಸೈನ್ಯವನ್ನು ಕಟ್ಟಿ ಸ್ವಸಾಮರ್ಥ್ಯ ಬಾಹು ಬಲಗಳಿಂದ ಕೈ ತಪ್ಪಿ ಹೋಗಿದ್ದ ರಾಜ್ಯ ಕೋಶಗಳನ್ನು ಪಡೆಯಬೇಕೆಂದು ಆಶಿಸಿದ್ದನು. ಅಂತಲೇ ಅವನು ತಾನಾಗಿ ರಾಮದೇವರಾಯನ ಮುಂದೆ ತನ್ನ ರಾಜ್ಯಕೋಶಗಳನ್ನು ದೊರಕಿಸಿ ಕೊಡಲು ಯೋಚಿಸಿರಲಿಲ್ಲ.

ಈಗ ದೈವ ಅವನಿಗೆ ಅನುಕೂಲವಾಗಿತ್ತು. ಅನಿರೀಕ್ಷಿತವಾಗಿ ರಾಮದೇವರಾಯನ ಆಶ್ರಯವು ತನಗೆ ದೊರತಂತೆ, ಅಷ್ಟೇ ಅನಿರೀಕ್ಷಿತವಾದ ಕಡೆಯಿಂದ ಅವನಿಗೆ ಸೈನ್ಯ ಕಟ್ಟಲು ಬೇಕಾಗುವ ಹಣವೂ ದೊರಕಿತು.

ಆ ಸಂಗತಿ ನಡೆದುದು ಹೇಗೆ.

ಒಂದು ದಿನ ಮುಮ್ಮಡಿಸಿಂಗನು ತನ್ನ ಕೆಲವೇ ಆಪ್ತ ಮಿತ್ರರೊಡನೆ ದೊರವಾಡಿಯ ಸಮೀಪದ ಅರಣ್ಯಕ್ಕೆ ಬೇಟೆಯಾಡಲು ಹೋಗಿದ್ದನು. ಮೊದಲಿನಿಂದಲೂ ಮುಮ್ಮಡಿಸಿಂಗನಿಗೆ ಬೇಟೆಯೆಂದರೆ ಪಂಚಪ್ರಣ. ಹುಟ್ಟು ಬೇಡನಾದ ಅವನಿಗೆ ಅರಣ್ಯದ ಸಾಹಸ ಜೀವನ ನಿಸರ್ಗದತ್ತವಾಗಿ ಒಗ್ಗಿ

ಬಂದಿತ್ತು. ಅವನು ಬೇಟೆಗೆ ಹೊರಟರೂ ಅರಣ್ಯದ ದುಷ್ಟ ಮೃಗಗಳನ್ನು ಕೊಲ್ಲುತ್ತಿದ್ದನೇ ಹೊರತು ಮಾಂಸದ ಆಸೆಯಿಂದ ಸಾಧು ಮೃಗಗಳನ್ನು ಕೊಲ್ಲುತ್ತಿರಲಿಲ್ಲ. ಎಷ್ಟೋ ಬಾರಿ ಅವನು ಕಾಡಿನಲ್ಲಿ ಸ್ವಚ್ಛಂದವಾಗಿ ತಿರುಗುವ ಅರಣ್ಯ ಜೀವಿಗಳನ್ನು ನೋಡುವ ಕುತೂಹಲದಿಂದ ಮೃಗಯಾವಿಹಾರ ಕೈ ಗೊಳ್ಳುತ್ತಿದ್ದನು. ಆ ಸಮಯದಲ್ಲಿ ಅವನು ಬೇಟೆಯನ್ನು ಮರೆತು, ಕಾಡಿನ ನಾನಾ ಜೀವಜಂತುಗಳೊಡನೆ ಬೆರತು, ಚಣಕಾಲ ತನ್ನ ನಿತ್ಯ ಜೀವನದ ಜಂಜಡವನ್ನು ಮರೆಯುತ್ತಿದ್ದನು. ಅವನ ನಿಸರ್ಗ ಪ್ರೇಮ, ಪ್ರಾಣಿದಯೆ, ಸ್ವಾತಂತ್ರ್ಯಪ್ರಿಯತೆ, ಸ್ವಾಭಿಮಾನ, ಸಾಹಸ ಪ್ರಿಯತೆಗಳು ಮಲೆನಾಡಿನ ಜೀವನ ಕಲಿಸಿ ಕೊಟ್ಟ ಪಾಠಗಳಾಗಿದ್ದವು.

ಮಲೆನಾಡಿನ ಹೃದಯದಂತಿದ್ದ ತೋರಣದಲ್ಲಿ ಹುಟ್ಟಿದ್ದ ಮುಮ್ಮಡಿ ಸಿಂಗನ ಬಾಲ್ಯದ ಬಹುಭಾಗ ಅರಣ್ಯದ ಮೃಗಗಳೊಡನೆ, ನಿಸರ್ಗದ ಸಹವಾಸದಲ್ಲಿ ಕಳೆದಿತ್ತು. ಅವನು ಸಹ್ಯಾದ್ರಿಯ ನಿಸರ್ಗ ಸೌಂದರ್ಯಕ್ಕೆ ಮಾರು ಹೋಗಿದ್ದನು. ಕಾಡಿನ ಒಂದೊಂದು ಪ್ರದೇಶವೂ ಅವನಿಗೆ ಆತ್ಮೀಯ ಗೆಳೆಯರಂತೆ ಚಿರಪರಿಚಿತವಾಗಿದ್ದವು. ಅವನಿಗೆ ವನ್ಯ ಜೀವನದ ಪ್ರತಿಯೊಂದು ಮುಖವೂ ಪರಿಚಿತವಾಗಿತ್ತು. ಪ್ರಕೃತಿಯ ಒಂದೊಂದು ನೋಟವೂ ಮೈನಿವಿರಿಸುತ್ತಿತ್ತು. ಅವನು ಭೂವ್ಯೋಕಾಶವನ್ನು ಒಂದು ಮಾಡುವಂತೆ ನಿಂತ ಭೀಮಸದೃಶವೃಕ್ಷಗಳನ್ನು ನೋಡಿದಾಗ ಮನ್ಮೂಕನಾಗಿ ನಿಲ್ಲುತ್ತಿದ್ದನು. ಬೆಟ್ಟದಿಂದ ಧುಮುಕಿ ಹರಿಯುವ ನಿರ್ಜರಣಿ ಬೆಡಗಿನ ತರುಣಿಯಂತೆ ಲಾಸ್ಯವಾಡುತ್ತಿರುವ ತರಂಗಿಣಿ, ಹಕ್ಕಿಗಳ ಉಲಿಹು, ಗಗನ ಚುಂಬತ ಗಿರಿಶಿಖರಗಳ ಮೇಲೆ, ಬಾನೆತ್ತರದಲ್ಲಿ ಗಾಳಿಯಲ್ಲಿ ತೇಲುವ ಬಿಳಿಯ ಉಣ್ಣೆಯಂತೆ ಕಾಣುವ ಬೆಳ್ಳಿ ಮೋಡ, ವರ್ಷಾಕಾಲದ ಮಳೆ, ಋತುಧರ್ಮಕ್ಕೆ ಅನುಗುಣವಾಗಿ ಬದಲಾಗುವ ಗಿರಿ ಮರಗಳು, ವಸಂತದ ಸೊಬಗು, ಮಾಗಿಯ ಚಳಿ, ಕಾರ್ಗಾಲದ ಕತ್ತಲೆ, ಮೊಡಗಳ ರಣಘರ್ಜನೆ–ಇವುಗಳನ್ನು ನೋಡಿದಷ್ಟೇ ಮತ್ತೆ ನೋಡುವ ತವಕ ಉಂಟಾಗುತ್ತಿತ್ತು. ಇವುಗಳ ಸಲುವಾಗಿ ಅವನು ಕಾಲ–ಅಕಾಲವೆಂದು ನೋಡದೆ ಮನಸ್ಸು ಬಂದಾಗ, ಮನಸ್ಸು ಬಂದ ಕಡೆ ಅಂಡಲೆಯುತ್ತಿದ್ದನು. ನಿಸರ್ಗದಶಿಶುವಾಗಿದ್ದ ಅವನಿಗೆ ದೇವಗಿರಿಯ ಜಯಲು ಸೀಮೆಯ ಜೀವನ ಬೇಸರತಂದಿತ್ತು. ಅದರ ಜಂಜಡವನ್ನು

ಮರೆಯಲು ಆ ದಿನ ಮೃಗಯಾವಿಹಾರಕ್ಕೆಂದು ಮಿತಪರಿವಾರ ದೊಡನೆ ಹೊರಟಿದ್ದನು.

ಮುಮ್ಮಡಿಸಿಂಗನು ದಿನವೆಲ್ಲಾ ಬೇಟೆಯಾಡಿ, ಒಂದೆರಡು ಹುಲಿಗಳನ್ನೂ, ನಾಲ್ಕಾರು ಕಣೆ ಹಂದಿಗಳನ್ನೂ ಕೊಂದು, ಆಯಾಸಗೊಂಡು, ಮಧ್ಯಾಹ್ನದ ಸಮಯದಲ್ಲಿ ತಣ್ಣಾದ ಸ್ಥಳವೊಂದನ್ನು ಹುಡುಕಿ ಗೆಡ್ಡೆ ಗೆಣಸುಗಳನ್ನು ತಿಂದು, ನೀರು ಕುಡಿದು ವಿಶ್ರಮಿಸಿಕೊಳ್ಳುತ್ತಾ ಮಲಗಿದ್ದನು. ಹಾಗೇ ಅವನಿಗೆ ಜೊಂಪು ಹತ್ತಿತು. ಆಗ ಅವನಿಗೆ ಒಂದು ವಿಚಿತ್ರ ಕನಸಾಯಿತು.

ಅವನು ತೋರಣದ ಅರಮನೆಯಲ್ಲಿ ಮಲಗಿದ್ದಾನೆ. ಗತಿಸಿದ ಅವನ ತಾಯಿ ಬಂದು ಅವನನ್ನು ತಟಕ್ಕನೆ ಎಚ್ಚರಿಸುತ್ತಾಳೆ. ಏಕೆಂದು ಮುಮ್ಮಡಿ ಸಿಂಗನು ಪ್ರಶ್ನಿಸುತ್ತಾನೆ. "ಮಗು ನಿನಗೆ ಇಲ್ಲಿ ವಿಪತ್ತು ಕಾದಿದೆ. ನೀನು ಇಲ್ಲಿಂದ ಹೊರಟುಹೋಗು" ಎಂದು ತಾಯಿ ಹೇಳುತ್ತಾಳೆ. "ಎಲ್ಲಿಗೆ ಹೋಗಲಿ ? ಏನುಮಾಡಲಿ" ಎಂದು ಅವನು ಕೇಳುತ್ತಾನೆ. "ನೀನು ಚಿಂತಿಸ ಬೇಡ. ಈ ಮೂರು ಮಡಿಕೆಗಳನ್ನು ತೆಗೆದು ಕೊಂಡು ಉತ್ತರ ದಿಕ್ಕಿಗೆ ಹೊರಡು ! ನಿನ್ನ ಭಾಗ್ಯದ ಬಾಗಿಲು ತೆರೆಯುತ್ತದೆ !" ಎನ್ನುತ್ತಾಳೆ ತಾಯಿ. ಅಷ್ಟರಲ್ಲಿ ಅರಮನೆಯಲ್ಲಿ ಗದ್ದಲವೇಳುತ್ತದೆ. ಏನೆಂದು ನೋಡುವುವರೊಳ ಗಾಗಿ ತಾನು ಮಾರಸಿಂಗನ ಬಂದಿಯಾಗಿದ್ದಾನೆ ! ತಾಯಿ ಕಣ್ಮರೆಯಾಗಿದ್ದಾಳೆ. "ಅಯ್ಯೋ...." ಎಂದು ಚೀರುತ್ತಾ ಮುಮ್ಮಡಿಸಿಂಗನು ಎದ್ದನು.

ಕಣ್ಣುಬಿಟ್ಟಾಗ ಇದುವರೆಗೆ ಆದುದು ಕನಸೆಂದು ತಿಳಿಯಿತು. ಬಹು ಕಾಲ ಎದೆ ಪುಟಿಸುತ್ತಿತ್ತು. ಈ ಸ್ವಪ್ನದ ಸಂಕೇತವೇನು ? ಒಳ್ಳೆಯದೋ ? ಕೆಟ್ಟದ್ದೇ ? ಎಂದು ಆಲೋಚಿಸುತ್ತ ಅವನು ಹಾಗೆಯೇ ಮಲಗಿದ್ದಾಗ ಅವನ ಗಮನವನ್ನು ಬಂದು ಅಳಿಲು ಸೆಳೆಯಿತು.

ಸಣ್ಣ ಅಳಿಲೊಂದು ಪೊದೆಯಿಂದ ಹೊರಗೆ ಬಂದು ಆವನ ಕಾಲಿನ ಬಳಿ ಲೊಚ ಗುಟ್ಟುತ್ತಿತ್ತು. ಅವನು ಅತ್ತ ತಿರುಗಿದಾಗ ಆಳಿಲು ಹೆದರಿ ಪೊದೆಗೆ ಓಡಿ ಅವಿತುಕೊಂಡಿತು. ಅವನು ಅನ್ಯಮನಸ್ಕನಾದಾಗ ಅದು ಮತ್ತೆ ಅವನ ಬಳಿಗೆ ಬಂದು ಲೊಚಗುಟ್ಟಿ ಮತ್ತೆ ಪೊದೆಗೆ ಓಡಿ ಹೋಯಿತು. ಹೀಗೆ ಮೂರು ನಾಲ್ಕು ಬಾರಿ ಮಾಡಿತು. ಇದನ್ನು ನೋಡಿ ಅಳಿಲಿನ ವರ್ತನೆಯಲ್ಲಿ ಯಾವುದೂ ವಿಶೇಷವಿದೆಯೆಂದು ಅದು ನಿರ್ದೇಶಿಸುತ್ತಿದ್ದ ಪೊದೆಯ ಬಳಿಗೆ

ಹೋದನು. ಅಲ್ಲಿ ಪರೀಕ್ಷಿಸಿದಾಗ, ನಾಲ್ಕಾರು ನಾಗರ ಕಲ್ಲುಗಳು ಅಸ್ತವ್ಯಸ್ತವಾಗಿ ಬಿದ್ದಿದುವುದನ್ನು ನೋಡಿದನು. ಅದು ಹಿಂದೊಮ್ಮೆ ನಾಗನ ಬನವಾಗಿರಬೇಕೆಂಬುದರ ಬಗ್ಗೆ ಸಂದೇಹ ಉಳಿಯಲಿಲ್ಲ.

ಆ ಪ್ರದೇಶದಲ್ಲಿ ಹಿಂದೆ ರಾಜಮನೆತನವೊಂದು ರಾಜ್ಯ ಕಟ್ಟಿ, ಆಳಿ, ಈಗ ನಾಮಾವಶೇಷವಾಗಿದ್ದುದು ಮುಮ್ಮಡಿಸಿಂಗನಿಗೆ ತಿಳಿದಿತ್ತು. ಅವರು ಹೂಳಿಟ್ಟ ನಿಧಿಯೊಂದು ಆ ಪ್ರದೇಶದಲ್ಲಿ ಇರಬಾರದೇಕೆ? ಇದನ್ನು ಅಳಿಲು ಪರ್ಯಾಯವಾಗಿ ಸೂಚಿಸುತ್ತಿರಬಾರದೇಕೆ? ಎಂದು ಭಾವಿಸಿದನು ಅವನು ಆ ನಾಗನ ಬನವನ್ನು ಚೆನ್ನಾಗಿ ಶೋಧಿಸಿ ಅನುಮಾನ ಬಂದ ಕಡೆ ನೆಲವನ್ನು ಅಗೆದನು. ಅದೇನು ಆಶ್ರರ್ಯ? ಅವನು ಅಗೆದ ಸ್ಥಳದಲ್ಲಿ ಒಂದು ಕೊಪ್ಪರಿಕೆಯ ತುಂಬಾ ಚಿನ್ನದ ನಾಣ್ಯಗಳು ಇದ್ದವು. ಅವನ್ನು ಕಂಡು ಅವನಿಗೆ ತನ್ನ ಕಣ್ಣನ್ನು ನಂಬಲಾಗಲಿಲ್ಲ. ಈ ನಿಧಿಯನ್ನು ತೋರಿಸಲೆಂದೇ ಆ ಅಳಿಲು ಅವನನ್ನು ಅಷ್ಟು ಬಾರಿ ಕೆರೆಯಿತೆ? ಅವನಿಗೆ ಅಳಿಲಿನ ಬಗ್ಗೆ ಕೃತಜ್ಞತೆಯುಂಟಾಗಿ ಅದನ್ನು ಅರಸಿದ. ಆದರೆ ಅದು ತನ್ನ ಕರ್ತವ್ಯವನ್ನು ನಿರ್ವಹಿಸಿ ನಿಷ್ಕಾಮಯೋಗಿಯಾತೆ ಕಣ್ಮರೆಯಾಗಿತ್ತು. ಮುಮ್ಮಡಿಸಿಂಗನು ಆ ನಿಧಿಯನ್ನು ಆ ಕ್ಷಣದಲ್ಲಿ ತನ್ನ ಸ್ವಾಧೀನಕ್ಕೆ ತೆಗೆದುಕೊಳ್ಳದೆ, ರಾಜಧಾನಿಗೆ ಹಿಂತಿರುಗಿದನು. ಒಂದು ಶುಭದಿನದಲ್ಲಿ ಉಚಿತ ಪೂಜೆ ಪುರಸ್ಕಾರ ಬಲಿಗಳಿಂದ ನಿಧಿಯ ಅಭಿಮಾನ ದೇವತೆಯನ್ನು ಒಲಿಸಿ ಕೊಂಡು ಅದನ್ನು ಸ್ವಾಧೀನಕ್ಕೆ ತೆಗೆದುಕೊಳ್ಳಬೇಕೆಂಬುದೇ ಅವನ ಆಶಯವಾಗಿತ್ತು.

ಮುಂದೆ ಮುಮ್ಮಡಿಸಿಂಗನು ದೀಕ್ಷಾಬದ್ಧನಾಗಿ ಆ ನಿಧಿಯನ್ನು ವಶಪಡಿಸಿಕೊಂಡು, ಅದರ ಕೊಂಚ ಭಾಗವನ್ನು ಬೇರೊಂದು ರಹಸ್ಯ ಸ್ಥಳದಲ್ಲಿ ಆಪದ್ಧನವಾಗಿ ಉಳಿಸಿದನು. ಉಳಿದ ಹಣದಲ್ಲಿ ಕೊಂಚ ಭಾಗವನ್ನೂ ಬ್ರಾಹ್ಮಣರಿಗೆ ದಾನವಾಗಿ ಕೊಟ್ಟನು. ಅನೇಕ ದೇವಾಲಯಗಳ ಜೀರ್ಣೋದ್ಧಾರ ಕೈಗೊಂಡನು; ಅನೇಕ ದತ್ತಿಗಳನ್ನು ಹಾಕಿಕೊಟ್ಟನು. ಹೀಗೆ ದೈವಾನುಗ್ರಹದಿಂದ ಪಡೆದ ಹಣವನ್ನು ನೀರಿನಂತೆ ವೆಚ್ಚಮಾಡಿ, ಅತ್ಯಲ್ಪ ಕಾಲದಲ್ಲಿಯೇ ಅವನು ತನ್ನದೇ ಆದ ಒಂದು ದೊಡ್ಡ ಸೈನ್ಯವನ್ನು ಕಟ್ಟಿದನು.

ಇದನ್ನೆಲ್ಲಾ ಕೇಳಿ-ನೋಡಿ ದೇವಗಿರಿಯ ಆಸ್ಥಾನದಲ್ಲಿದ್ದ ಹಲವರಿಗೆ ಮುಮ್ಮಡಿಸಿಂಗನ ಅಭ್ಯುದಯ ಸಹಿಸದಾಯಿತು. ಅವರು ಅಸೂಯೆಯಿಂದ

ಕುದಿದರು. ಅವನು ದಿನ ದಿನಕ್ಕೂ ಪ್ರಬಲನಾಗುತ್ತಿರುವುದನ್ನು ನೋಡಿ, ಸಹಿಸದೆ, ದೊರೆಗೂ ಈ ಬಗ್ಗೆ ದೂರು ಕೊಟ್ಟರು. 'ಮುಮ್ಮಡಿ ಸಿಂಗನು ಅರಮನೆಯ ರಾಜಭಂಡಾರವನ್ನೆಲ್ಲಾ ದೋಚಿ ತನ್ನದೇ ಆದ ಸೈನ್ಯ ಕಟ್ಟುತ್ತಿದ್ದಾನೆ. ಸಿಂಹಾಸನದ ಮೇಲೆ ಕಣ್ಣಿಟ್ಟಿದ್ದಾನೆ. ತನಗೆ ಆಶ್ರಯ ಕೊಟ್ಟ ದೊರೆ ರಾಮದೇವರಾಯನನ್ನು ಸಿಂಹಾಸನದಿಂದ ತಳ್ಳಿ ತಾನೇ ದೊರೆಯಾಗಲು ಸಂಚು ಮಾಡುತ್ತಿದ್ದಾನೆ' ಎಂದು ಆರೋಪಿಸಿದರು.

ಇವುಗಳನ್ನು ಕೇಳಿಯೂ ರಾಮದೇವರಾಯನು ಯಾವುದೇ ಕ್ರಮ ಕೈಗೊಳ್ಳದೆ ಇರುವುದನ್ನು ನೋಡಿ ಗುತ್ತಿಯ ಜಗದಾಪಿ ಗಾಂಗೇಯನೂ, ಚಿಮ್ಮತ್ತೂರಿನ ಮಹಾ ಸಾಮಂತ ಸಂಗಯ್ಯ ನಾಯಕನೂ, ಕೋಟಿಕೊಲ್ಲೂರು, ಬೇತೂರು, ಕೊಂಕಣಗಳ ಸಾಮಂತರೂ ದೊರೆಯ ಮೇಲೆ ತಿರುಗಿಬಿದ್ದರು. ಅವರಿಗೆ ಮುಮ್ಮಡಿಸಿಂಗನ ಏಳಿಗೆ ಕಣ್ಣು ಕಿಸಲಾಗಿತ್ತು. ಸಾಧ್ಯವಾದರೆ ತಾವೆಲ್ಲ ಒಂದಾಗಿ ಮುಮ್ಮಡಿಸಿಂಗನ ಬಲವನ್ನು ಮುರಿಯಬೇಕು, ಇಲ್ಲವಾದರೆ ತಾವು ಯಾದವರ ಅಧಿಕಾರದ ನೊಗವನ್ನು ಕಿತ್ತೆಸೆದು ಸ್ವತಂತ್ರ ಸಾಮ್ರಾಟರಾಗಿ ಮೆರೆಯಬೇಕು—ಎಂಬುದೇ ಅವರ ಅಭೀಷ್ಟವಾಗಿತ್ತು. ಹೀಗೆ ಸಾಮಂತರಲ್ಲಿ ಒಡಕು ಹುಟ್ಟಿ ಮುಮ್ಮಡಿಸಿಂಗನ ಪಕ್ಷದವರು ಕೆಲವರಾದರು. ಅವನ ವಿರೋಧಿಗಳು ಕೆಲವರಾದರು. ಈ ಸಮಯದಲ್ಲಿ ರಾಮದೇವರಾಯನು ಬೇರೆ ಉಪಾಯ ಕಾಣದೆ ವಾಸ್ತವ ಸಂಗತಿಯನ್ನು ತಿಳಿಯಲು, ಮುಮ್ಮಡಿಸಿಂಗನನ್ನು ತನ್ನ ಅಂತರಂಗಕ್ಕೆ ಕರೆಸಿಕೊಂಡನು:

"ಮುಮ್ಮಡಿಸಿಂಗರೇ, ನನ್ನ ಮಾತನ್ನು ನೀವು ಅನ್ಯಥಾ ಭಾವಿಸಬಾರದು. ನನಗೆ ತಮ್ಮ ನಿಷ್ಠೆಯಲ್ಲಿ ನಂಬಿಕೆ ಇದೆ. ತಮ್ಮನ್ನು ನಾನು ಸಹೋದರನಂತೆ ನಡೆಸಿಕೊಂಡಿದ್ದೇನೆ. ಆಸ್ಥಾನದ ಯಾವ ಸಾಮಂತರಿಗೂ ಕೊಡದೇ ಇರುವ ಗೌರವ ಕೊಟ್ಟಿದ್ದೇನೆ. ನೀವು ನನ್ನ ನಂಬಿಕೆಯನ್ನು ಇದುವರೆಗೆ ವ್ಯರ್ಥಗೊಳಿಸಿಲ್ಲ, ಇಂದು ನಿಮ್ಮ ವಿಷಯದಲ್ಲಿ ಅನೇಕ ವದಂತಿಗಳನ್ನು ಕೇಳುತ್ತಿದ್ದೇನೆ. ನಿಮ್ಮ ಮೇಲೆ ಅನೇಕ ದೋಷಾರೋಪಣೆಗಳು ಬಂದಿವೆ.

ಅವುಗಳನ್ನು ನಂಬುವುದಕ್ಕಿಂತ ಮೊದಲು ನಿಮ್ಮ ಬಾಯಿಂದ ವಾಸ್ತವ ಸಂಗತಿಯನ್ನು ತಿಳಿಯಬೇಕೆಂದಿದ್ದೇನೆ. ನನ್ನಲ್ಲಿ ಮರೆಮಾಚದೆ ನಡೆದಿರುವ ಸತ್ಯಸಂಗತಿಯನ್ನು ತಿಳಿಸಬೇಕು."—ಎಂದು ವಿನಯವಾಗಿ ಹೇಳಿದನು.

"ಪ್ರಭು, ತಮ್ಮ ಮಾತನ್ನು ಕೇಳಿ ನನಗೆ ಆಶ್ಚರ್ಯವಾಗಿದೆ" ನನ್ನ ಮೇಲೆ ಬಂದಿರುವ ದೂರುಗಳು ಏನೆಂದು ತಿಳಿದರೆ ಅವುಗಳ ಬಗ್ಗೆ ನನ್ನ ಬುದ್ಧಿಗೆ ತಿಳಿದ ಸಂಗತಿಗಳನ್ನು ಬಿನ್ನವಿಸಿಕೊಳ್ಳುತ್ತೇನೆ'' ಎಂದು ಮುಮ್ಮಡಿ ಸಿಂಗ ಹೇಳಿದನು.

"ನೀವು ನನ್ನ ವಿರುದ್ಧ ಕತ್ತಿ ಕಟ್ಟುತ್ತಿದ್ದೀರಂತೆ ಹೌದೆ? ನನ್ನ ಸಿಂಹಾಸನವನ್ನು ಅಪಹರಿಸಲು ನಿಮ್ಮದೇ ಆದ ಸೈನ್ಯವನ್ನು ಕಟ್ಟುತ್ತಿರುವಿರಂತೆ ಹೌದೆ?".

"ನಾನು ತಮ್ಮ ಬಾಯಿಂದ ಇಂತಹ ಮಾತು ಕೇಳಬೇಕಾದುದಕ್ಕೆ ವಿಷಾದಿಸುತ್ತೇನೆ ಪ್ರಭು! ಇವು ನನ್ನ ಕನಸು ಮನಸುಗಳಲ್ಲಿ ಸುಳಿಯದಿರುವ ವಿಚಾರಗಳು. ಮುಮ್ಮಡಿಸಿಂಗನೆಂದಿಗೂ ಅನ್ನವಿಟ್ಟ ದಣಿಗೆ ದ್ರೋಹ ಬಗೆಯುವನಲ್ಲ. ಈ ಮಾತು ಕಂಪಿಲನಾಥನ ಆಣೆಗೂ ನಿಜ."

"ನೀವು ನಿಮ್ಮದೇ ಆದ ಸೈನ್ಯವನ್ನು ಕಟ್ಟುತ್ತಿರುವಿರಂತೆ ಹೌದೆ?".

"ಹೌದು ಪ್ರಭು!''.

"ನೀವು ನಮ್ಮ ಸಕಲ ಸೈನ್ಯಗಳಿಗೆ ದಂಡನಾಯಕರಾಗಿದ್ದುಕೊಂಡು ಬೇರೆ ಸ್ವಂತ ಸೈನ್ಯದ ಅಗತ್ಯವೇನಿದೆ?''.

"ಪ್ರಭು, ತಮಗೆ ನನಗಾಗದವರು ಯಾರೋ ನನ್ನ ವಿಷಯದಲ್ಲಿ ತಪ್ಪು ಕಲ್ಪನೆ ಬರುವಂತೆ ತಿಳಿಸಿದ್ದಾರೆ. ನಾನು ಕಾಯಾ ವಾಚ ಮನಸಾ ತಮಗೆ ದ್ರೋಹ ಬಗೆದವನಲ್ಲ. ನಾನು ನನ್ನದೇ ಆದ ಸೈನ್ಯ ಕಟ್ಟಿರುವುದು ದಿಟ. ಆದರೆ ಅದನ್ನು ನನ್ನ ಸ್ವಂತ ವೆಚ್ಚದಿಂದ ಕಟ್ಟಿದ್ದೇನೆ. ಸ್ವಂತ ಉದ್ದಿಶ್ಯ ಸಾಧನೆಗಾಗಿ ಕಟ್ಟಿದ್ದೇನೆ".

"ಅದನ್ನು ಕಟ್ಟುವ ಅಗತ್ಯವಾದರೂ ಏನಿದೆ?".

"ಪ್ರಭು, ತಮ್ಮಲ್ಲೇಕೆ ಮುಚ್ಚು-ಮರೆ. ನಾನು ತಮ್ಮ ಬಳಿಗೆ ಆಶ್ರಯ ಬೇಡಿ ಬಂದ ಕಾರಣ ತಮಗೆ ತಿಳಿದಿದೆ. ನಾನು ತಮ್ಮ ಸಹಾಯದಿಂದ ಕಳೆದುಕೊಂಡ ರಾಜ್ಯಕೋಶಗಳನ್ನು ಮರಳಿ ಪಡೆಯುವ ಆಸೆ ಹೊಂದಿದ್ದೇನೆ. ಪ್ರಭುಗಳ ಕಿವಿಗೂ ಈ ಬಗ್ಗೆ ಒಂದೆರಡು ಬಾರಿ ಹಾಕಿದ್ದೆ. ಆದರೆ ಆಸ್ಥಾನದ

ಇನ್ನಿತರ ಪ್ರಮುಖರ ಮಾತು ಕೇಳಿಕೊಂಡೋ ಅಥವಾ ನನ್ನ ದುರಾದೃಷ್ಟ ದಿಂದಲೋ ಪ್ರಭುಗಳ ಚಿತ್ತಕ್ಕೆ ನನ್ನ ಮೊರೆ ಬರಲಿಲ್ಲ. ತಾವು ಈ ಬಗ್ಗೆ ನಿರ್ಲಕ್ಷ್ಯ ತೋರಿದಿರಿ. ನಾನು ನನ್ನ ಮಲಸಹೋದರನಿಂದ ನನಗಾದ ಅನ್ಯಾಯವನ್ನು ತಡೆದುಕೊಳ್ಳುವಂತೆ ಇರಲಿಲ್ಲ. ನಿಮ್ಮ ಸಹಾಯವನ್ನು ಯಾಚಿಸಲು ನನ್ನ ಸ್ವಾಭಿಮಾನ ಅಡ್ಡಬಂದಿತು. ನಾನು ಬೇರೇನು ಮಾಡ ಲಾಗದೆ ಸುಮ್ಮನೆ ಹೊಯ್ದಾಡಿದೆ. ಆ ಸಮಯದಲ್ಲಿ ದೈವ ನನ್ನ ನೆರವಿಗೆ ಬಂತು". ಎಂದು ಹೇಳಿ ತನಗೆ ನಿಧಿಯು ದೊರತ ಸುದ್ದಿಯನ್ನೂ, ಅದರ ಸಹಾಯದಿಂದ ತಾನು ಸಮರ್ಥವಾದ ಸೈನ್ಯವನ್ನು ಕಟ್ಟಿರುವ ಸಂಗತಿಯನ್ನು ಸವಿಸ್ತಾರವಾಗಿ ತಿಳಿಸಿದನು.

"ಪ್ರಭು, ನಾನು ಯಾವುದಾದರೂ ಅಪರಾಧ ಮಾಡಿದ್ದರೆ–ತಮಗೆ ನಿಧಿಯ ವಿಷಯದಲ್ಲಿ–ಕಟ್ಟುತ್ತಿರುವ ಸೈನ್ಯದ ವಿಷಯದಲ್ಲಿ ಈ ಮೊದಲೇ ವಿವರಗಳನ್ನು ತಿಳಿಸದೆ ಇದ್ದುದು. ಅದಕ್ಕಾಗಿ ನಾನು ತಮ್ಮ ಕ್ಷಮೆ ಬೇಡುತ್ತೇನೆ".

"ನೀವು ನಿಮ್ಮದೇ ಆದ ಸೈನ್ಯ ಕಟ್ಟುವುದರಲ್ಲಿ ಯಾವುದೇ ದುರುದ್ದೇಶ ವಿಲ್ಲದೆ ಇದ್ದಿದ್ದರೆ ಈ ಸಂಗತಿಯನ್ನು ನೀವು ಮೊದಲೇ ಏಕೆ ಹೇಳಲಿಲ್ಲ!"

"ಪ್ರಭು ಇದು ಎಂತಹ ತಪ್ಪು ಕಲ್ಪನೆಗೆ ಎಡೆಗೊಡುವುದೆಂದು ನಾನು ಇದುವರೆಗೆ ತಿಳಿದಿರಲಿಲ್ಲ. ಈಗ ನನ್ನ ಅಕಾರ್ಯಕ್ಕಾಗಿ ನನಗೇ ಪಶ್ಚಾತ್ತಾಪ ವಾಗಿದೆ. ಈ ವಿಷಯ ಇಷ್ಟು ಪ್ರಮಾದಕ್ಕೆ ಬರುವುದೆಂದು ನಾನು ತಿಳಿದಿರ ಲಿಲ್ಲ. ತಿಳಿದಿದ್ದರೆ ನಾನು ತಮ್ಮಲ್ಲಿ ಯಾವುದನ್ನೂ ಮರೆಮಾಚುತ್ತಿರಲಿಲ್ಲ".

"ತಮ್ಮ ಉದ್ದಿಶ್ಯ ಸಾಧುವಾಗಿದ್ದರೆ ಈ ಮೊದಲೇ ಈ ಸಂಗತಿಯನ್ನು ಏಕೆ ಹೇಳಲಿಲ್ಲ ?"

"ಪ್ರಭು, ನಾನು ಹೇಳುವುದನ್ನು ನಂಬುವುದೂ ಬಿಡುವುದೂ ತಮಗೆ ಸೇರಿದ್ದು. ನಾನು ಈ ಸಂಗತಿಯನ್ನು ತಿಳಿಸದೇ ಇದ್ದುದೇಕೆಂದರೆ, ತೋರಣದ ಮೇಲೆ ದಂಡೆತ್ತಿಹೋಗುವುದು ತಮಗೆ ಇಷ್ಟವಿಲ್ಲವೆಂದು ನಾನು ತಮ್ಮ ನಿರ್ಲಕ್ಷದಿಂದ ಊಹಿಸಿ ತಿಳಿದುಕೊಂಡೆ. ತಮಗೆ ಇಷ್ಟವಿಲ್ಲದ ಕೆಲಸಕ್ಕೆ ತಮ್ಮನ್ನು ಒತ್ತಾಯಪಡಿಸಲು ಇಚ್ಛಿಸದೆ. ನನ್ನ ದೇ ಆದ ಸೈನ್ಯ ಕಟ್ಟಲೆತ್ನಿಸಿದೆ. ಇದಕ್ಕೆ ಅಪಾರವಾದ ಹಣ ಆಗತ್ಯವಾಗಿತ್ತು. ಇಷ್ಟು ಹಣ ಎಲ್ಲಿಂದ ಬಂದಿ ತೆಂದು ತಮಗೆ ಸಂದೇಹ ಬಂದು, ನಿಧಿ ದೊರೆತ ಸಂಗತಿ ತಿಳಿದಾಗ ಅದನ್ನು

ಧರ್ಮಶಾಸ್ತ್ರದಂತೆ ತಮ್ಮ ರಾಜಭಂಡಾರಕ್ಕೆ ಸೇರಿಸಿಕೊಳ್ಳಬಹುದೆಂದು ಹೆದರಿದೆ. ತಮಗೆ ಸತ್ಯ ಹೇಳಲು ನನಗೆ ಇಷ್ಟವಿಲ್ಲ. ನಿಜವನ್ನು ಒಪ್ಪಿ ಕೊಂಡರೆ ನನ್ನ ಜೀವಿತದ ಪರಮ ಉದ್ದಿಶ್ಯ ಸಾಧನೆಗೆ ಭಂಗ ಬರುತ್ತಿತ್ತು. ಇದರಿಂದಾಗಿ ನಾನು ಈ ಸತ್ಯಸಂಗತಿಯನ್ನು ತಮಗೆ ತಿಳಿಸಲಿಲ್ಲ. ನಾನು ತಮ್ಮ ಉಪ್ಪು ತಿಂದು ತಮಗೆ ಯಾವುದೇ ಬಗೆಯ ದ್ರೋಹ ಬಗೆದಿದ್ದರೆ ಇದೊಂದೇ. ನನ್ನ ತಪ್ಪನ್ನು ತಾವು ಕ್ಷಮಿಸಬೇಕು."

"ನೀವು ಹೇಳುವುದೆಲ್ಲವೂ ಸತ್ಯಸಂಗತಿಗಳಾದರೆ ತಮ್ಮ ಬಗ್ಗೆ ನನಗೆ ಯಾವುದೇ ದುರಾಗ್ರಹವಿಲ್ಲ. ಆದರೂ ತಮ್ಮ ಈ ನಡವಳಿಕೆ ಎಷ್ಟೇ ಸದುದ್ದೇಶ ದಿಂದ ಪ್ರೇರಿತವಾಗಿದ್ದರೂ ನೋಡುವ ಜನಕ್ಕೆ ವಿರೋಧ ಅಭಿಪ್ರಾಯಕ್ಕೆ ಎಡೆ ಕೊಡುವಂತಹದು. ನೀವು ನಿಮ್ಮ ವ್ಯಯಕ್ತಿಕ ಕಾರಣಗಳಿಗಾಗಿ ಸೈನ್ಯ ಕಟ್ಟಿರಬ ಹುದು. ಆದರೆ ಜಗದಾಪಿ ಗಾಂಗೇಯ ಮುಂತಾದವರು ಇದನ್ನು ತಪ್ಪು ತಿಳಿದಿ ದ್ದಾರೆ. ಅವರಿಗೆ ಸತ್ಯಸಂಗತಿ ಅರಿವಾದರೆ ನಿಮ್ಮ ಬಗ್ಗೆ ಸಹಾನುಭೂತಿಯಿಂದ ನಡೆದು ಕೊಳ್ಳಬಹುದು. ತಾವು ಈ ಬಗ್ಗೆ ಎಲ್ಲ ಸಾಮಂತರೊಡನೆ ನೇರವಾದ ಮಾತುಕತೆ ನಡೆಸಬಾರದೇಕೆ ?"

"ಪ್ರಭು, ನನ್ನ ಮಾತನ್ನು ತಾವು ಅನ್ಯಥಾ ಭಾವಿಸಬಾರದು. ನಾನು ಇದುವರೆಗೆ ಆತ್ಮ ಒಪ್ಪದ ಕಾರ್ಯವನ್ನು ಮಾಡಿದವನಲ್ಲ. ನಾನು ಯಾರ ನ್ನಾದರೂ ಮೆಚ್ಚಿಸುವುದಿದ್ದರೆ ಅದು ದೈವವನ್ನು, ಪರದೈವಸ್ವರೂಪ ವಾಗಿರುವ ತಮ್ಮನ್ನು. ತಮಗೆ ನನ್ನ ಉದ್ದಿಶ್ಯದಲ್ಲಿ ಯಾವುದೇ ಬಗೆಯ ದ್ರೋಹ ಚಿಂತನೆ ಇಲ್ಲವೆಂದು ತಿಳಿದಿದೆ. ಇನ್ನು ಉಳಿದವರನ್ನು ಮೆಚ್ಚಿಸುವ ಕಾರ್ಯಕ್ಕೆ ನಾನು ಹೋಗುವವನಲ್ಲ."

"ಏಕೆ ?"

"ಪ್ರಭುಗಳು ನನ್ನ ಒರಟುತನವನ್ನು ಕ್ಷಮಿಸಬೇಕು. ನಾನು ಯೋಗ್ಯ ತೆಗೆ, ಗುಣಕ್ಕೆ ಗೌರವ ಕೊಡುವವನೇ ಹೊರತು ಸ್ವಪ್ರತಿಷ್ಠೆ ದುರಹಂಕಾರಗಳಿಗೆ ಬೆಲೆ ಕೊಡುವನಲ್ಲ. ನನ್ನ ವಿರುದ್ಧ ಈಗ ಸಂಚು ಮಾಡಿರುವವರೆಲ್ಲರೂ ನನ್ನ ಶತ್ರುಗಳು ಮಾತ್ರವಲ್ಲ–ದೇವನಗರಿಯ ಶತ್ರುಗಳು. ನಿಮ್ಮ ಉಪ್ಪು ತಿಂದು ಬೆಳೆದಿರುವ ಹಿತಶತ್ರುಗಳು. ಅವರಿಗೆ ಬೇಕಾಗಿರುವುದು ನನ್ನ ಪತನವಲ್ಲ– ನನ್ನ ಮೇಲೆ ಸೇಡು ಬಗೆಯುವುದಲ್ಲ. ಈಗಲೇ ಹೊಯ್ಸಳರೊಡನೆ ಕಾದಿ

ದುರ್ಬಲವಾಗುತ್ತಾ ನಡೆದಿರುವ ಸೇವುಣರ ಪತನ-ದೇವಗಿರಿ ಯಾದವರ ನಾಮಾವಶೇಷ! ಅದಕ್ಕಾಗಿ ಅವರು ಒಳಗೊಳಗೇ ನಮ್ಮೆಲ್ಲರ ವಿರುದ್ಧ **ಪಿತೂರಿ** ಮಾಡುತ್ತಿದ್ದಾರೆ. ಇದು ಎಂತಹ ಗಂಡಾಂತರವೆಂದು ಅವರು ಬಹುಶಃ ತಿಳಿದಿಲ್ಲ.

"ಇಂದು ದಕ್ಷಿಣಾಪಥದಲ್ಲಿ ಯವನರ ಹಾವಳಿ ಇಲ್ಲದೆ ಇದ್ದರೆ, ಹಿಂದೂ ಧರ್ಮ ಸಂಸ್ಕೃತಿಗಳಿಗೆ ಅವರಿಂದ ಗಂಡಾಂತರ ವಿಲ್ಲದೆ ಇದ್ದರೆ ಅದು ಉತ್ತರದ ಮೇರೆಯಲ್ಲಿರುವ ದೇವಗಿರಿ ಯಾದವರಿಂದ, ದಕ್ಷಿಣದ ಮೇರೆಯಲ್ಲಿರುವ ದ್ವಾರ ಸಮುದ್ರದ ಹೊಯ್ಸಳರಿಂದ ಎಂಬುದನ್ನು ಅವರು ಮರೆತಂತಿದೆ. ಇಂದು ಈ ದ್ರೋಹಿಗಳ ಸಂಚಿನಿಂದ ದೇವಗಿರಿಯ ಯಾದವರು ನಾಶವಾದರೆ, ಬಲಗುಂದಿ ದರೆ ನಾಳೆ ದಕ್ಷಿಣಾಪಥಕ್ಕೆ ಯವನರಿಂದ ಗಂಡಾಂತರ ಕಾದಿದೆ ಎಂಬುದನ್ನು ಆ ಸ್ವಾರ್ಥಿಗಳು ತಿಳಿದಂತೆ ಕಾಣುವುದಿಲ್ಲ. ಈಗ ನಾವು ಆದ್ರೋಹಿಗಳಿಗೆ ಸರಿ ಯಾದ ರೀತಿಯಲ್ಲಿ ಬುದ್ಧಿ ಕಲಿಸದಿದ್ದರೆ-ಯಾದವ ಸಾಮ್ರಾಜ್ಯವು ಕುಗ್ಗಿ ಕುಸಿಯುವುದು ಖಂಡಿತ. ಅದಕ್ಕೆ ತಾವು ಎಂದಿಗೂ ಅವಕಾಶಕೊಡಬಾರದು. ಮುಮ್ಮಡಿಸಿಂಗನಂತಹ ಸ್ವಾಮಿನಿಷ್ಠ, ಸ್ವಧರ್ಮ ನಿಷ್ಠ ಜನರು ಜೀವಂತ ವಿರುವವರೆಗೂ ದ್ರೋಹಿಗಳ ದುರಾಲೋಚನೆ ಕಾರ್ಯಗತವಾಗಲಾರದು! ಈ ಬಗ್ಗೆ ತಾವು ಅಂಜುವ ಕಾರಣವಿಲ್ಲ!"

"ಹಾಗಾದರೆ ನೀವು ಹೇಳುವುದಾದರೂ ಏನು?"

"ತಮ್ಮ ಮೇಲೆ ಕತ್ತಿ ಕಟ್ಟಿ-ಒಳಹೊಳಗೇ ದ್ರೋಹಚಿಂತನೆ ಮಾಡುತ್ತಿ ರುವ ದ್ರೋಹಿಗಳನ್ನು ಸೆರೆ ಹಿಡಿದು ತಂದು ತಮ್ಮ ಪದತಲದಲ್ಲಿ ಒಪ್ಪಿಸುವುದು ಸ್ವಾಮಿನಿಷ್ಠ ಸೇವಕರ ಪ್ರಥಮಕರ್ತವ್ಯವಾಗಿದೆ!"

"ಮೊದಲು ಅವರ ದ್ರೋಹಚಿಂತನೆ ಹೊರಬೀಳಲಿ, ಅನಂತರ ಅವರನ್ನು ಶಿಕ್ಷಿಸುವ ಮಾತು. ಅಂತಹ ಸಮಯ ಬಂದರೆ ನೀವು ಇದ್ದೀರಲ್ಲ" ಎಂದು ಹೇಳಿ ಮುಮ್ಮಡಿಸಿಂಗನನ್ನು ಸಮಾಧಾನದಿಂದಲೇ ಬೀಳ್ಕೊಟ್ಟನು.

ಮುಮ್ಮಡಿಸಿಂಗನ ಊಹೆ ಸುಳ್ಳಾಗಲಿಲ್ಲ. ಈ ಮಾತುಕತೆಯಾದ ಅಲ್ಪ ಕಾಲದಲ್ಲೇ ಗೂಢಚಾರರು ಗುತ್ತಿ, ಚಿಮ್ಮುತ್ತೂರು, ಕೋಟೆ ಕಲ್ಲೂರು, ಬೇತೂರು, ಕೊಂಕಣಗಳಿಂದ ಭಯಂಕರ ವಾರ್ತೆತಂದರು. ಅಲ್ಲಿನ ಅರಸರು ರಾಮದೇವರಾಯನ ವಿರುದ್ಧ ದಂಗೆ ಎದ್ದು ತಾವೇ ಸ್ವತಂತ್ರ ರಾಜರೆಂದು ಘೋಷಿಸಿ ಕೊಂಡಿದ್ದಾರೆಂದೂ, ಯಾದವರಿಗೆ ಸೇರಿದ್ದ ಪ್ರದೇಶಗಳನ್ನು

ಮುತ್ತಲು ಸೈನ್ಯ ಸಮೇತ ಹೊರಟಿದ್ದಾರೆಂದೂ, ಇವರಿಗೆ ಹೊಯ್ಸಳರು ಬೆಂಬಲಿಗರಾಗಿದ್ದಾರೆಂದೂ ತಿಳಿಸಿದರು. ಇದನ್ನು ಕೇಳಿ ರಾಮದೇವರಾಯನಿಗೆ ಮುಮ್ಮಡಿಸಿಂಗನ ಮಾತು ಅಕ್ಷರಶಃ ಸತ್ಯವೆನಿಸಿತು. ಕೂಡಲೇ ದ್ರೋಹಿಗಳ ವಿದ್ರೋಹವನ್ನು ಅಡಗಿಸಿ, ಅವರನ್ನು ಸೆರೆಹಿಡಿದು ತರಲು ಮುಮ್ಮಡಿಸಿಂಗನನ್ನು ಕಳುಹಿಸಿಕೊಟ್ಟನು.

## ೪

ಹೊಯ್ಸಳರಿಗೂ ದೇವಗಿರಿಯ ಯಾದವರಿಗೂ ಬಹು ಕಾಲದಿಂದಲೂ ಹಗೆತನವಿತ್ತು. ಅವರು ಒಂದು ರೀತಿಯಾಗಿ ಕುಲಶತ್ರುಗಳೇ ಆಗಿದ್ದರು. ಕ್ರಿ. ಶ. ೧೨ನೇ ಶತಮಾನದಲ್ಲಿ ಪ್ರಬಲರಾಗಿದ್ದ ಚಾಲುಕ್ಯರು ದಕ್ಷಿಣಾ ಪಥವನ್ನೆಲ್ಲಾ ತಮ್ಮ ಅಂಕೆಯೊಳಗೆ ಇಟ್ಟುಕೊಂಡು ಸಮರ್ಥರಾಗಿ ಆಳಿದರು. ಕಲ್ಯಾಣಿಯಲ್ಲಿ ಆಳಿದ ದೊರೆಗಳಲ್ಲೆಲ್ಲಾ ಆರನೆಯ ವಿಕ್ರಮಾದಿತ್ಯನು ಅತ್ಯಂತ ಪ್ರಸಿದ್ಧನಾದ ಸಾಮ್ರಾಟ. ಇವನು ತನ್ನ ಐವತ್ತು ಮೂರು ವರ್ಷಗಳ ಸುದೀರ್ಘವಾದ ಆಳ್ವಿಕೆಯಲ್ಲಿ ಗಂಗ, ಕದಂಬ, ಹೊಯ್ಸಳ ಚೋಳರನ್ನು ತನ್ನ ಆಶ್ರಿತರನ್ನಾಗಿ ಮಾಡಿಕೊಂಡು, ವಿಕ್ರಮಶಕೆಯನ್ನು ಮೆರೆದನು. ಇವನ ಕೀರ್ತಿಯನ್ನು ಕೇಳಿ ಕಾಶ್ಮೀರದ ಕವಿಚಕ್ರವರ್ತಿ ಬಿಲ್ಹಣನು ಇವನ ಆಶ್ರಯದಲ್ಲಿ ವಿಕ್ರಮಾಂಕ ಚರಿತ್ರೆಯನ್ನು ಬರೆದ್ದನು. ಆವನ ನಂತರ ಚಾಲುಕ್ಯರ ಬೀಳುಗಾಲಕ್ಕೆ ಆರಂಭವಾಯಿತು.

ಸೋಮೇಶ್ವರನ ಕಾಲದಲ್ಲಿ ಕಾಲಚೂರ್ಯವಂಶದ ಬಿಜ್ಜಳನು ಚಾಲುಕ್ಯರನ್ನು ಮೂಲೆಗೊತ್ತಿ ತಾನೇ ಸಾಮ್ರಾಟನಾಗಿ ಮೆರೆದನು. ಬಿಜ್ಜಳನ ನಂತರ ಬಂದ ಕಾಲಚೂರ್ಯ ದೊರೆಗಳು ಅಸಮರ್ಥರಾಗಿದ್ದುದರಿಂದ ಚಾಲುಕ್ಯ ಸಾಮ್ರಾಜ್ಯ ಛಿದ್ರ ಛಿದ್ರವಾಗಿ ಒಡೆದು ಹೋಯಿತು.

ಅದರ ಬಹುಭಾಗ ದೇವಗಿರಿಯ ಯಾದವರಿಗೂ–ಸೇವುಣರೆಂದು ಇನ್ನೊಂದು ಹೆಸರು–ದ್ವಾರ ಸಮುದ್ರದ ಹೊಯ್ಸಳರಿಗೂ ಸೇರಿಹೋಯಿತು.

ಇವರಿಬ್ಬರೂ ಅಷ್ಟಕ್ಕೇ ತೃಪ್ತಿ ಹೊಂದಿದ್ದರೆ ದಕ್ಷಿಣಾ ಪಥದ ಇತಿಹಾಸ ಬೇರೆ ಬಗೆಯಾಗುತ್ತಿತ್ತು. ಆದರೆ ಇವರು ರಾಜ್ಯ ಲೋಭದಿಂದ ಪರಸ್ಪರ ಹೋರಾಡಿ ದುರ್ಬಲರಾಗಿ ಯವನರಿಗೆ ಸುಲಭವಾಗಿ ಬಲಿಯಾದರು. ತಮ್ಮ ಸ್ವಾತಂತ್ರ್ಯವನ್ನು ಕಳೆದುಕೊಂಡುದಲ್ಲದೆ ದಕ್ಷಿಣಾಪಥದಲ್ಲಿ ಪರಕೀಯ ಆಕ್ರಮಣ ಚಿರವಾಗಿ ನಿಲ್ಲಲು ಅವಕಾಶ ಮಾಡಿಕೊಟ್ಟರು. ತಮಗೆ ತಿಳಿಯದಂತೆಯೇ ಹಿಂದೂ ಧರ್ಮ ಸಂಸ್ಕೃತಿಗಳಿಗೆ ಕೊಡಲಿ ಪೆಟ್ಟು ಹಾಕಿದರು.

ಸೇವುಣರು ಶ್ರೀಕೃಷ್ಣನವಂಶದವರು. ತಾವು ಯಾದವರೆಂದು ಅವರು ಹೆಮ್ಮೆಯಿಂದ ಹೇಳಿ ಕೊಳ್ಳುತ್ತಿದ್ದರು. ಕೃಷ್ಣನ ವಂಶದಲ್ಲಿ ಹುಟ್ಟಿದ ಸುಬಾಹು ಸೌಭದ್ರನ ಕಾಲದಲ್ಲಿ ಯಾದವರ ಸಾಮ್ರಾಜ್ಯವು ನಾಲ್ಕು ಭಾಗವಾಗಿ ಒಡೆದು ದಿಗ ಪ್ರಹಾರನೆಂಬುವನಿಗೆ ದಕ್ಷಿಣ ಭಾಗವು ದೊರಕಿತು. ನಾಸಿಕ ದೇವಗಿರಿ ವರೆಗಿನ ಈ ಎಲ್ಲಭಾಗವನ್ನು ಅವನ ನಂತರ ಇಪ್ಪತ್ತೆರಡು ದೊರೆಗಳು ಆಳಿದರು. ಅನಂತರ ಆಳಿದ ದೊರೆಯೇ ಭಿಲ್ಲಮ. ಇವನು ಹೊಯ್ಸಳ ಇಮ್ಮಡಿ ವೀರ ಬಲ್ಲಾಳನ ಸಮಕಾಲೀನ. ಯಾದವರೆಲ್ಲರಲ್ಲಾ ಅತ್ಯಂತ ಸಮರ್ಥನಾದ ದೊರೆ. ಭಿಲ್ಲಮನು ಮಾಳವ ಗುರ್ಜರ, ಓರಂಗಲ್ಲಿನ ತೆಲುಗು ಪ್ರದೇಶಗಳನ್ನು ಕಾಲಚೂರ್ಯರಿಂದ ಗೆದ್ದು, ಪುರಾತನ ನಗರ ತಗರವನ್ನು ರಾಜಧಾನಿಯಾಗಿ ಮಾಡಿಕೊಂಡು–ದೇವಗಿರಿ ಎಂದು ಹೆಸರಿಟ್ಟು ವೈಭವದಿಂದ ಆಳಿದನು. ಅವನ ನಂತರ ಜೈತ್ರ ಪಾಲ, ಸಿಂಘಣ, ಕೃಷ್ಣಕಾಂಧಾರ, ಮಾಧವ ಮುಂತಾದ ದೊರೆಗಳು ದೇವಗಿರಿಯಲ್ಲಿ ಆಳಿದರು. ಕೃಷ್ಣಕಾಂಧಾರನ ಮಗನೇ ರಾಮದೇವರಾಯ. ಅವನ ಚಿಕ್ಕಪ್ಪನಾದ ಮಾಧವನು ತನ್ನ ಮಗನಿಗೆ ಸಿಂಹಾಸನವನ್ನು ದೊರಕಿಸಿಕೊಡಲು ಪ್ರಯತ್ನಿಸಿದಾಗ, ಸ್ವಾಮಿನಿಷ್ಠ ಸೇವಕರು ರಾಮದೇವರಾಯನನ್ನು ಸಿಂಹಾಸನಕ್ಕೆ ತಂದಿದ್ದರು.

ಭಿಲ್ಲಮನ ಕಾಲದಿಂದಲೂ ಹೊಯ್ಸಳರಿಗೂ ಸೇವುಣರಿಗೂ ಯುದ್ಧಗಳು ನಡೆಯುತ್ತಿದ್ದರೂ ಯಾರೂ ಇನ್ನೊಬ್ಬರ ಮೇಲೆ ದೀರ್ಘಕಾಲ ಅಧಿಕಾರ ನಡೆಸಲು ಸಮರ್ಥರಾಗಿರಲಿಲ್ಲ. ಒಮ್ಮೆ ಅವರು–ಒಮ್ಮೆ ಇವರು–ಹೀಗೇ ಸೋಲು ಗೆಲುವುಗಳು ನಡೆದಿತ್ತು. ಯಾರೂ ಯಾರನ್ನು ಅಂತಿಮವಾಗಿ ಸೋಲಿಸಲು ಅಸಮರ್ಥರಾಗಿದ್ದರು.

ಇಮ್ಮಡಿ ವೀರಬಲ್ಲಾಳನು ತಂದೆಯನ್ನು ಮೂಲೆಗೊತ್ತಿ ಹೊಯ್ಸಳ ಸಿಂಹಾಸನವನ್ನು ಆಕ್ರಮಿಸಿಕೊಂಡ ತರುಣದಲ್ಲೇ ಕುಲಶತ್ರುಗಳಾಗಿದ್ದ ಸೇವುಣರ ಮೇಲೆ ಯುದ್ಧವನ್ನು ಘೋಷಿಸಿದನು. ಅಷ್ಟೇ ಅಲ್ಲ ಅವನು ಚೆಂಗಾಳ್ವರ ಮಾಧವನ ಮೇಲೂ ಉಚ್ಚಂಗಿಯ ಪಾಂಡ್ಯರ ಮೇಲೂ, ಕಾಲಚೂರ್ಯರ ಸಂತನ ಮೇಲೂ ದಂಡೆತ್ತಿ ಹೋಗಿ ಅವರ ರಾಜ್ಯಗಳನ್ನು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಂಡನು. ಇದನ್ನು ನೋಡಿ ಯಾದವರಿಗೆ ಸಹಿಸದಾಯಿತು. ಸೇವುಣರ ದೊರೆ ಭಿಲ್ಲಮನು ಎರಡು ಲಕ್ಷ ಕಾಲಾಳು-ಹನ್ನೆರಡು ಸಾವಿರ ಅಶ್ವದಳಗಳೊಡನೆ ಹೊರಟು ವೀರಬಲ್ಲಾಳನ ಮೇಲೆ ಬಿದ್ದನು. ಆದರೆ ವೀರಬಲ್ಲಾಳನ ಮುಂದೆ ಯಾದವ ಸೈನ್ಯ ನಿಲ್ಲಲಾರದೆ ಕುರಿ ಹಿಂಡಿನಂತೆ ಚದುರಿ ಓಡಿತು. ಸರಟೂರಿನ ಬಳಿ ನಡೆದ ಯುದ್ಧದಲ್ಲಿ ಭಿಲ್ಲಮನು ಸೋತು ಓಡಿಹೋಗಬೇಕಾಯಿತು. ಸರಟೂರಿನಿಂದ ಕೃಷ್ಣೆಯವರೆಗಿನ ಎಲ್ಲ ರಾಜ್ಯ ಹೊಯ್ಸಳರಿಗೆ ಸೇರಿಹೋಯಿತು. ಸೇವುಣರಿಂದ ಕಿತ್ತುಕೊಂಡ ವೀರವರ್ಧನಪುರಕ್ಕೆ ಶ್ರೀವರ್ಧನಪುರವೆಂದು ಹೆಸರಿಟ್ಟನು. ಸೇವುಣರಿಗೆ ಸೇರಿದ್ದ ಎಂಬರೆಗೆ, ಕುರುಗೋಡು, ಬೆಳ್ಳಿಟ್ಟಿಗೆ, ವೀರತನಹಳ್ಳಿ (ಹಾನುಗಲ್ಲು)ಗಳನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡನು. ಕಾಲಚೂರ್ಯರಿಂದ ಕಿತ್ತುಕೊಂಡಿದ್ದ ನಾಡೆಲ್ಲವೂ ಈಗ ಹೊಯ್ಸಳ ಶ್ವೇತಛತ್ರದಡಿಯಲ್ಲಿ ಬಂದಿತ್ತು. ತನ್ನ ದಿಗ್ವಿಜಯದ ಕುರುವಾಗಿ ವೀರಬಲ್ಲಾಳನು ಯಾದವ ಚಕ್ರವರ್ತಿ ಎಂಬ ಬಿರುದನ್ನು ಧರಿಸಿದನು.

ಆದರೆ ಅವನ ನಂತರ ಪಟ್ಟಕ್ಕೆ ಬಂದ ಇಮ್ಮಡಿ ನರಸಿಂಹನು ತಂದೆಯಷ್ಟು ಸಮರ್ಥ ದೊರೆಯಲ್ಲದುದರಿಂದ ಸೇವುಣ ದೊರೆ ಸಿಂಘಮನು ಹಿಂದೆ ಕೈಬಿಟ್ಟುಹೋಗಿದ್ದ ಪ್ರದೇಶಗಳನ್ನು ಗೆದ್ದುಕೊಳ್ಳಲು ಪ್ರಯತ್ನಿಸಿದನು.

ಅವನು ತನ್ನ ಸಮರ್ಥ ದಂಡನಾಯಕರಾದ ವಿಕ್ರಮಪಾಲ, ವಾಸುದೇವ ಮುಂತಾದವರ ಕೈಲಿ ದೊಡ್ಡ ಸೈನ್ಯವನ್ನು ಕಳುಹಿಸಿಕೊಟ್ಟನು ಆದರೆ ತುಂಗಭದ್ರೆಯ ತೀರದಲ್ಲಿ ನಡೆದ ಯುದ್ಧದಲ್ಲಿ ಸೇವುಣರಿಗೇ ಮತ್ತೆ ಸೋಲಾಯಿತು. ವಿಕ್ರಮಪಾಲನು ಯುದ್ಧದಲ್ಲಿ ಮಡಿದನು. ಈ ಯುದ್ಧದಲ್ಲಿ ಹರಿದ ರಕ್ತದಿಂದ ತುಂಗಭದ್ರೆಯ ನೀರು ಕೆನ್ನೀರಾಯಿತಂತೆ. ಆದರೆ ಸೇವುಣರು ಈ ಪೆಟ್ಟಿನಿಂದ ಚೇತರಿಸಿಕೊಂಡರು. ಮುಂದೆ ನಡೆದ ಅನೇಕ ಯುದ್ಧಗಳಲ್ಲಿ

ಹೊಯ್ಸಳರನ್ನು ಗೆದ್ದು, ವರದ ಮತ್ತು ತುಂಗಭದ್ರೆಯ ನಡುವಣ ಎಲ್ಲ ಪ್ರದೇಶವನ್ನು ಹೊಯ್ಸಳರಿಂದ ಕಿತ್ತುಕೊಂಡರು.

ಈ ಕುಲಕಲಹ ಇಲ್ಲಿಗೇ ನಿಲ್ಲಲಿಲ್ಲ. ಇದು ಸೋಮೇಶ್ವರನ ಕಾಲದಲ್ಲೂ ಮುಂದುವರೆಯಿತು. ಸೇವುಣರ ದೊರೆ ಕೃಷ್ಣಕಾಂಧಾರನು ಹೊಯ್ಸಳ ರಾಜ್ಯ ದೊಳಗೆ ನುಗ್ಗಿ ಕಾವೇರಿ ತೀರದವರೆಗೂ ಮುಂದೊತ್ತಿ, ಅಲ್ಲಿ ಒಂದು ಗೆಲ್ಗಂಬ ವನ್ನು ನೆಟ್ಟುಬಂದನು. ಮುಮ್ಮಡಿ ನರಸಿಂಹನ ಕಾಲದಲ್ಲಿ ಈ ಯುದ್ಧವು ಮುಂದುವರೆದು ಮಾಧವನ ಸೇನಾನಿ ರತ್ನಪಾಲನು ಮಾಳದೇವನಿಗೆ ಸೋತನು. ಆದರೆ ಸೇವುಣರ ಸಾಳ್ವತಿಕ್ಕಮನು ದ್ವಾರಸಮುದ್ರದ ಮೇಲೆ ದಂಡೆತ್ತಿಹೋಗಿ ಅವರನ್ನು ಸೋಲಿಸಿ ಅವರಿಂದ ಅನರ್ಘ್ಯವಾದ ಧನಕನಕ ವಸ್ತುವಾಹನ ಗಳನ್ನೂ, ಗಜತುರುಗಗಳನ್ನೂ ಸೂರೆಮಾಡಿ ತಂದನು. ಇದರಿಂದ ಲೋಭ ಗೊಂಡು ಮತ್ತೊಮ್ಮೆ ತಿಕ್ಕಮನು ದ್ವಾರಸಮುದ್ರದ ಮೇಲೆ ದಂಡೆತ್ತಿ ಬಂದಾಗ, ಪೆರುಮಾಳದೇವನ ಕೈಯಲ್ಲಿ ಪರಾಭವಗೊಂಡು ಹಿಮ್ಮೆಟ್ಟ ಬೇಕಾಯಿತು.

ಈ ವೇಳೆಗೆ ಮಾಧವನು ಮಡಿದು ರಾಮದೇವರಾಯನು ಯಾದವ ಸಿಂಹಾಸನವನ್ನೇರಿದನು. ಇವನು ತಿಕ್ಕಮನಿಗಾದ ಪರಾಭವದಿಂದ ನಾಚಿ, ಮತ್ತೆ ದ್ವಾರಸಮುದ್ರದ ಮೇಲೆ ದಂಡೆತ್ತಿ ಹೊರಟನು. ಇವನ ಸಹಾಯಕ್ಕೆ ಜಯದೇವ ಮತ್ತು ಹರಪಾಲರು ನಿಂತರು. ನಿಡುಗಲ್ಲಿನ ಸೈನ್ಯವೂ, ಇಂದ ಗೋಳರದ ಸೈನ್ಯವೂ ಸಹಾಯಕ್ಕೆ ನೆರೆಯಿತು. ಸೇವುಣರಿಗೂ ಹೊಯ್ಸಳರಿಗೂ ಕ್ರಿ.ಶ. ೧೨೭೬ನೇ ಏಪ್ರಿಲ್ ೨೫ರಂದು ಯುದ್ಧ ನಡೆಯಿತು. ಹೊಯ್ಸಳರ ಕಡೆ ಚಿಕ್ಕಕೇತಯ್ಯ, ಅವನ ಮಗ ಅಂತಯನಾಯಕರು ಅಸಾಧಾರಣ ಶೌರ್ಯ ದಿಂದ ಕಾದಿದರು. ಈ ಹೋರಾಟದಲ್ಲಿ ರಾಮದೇವನ ಮುಖಕವಚದ ಮೇಲ್ಭಾಗದಲ್ಲಿದ್ದ ರಾಜ ಲಾಂಛನವಾದ ಸುವರ್ಣ ಗರುಡನ ಕತ್ತು ಮುರಿ ಯಿತು.

ಈ ಅಪಮಾನವನ್ನು ರಾಮದೇವರಾಯನು ಮರೆತಿರಲಿಲ್ಲ. ಇದನ್ನು ಮರೆಯಲು ಸಾಧ್ಯವೂ ಇರಲಿಲ್ಲ. ಸೋಲೂರಿನ ಯುದ್ಧದಲ್ಲಿ ಹೊಯ್ಸಳ ಹಾಗೂ ಸೇವುಣರಿಗೆ ತಾತ್ಕಾಲಿಕವಾಗಿ ಒಪ್ಪಂದವೇರ್ಪಟ್ಟಿದ್ದರೂ ತನಗಾಗಿದ್ದ

ಅಪಮಾನಕ್ಕೆ ತಕ್ಕ ಪ್ರತೀಕಾರ ಬಗೆಯಲು ರಾಮದೇವರಾಯನು ಸೂಕ್ತಸಮಯಕ್ಕಾಗಿ ಕಾದಿದ್ದನು. ಈಗ ತನ್ನ ಆಶ್ರಿತರಾಗಿದ್ದ ಗುತ್ತಿ ಮುಂತಾದ ಪ್ರದೇಶಗಳ ರಾಜರು ಹೊಯ್ಸಳರ ಪ್ರೋತ್ಸಾಹ ಬೆಂಬಲಗಳಿಂದ ತನ್ನ ಮೇಲೆ ತಿರುಗಿಬಿದ್ದ ಸಂಗತಿಯನ್ನು ಕೇಳಿ ರಾಮದೇವರಾಯನಿಂದ ಸುಮ್ಮನಿರಲು ಸಾಧ್ಯವಾಗಲಿಲ್ಲ. ಅವನು ಆ ದ್ರೋಹಿಗಳನ್ನು ಶಿಕ್ಷಿಸಲು ಸೂಕ್ತ ಕ್ರಮ ಕೈಗೊಂಡನು.

ಮುಮ್ಮಡಿಸಿಂಗನು ಸೈನ್ಯಸಮೇತ ದೇವಗಿರಿಯಿಂದ ಹೊರಡುವ ವೇಳೆಗೆ ಬೇತೂರಿನ ಚಾವುಂಡರಾಯನು ಮುಮ್ಮಡಿಸಿಂಗನಿಗೆ ಸೇರಿದ್ದ ದೊರೆವಾಡಿಯನ್ನು ಮುತ್ತಿದ್ದನು. ಅದರ ರಕ್ಷಣೆಗೆ ಸಹಸ್ರಾರು ಬಿಲ್ಲಾರರು ಸಿದ್ಧರಾಗಿ ನಿಂತಿದ್ದರು. ಚಾವುಂಡರಾಯನು ಅನೇಕ ತಿಂಗಳವರೆಗೆ ಮುತ್ತಿಗೆ ಹಾಕಿದರೂ ದೊರವಾಡಿಯ ಒಂದು ಕಲ್ಲನ್ನು ಕದಲಿಸಲು ಅವನಿಂದ ಸಾಧ್ಯವಾಗಲಿಲ್ಲ. ಅಷ್ಟರಲ್ಲಲ್ಲಿ ಮುಮ್ಮಡಿಸಿಂಗನು ಅದರ ರಕ್ಷಣೆಗೆ ಬಂದನು. ಅವನ ಸಮುದ್ರ ಸದೃಶ ಸೈನ್ಯವನ್ನು ಕಂಡೇ ಚಾವುಂಡರಾಯನು ಹೆದರಿದನು. ಅಷ್ಟರಲ್ಲಿ ಮುಮ್ಮಡಿಸಿಂಗನು ಬಿಟ್ಟ ಒಂದು ಬಾಣ ಬಂದು ಚಾವುಂಡರಾಯನ ಎದೆಯನ್ನು ಸೀಳಿತು. ಶತ್ರುಗಳು ಗಾಬರಿಯಿಂದ ಹೆದರಿ ಓಡಿದರು.

ಆದರೆ ಶತ್ರುಗಳು ಅಲ್ಲಿಗೇ ಸುಮ್ಮನಾಗಲಿಲ್ಲ. ಚಾವುಂಡರಾಯನಿಗಾದ ಅನ್ಯಾಯಕ್ಕೆ ಸೇಡು ತೀರಿಸಿಕೊಳ್ಳಲು ಅವನ ಸಹೋದರನಾದ ಮಣದೇವರಸನು ಕೊಂಕಣಾಧೀಶ್ವರ ಕನ್ನರಸನ ಸಹಾಯ ಹೊಂದಿ ಪುನಹ ದೂರವಾಡಿಯನ್ನು ಮುತ್ತಿದನು. ಈ ಬಾರಿಯೂ ಶತ್ರುಗಳಿಗೆ ಸೋಲುಂಟಾಯಿತು. ಚಿತ್ರಭಾನು ಸಂವತ್ಸರ ಚೈತ್ರ ಶುದ್ಧ ೧೫ನೇ ಆದಿತ್ಯವಾರ ಮಣದೇವರಸನು ಯುದ್ಧದಲ್ಲಿ ಮರಣಹೊಂದಿ ಜಿನಪಾದ ಸೇರಿದನು.

ಮುಮ್ಮಡಿಸಿಂಗನು ತನಗೆ ದೊರೆತ ಜಯದಿಂದ ಹಿಗ್ಗದೆ ದಂಡಯಾತ್ರೆಯನ್ನು ಮುಂದುವರಿಸಿ ಕಳಸಾಪುರದ ಬಳಿ ಚಾವುಂಡರಾಯನ ಭಾವಮೈದುನನ ಮೇಲೆ ಬಿದ್ದನು. ಇಲ್ಲೂ ಅವನಿಗೇ ಜಯವಾಯಿತು. ಶತ್ರು ಪಕ್ಷದ ದ್ಯಾಮೋ ನಾಯಕನು ಮಡಿದನು. ಈಗ ಮುಮ್ಮಡಿಸಿಂಗನು ತನ್ನ ದೃಷ್ಟಿಯನ್ನು ಚಿಮ್ಮತ್ತೂರಿನ ಮೇಲೆ ತಿರುಗಿಸಿದನು.

ಚಿಮ್ಮತ್ತೂರಿನ ಸಂಗಯ್ಯನಾಯಕನು ಮುಮ್ಮಡಿಸಿಂಗನ ರಾಜ್ಯದ ಕಣೆಕಲ್ಲು ನಾಡಿನ ಸಿಂಗೊಳಲನ್ನು ಮುತ್ತಲು ಬಂದಿದ್ದನು. ದಾರಿಯಲ್ಲೇ ಯುದ್ಧವಾಗಿ

ಹೊಯ್ಸಳ ಪಕ್ಷದ ಸಿಂಗಯ್ಯ ನಾಯಕನಿಗೆ ಸೋಲಾಗಿ ಅವನು ತಲೆ ತಪ್ಪಿಸಿಕೊಂಡನು. ಅವನ ನೆರವಿಗೆ ಬಂದಿದ್ದ ಹೊಯ್ಸಳ ದಂಡನಾಯಕನಾದ ಸೋಮಯ್ಯನು ಮರಣ ಹೊಂದಿದನು. ಹೊಯ್ಸಳ ಸೈನ್ಯ ಸೋತು ಓಡಿಹೋಯಿತು. ಮುಮ್ಮಡಿಸಿಂಗನು ಗುತ್ತಿ' ಕೊಟಿಕಲ್ಲು, ಚಿಮ್ಮತ್ತೂರುಗಳನ್ನು ಹಿಡಿದುಕೊಂಡು ತನಗೆ ಧೊರೆತ ವಿಜಯದಿಂದ ವಿಜೃಂಭಿಸುತ್ತಾ ತೋರಣದ ಮೇಲೆ ದಂಡೆತ್ತಿ ಹೊರಟನು.

ತನ್ನನ್ನು ಶಿಕ್ಷಿಸಲು ಅಪಾರ ಸೈನ್ಯದೊಡನೆ ಮುಮ್ಮಡಿಸಿಂಗನು ಬರುತ್ತಿರುವನೆಂಬ ಸುದ್ದಿಯನ್ನು ಕೇಳಿಯೇ ಮಾರಸಿಂಗನ ಎದೆ ಒಡೆಯಿತು. ಆವನಿಗೆ ಬೇರೆ ದಾರಿ ಕಾಣದೆ ಹೊಯ್ಸಳ ದೊರೆ ಮುಮ್ಮಡಿ ನರಸಿಂಹನ ಅಶ್ರಯಕ್ಕೆ ಬಂದು ತನ್ನನ್ನು ಸೇವುಣ ಸೈನ್ಯದಿಂದ ರಕ್ಷಿಸಲು ಬೇಡಿಕೊಂಡನು. ಆದರೆ ಮುಮ್ಮಡಿನರಸಿಂಗನ ಕೈಯ್ಯಲ್ಲಿ ಸಂಗಯ್ಯನಾಯಕನಿಗಾದ ಪರಾಭವ-ಮೇಲಿಂದ ಮೇಲೆ ಹೊಯ್ಸಳ ಸೈನ್ಯಕ್ಕೆ ಒದಗಿದ ಸೋಲನ್ನು ಕಂಡು ಹೇಡಿಯಾದ ಮುಮ್ಮಡಿಸಿಂಹನು ತನ್ನ ಆಶ್ರಯಕ್ಕೆ ಬಂದ ಮಾರಸಿಂಗನನ್ನು ಕೈಹಿಡಿಯಲಿಲ್ಲ. ಅಂತಹ ಹೊಯ್ಸಳ ಚಕ್ರವರ್ತಿಯೇ ಮುಮ್ಮಡಿಸಿಂಗನಿಗೆ ಅಂಜಿ ತನಗೆ ಆಶ್ರಯ ಕೊಡದ ಮೇಲೆ ತನಗೆ ಇನ್ನು ಬೇರೆ ಯಾರೂ ಆಶ್ರಯ ಕೊಡಲಾರರೆಂದು ಬಗೆದು ಬೇರೆ ದಾರಿಕಾಣದೆ ಮಾರಸಿಂಗನು ತನ್ನ ಪ್ರಾಣ ಉಳಿಸಿಕೊಳ್ಳಲು ಮುಮ್ಮಡಿಸಿಂಗನಿಗೇ ಶರಣುಬಂದನು.

"ಅಣ್ಣಾಜಿ, ನಾನು ದೈವಸಮಾನರಾಗಿದ್ದ ತಮಗೆ ದ್ರೋಹ ಬಗೆದಿದ್ದೇನೆ. ಸ್ವಾರ್ಥಸಾಧಕರ ಮಾತು ಕೇಳಿಕೊಂಡು ಪಿತೃಸಮಾನರಾಗಿದ್ದ ತಮಗೆ ಎರಡೆಣಿಸಿದೆ. ನನ್ನದು ಸರ್ವಾಪರಾಧವಾಯಿತು. ಈಗ ನೀವಲ್ಲದೆ ನನ್ನನ್ನು ಯಾರೂ ಉದ್ಧರಿಸಲಾರರು ! ನಿಮಗೆ ದ್ರೋಹ ಬಗೆದ ನಾನು ಪಾಪಿ ! ನನಗೆ ನೀವು ಬೇಕಾದ ಶಿಕ್ಷೆ ವಿಧಿಸಿ. ಸಂತೋಷದಿಂದ ಅನುಭವಿಸುತ್ತೇನೆ !" ಎಂದು ಪಶ್ಚಾತ್ತಾಪದಿಂದ ಕಂಬನಿ ಮಿಡಿದನು.

ಇದ್ದಕ್ಕಿದ್ದಂತೆ ತನ್ನ ಶಿಬಿರದಲ್ಲಿ ಕಾಣಿಸಿಕೊಂಡ ತನ್ನ ಮಲ ಸಹೋದರನನ್ನು ನೋಡಿ ಮುಮ್ಮಡಿಸಿಂಗನಿಗೆ ಚಣಕಾಲ ತನ್ನ ಕಣ್ಣು ನಂಬಲಾಗಲಿಲ್ಲ ತಾನು ಯಾರಮೇಲೆ ದಂಡೆತ್ತಿಹೋಗಬೇಕೆಂದಿದ್ದನೋ-ಯಾರು ತನ್ನ ಬೆನ್ನಿನಲ್ಲಿ ಇರಿದು ವಿಶ್ವಾಸಘಾತುಕರಾದರೋ ಆ ನೀಚ ಮಾರಸಿಂಗನು ಇಂದು

ಎಳೆಯ ಮಗುವಿನಂತೆ ಪಾದಗಳ ಮೇಲೆ ಶಿರವಿಟ್ಟು ರೋದಿಸುತ್ತಿದ್ದಾನೆ. ಅವನಿಗೆ ಚಣಕಾಲ ಇದು ಕನಸೋ ನನಸೋ ತಿಳಿಯದಾಯಿತು.

"ಅಪ್ಪಾಜಿ ಬೇರೆಯಲ್ಲ—ನೀವು ಬೇರೆಯಲ್ಲ. ಹೀಗಿದ್ದ ನಿಮಗೆ ನಾನು ದ್ರೋಹ ಬಗೆದೆ! ನೀವು ಕೈಬಿಟ್ಟರೆ ನನಗೆ ಆತ್ಮಹತ್ಯೆಯೊಂದೇ ದಾರಿ! ನೀವು ನನ್ನನ್ನು ಕ್ಷಮಿಸಿ ಉದ್ಧರಿಸಬೇಕು. ನಿಮ್ಮಿಂದ ಕ್ಷಮೆ ಬರದ ಹೊರತು ನಾನು ತಮ್ಮ ಪಾದಗಳನ್ನು ಬಿಡುವುದಿಲ್ಲ—" ಎಂದು ಜೀವಗಳ್ಳನಾಗಿ ಹೆದರಿ ಕಂಗೆಟ್ಟಿದ್ದ ಮಾರಸಿಂಗ ಬಡಬಡಿಸಿದ.

"ನೀಚ, ದೂರ ಸರಿ, ನೀನು ಉಂಡಮನೆಗೆ ಎರಡು ಎಣಿಸಿದ ದ್ರೋಹಿ. ನನ್ನನ್ನು ಮುಟ್ಟಬೇಡ, ದೂರ ಸರಿ!"

—ಮಾರಸಿಂಗನಿಂದ ತನಗಾಗಿದ್ದ ಅನ್ಯಾಯದ ಗಾಯ ಇನ್ನೂ ಮಾಗದೆ ಇದ್ದ ಮುಮ್ಮಡಿಸಿಂಗನು ಭಯಂಕರವಾಗಿ ಗರ್ಜಿಸಿದ.

ಈ ಮಾತನ್ನು ಕೇಳಿ ಮಾರಸಿಂಗನು ತತ್ತರಿಸಿದ.

"ಪ್ರಭು, ನಾನು ಪಾಪಿ, ದಿಟ. ತಮ್ಮನ್ನು ಮುಟ್ಟಲು ನಾನು ಅನರ್ಹ ದಿಟ. ನಾನು ತಮಗೆ ದ್ರೋಹ ಬಗೆದಿದ್ದೇನೆ, ದಿಟ. ಆದರೆ ಸ್ವಾರ್ಥಿಗಳ ಮಾತು ಕೇಳಿಕೊಂಡು, ತಮಗೆ ದ್ರೋಹ ಬಗೆದೆ. ನನ್ನನ್ನು ಕೊಲ್ಲುವುದಾದರೆ ಈ ಕತ್ತಿಯಿಂದಲೇ ನನ್ನನ್ನು ಸೀಳಿಬಿಡಿ. ತುಂಟ ಮಗುವೊಂದು ತಿಳಿಯದೇ ತಪ್ಪು ಮಾಡಿದೆ ಎಂದು ತಿಳಿದು ನನ್ನನ್ನು ಕ್ಷಮಿಸುವುದಾದರೆ ಕ್ಷಮಿಸಿಬಿಡಿ! ನಾನು ಸಾಯಲು ಸಿದ್ಧನಿದ್ದೇನೆ. ತಮ್ಮಲ್ಲಿ ಪ್ರಾಣ ಭಿಕ್ಷೆ ಬೇಡುತ್ತಿಲ್ಲ—ನನ್ನ ಪಾಪವನ್ನು ನನ್ನ ಸರ್ವಾಪರಾಧವನ್ನು ಕ್ಷಮಿಸಲು ಬೇಡುತ್ತಿದ್ದೇನೆ. ನೀವು ನನ್ನನ್ನು ಕ್ಷಮಿಸಿದರೆ ನಿಶ್ಚಿಂತೆಯಿಂದ ಸಾವನ್ನು ಅಪ್ಪುತ್ತೇನೆ."

ಈ ಮಾತು ಕೇಳಿ ಕಾದ ಕಬ್ಬಿಣದ ಸರಳಿನಂತಿದ್ದ ಮುಮ್ಮಡಿಸಿಂಗನ ಕರುಳು—ಮಂಜುಗಡ್ಡೆಯಂತೆ ಕರಗಿ ನೀರಾಯಿತು. ಅವನಿಗೆ ದೈನ್ಯದಿಂದ ಬೇಡುತ್ತಿರುವ ಮಾರಸಿಂಗನ ಮೇಲೆ ಅನುಕಂಪ ಉಂಟಾಯಿತು. ಪ್ರಾಣಭಿಕ್ಷೆ ಬೇಡುತ್ತಿರುವ ಇವನ ಮೇಲೆ ಸೇಡು ತೀರಿಸಿಕೊಳ್ಳುವುದರಲ್ಲಿ ಯಾವ ಪೌರುಷ ಇದೆ? ಇಷ್ಟಕ್ಕೂ ಇವನಿಗೆ ಪಶ್ಚಾತ್ತಾಪವಾಗಿದೆ. ತಪ್ಪು ದಾರಿ ತುಳಿದಿದ್ದ ಮಲಸಹೋದರನನ್ನು ಶಿಕ್ಷಿಸುವುದಕ್ಕಿಂತ ಉದಾರವಾಗಿ ಕ್ಷಮಿಸುವುದರಲ್ಲಿ ತನ್ನ ನಿಜವಾದ ಪೌರುಷವಿದೆ, ಔದಾರ್ಯದಲ್ಲಿ ತನ್ನ ಔನ್ನತ್ಯವಿದೆ" ಎಂದುಕೊಂಡು

ಅವನನ್ನು ಕ್ಷಮಿಸಿದನು. ಕಾಲಿನ ಮೇಲೆ ತಲೆ ಇಟ್ಟು ರೋದಿಸುತ್ತಿದ್ದ ಸಹೋದರನನ್ನು ಮೇಲೆತ್ತಿ, ಮೈತಡವಿ ಅವನೂ ಗಳಗಳನೆ ಅತ್ತುಬಿಟ್ಟನು. ಅಲ್ಲಿಗೆ ಅವನ ಹೃದಯದಲ್ಲಿ ಇದ್ದ ಎಲ್ಲಾ ಚಿಂಕೆ ಆರಿಹೋದಂತೆ ಆಯಿತು. ಹಿಂದಿದ್ದ ಸೇಡು, ಈಗ ಅನುಕಂಪವಾಗಿ ಮಾರ್ಪಟ್ಟಿತ್ತು.

ಮುಮ್ಮಡಿಸಿಂಗನು ಯಾವ ರಾಜ್ಯಕೋಶಗಳನ್ನು ಮತ್ತೆ ಪಡೆಯುವ ಸಲುವಾಗಿ ದಂಡೆತ್ತಿ ಬಂದಿದ್ದನೋ ಆ ರಾಜ್ಯಕೋಶಗಳ ವ್ಯಾಮೋಹ ಈಗ ಅವನನ್ನು ಬಾಧಿಸಲಿಲ್ಲ. ಅವನು ಸಂತೋಷದಿಂದಲೇ ತೋರಣ ರಾಜ್ಯವನ್ನು ತಮ್ಮನಿಗೆ ಬಿಟ್ಟುಕೊಟ್ಟು ತನ್ನ ಪ್ರತಿನಿಧಿಯಾಗಿ ಆಳಿಕೊಂಡಿರಲು ಹೇಳಿದನು. ಹೀಗೆ ಜ್ಞಾತಿಕಲಹದ ಬೇಗೆಯು ನಂದಿ ತೋರಣವು ಮತ್ತೆ ಮುಮ್ಮಡಿಸಿಂಗನ ಕೈವಶವಾದುದಲ್ಲದೆ ಮಾರಸಿಂಗನ ಪ್ರೀತಿ ವಿಶ್ವಾಸಗಳು ಮತ್ತೆ ಅವನದಾಗಿದ್ದವು. ಇದು ತನ್ನ ಇತರ ದಿಗ್ವಿಜಯಗಳಿಗಿಂತ ಹೆಚ್ಚಿನ ಸಂತೋಷವನು ಅವನಿಗೆ ಉಂಟುಮಾಡಿತ್ತು.

## ೫

ಬೆಟ್ಟವಾಗಿಬಂದಿದ್ದ ವಿದ್ರೋಹದ ಕಾಳ್ಗಿಚ್ಚು ಮುಂಜಿನಂತೆ ಕರಗಿಹೋಗಿತ್ತು. ಮುಮ್ಮಡಿಸಿಂಗನು ಸಾಮ್ರಾಟ ರಾಮದೇವರಾಯನಿಗೆ ದ್ರೋಹ ಬಗೆದ ಸಾಮಂತರನ್ನು ಸದೆಬಡಿದು ಯಾದವ ಸಾಮ್ರಾಜ್ಯದ ಭದ್ರತೆಯನ್ನು ಕಾಪಾಡಿದ್ದನು. ಈಗ ಮುಮ್ಮಡಿಸಿಂಗನ ವಿರುದ್ಧ ಕತ್ತಿಕಟ್ಟಿದ್ದ ಗುತ್ತಿಯ ಜಗದಾಪಿ ಗಾಂಗೇಯನೂ, ಬೇತೂರು, ಕೋಟಿ ಕಲ್ಲೂರು, ಕೊಂಕಣಗಳ ಸಾಮಂತರೂ ತಾವು ಬದುಕಿ ಉಳಿಯಬೇಕಾದರೆ ಮುಮ್ಮಡಿಸಿಂಗನ ಅನುಗ್ರಹ ವಿಶೇಷದಿಂದ ಮಾತ್ರವೇ ಎಂದು ತಿಳಿಯುವಂತೆ ಆಯಿತು. ಅವರು ತಾವು ಮಾಡಿದ ದ್ರೋಹಕ್ಕೆ ಪಶ್ಚಾತ್ತಾಪಪಟ್ಟು, ರಾಮದೇವರಾಯನ ಕೃಪಾಭಿಕ್ಷೆ ದೊರಕಿಸಿ ಕೊಡಲು ಮುಮ್ಮಡಿಸಿಂಗನಿಗೇ ಶರಣುಬಂದರು.

ಮುಮ್ಮಡಿಸಿಂಗನು ಸೋತ ಸಾಮಂತರ ಮೇಲೆ ಸೇಡು ತೀರಿಸಿಕೊಳ್ಳದೆ ಅವರೊಡನೆ ಔದಾರ್ಯದಿಂದ ನಡೆದುಕೊಂಡನು. ಅವರ ಅಪರಾಧಗಳನ್ನು ಮನ್ನಿಸಿ ಅವರ ವಿಷಯದಲ್ಲಿ ಸಾಮ್ರಾಟ ರಾಮದೇವರಾಯನಿಗೆ ಸದ್ಭಾವನೆ ಉಳಿಯುವಂತೆ ಮಾಡಿದನು. ಅವನಿಗೆ ಬೇಕಾಗಿದ್ದುದು-ಯಾದವ ಸಾಮ್ರಾಜ್ಯದ ಸುಭದ್ರತೆಯೇ ಹೊರತು-ಅದರ ವಿನಾಶವಲ್ಲ.

ದಕ್ಷಿಣಾಪಥದಲ್ಲಿ ಮೆಲ್ಲನೆ ಕಾಲಿಡಲು ಹವಣಿಸುತ್ತಿದ್ದ ಯವನರ ದಾಳಿಯನ್ನೂ, ದುರಾಕ್ರಮಣವನ್ನೂ ತಡೆದು, ಹಿಂದೂಧರ್ಮ, ಸಂಸ್ಕೃತಿಗಳಿಗೆ ಅವರಿಂದ ಉಂಟಾಗುತ್ತಿದ್ದ ವಿಪತ್ತನ್ನು ತಪ್ಪಿಸಲು ಬಲಿಷ್ಠವಾದ ಒಂದು ಹಿಂದೂ ಸಾಮ್ರಾಜ್ಯದ ಅಗತ್ಯ ಹೆಚ್ಚಾಗಿತ್ತು. ಈ ಮಹತ್ತರ ಹೊಣೆಗಾರಿಕೆ ಎಲ್ಲರಿಗಿಂತ ಹೆಚ್ಚಾಗಿ ದೇವಗಿರಿ ಯಾದವರ ಮೇಲೆ ಬಿದ್ದಿದೆ ಎಂಬುದು ಅವನಿಗೆ ತಿಳಿದಿತ್ತು.

ದಕ್ಷಿಣದಲ್ಲಿದ್ದ ಹೊಯ್ಸಳರೂ, ಪಾಂಡ್ಯರೂ ನಿರ್ವೀರ್ಯರಾಗುತ್ತಾ ನಡೆದಿದ್ದರು. ಎರಡು ಸಾಮ್ರಾಜ್ಯಗಳೂ ಯಾದವೀ ಕಲಹಗಳ ಹುತ್ತವಾಗಿತ್ತು. ಪರಕೀಯ ಆಕ್ರಮಣವನ್ನು ಸಮರ್ಥರೀತಿಯಲ್ಲಿ ಎದುರಿಸುವ ಶಕ್ತಿ ಈ ಎರಡು ಪುರಾತನ ಅರಸು ಮನೆತನಗಳಿಗೆ ಇರಲಿಲ್ಲ. ಈ ದುರ್ಭರ ಸಮಯದಲ್ಲಿ ಎಲ್ಲ ರೀತಿಯಲ್ಲಿ ಸಶಕ್ತವಾಗಿದ್ದ ದೇವಗಿರಿಯೊಂದೇ ದಕ್ಷಿಣಾಪ್ರಥವನ್ನು ಯವನರ ದಾಳಿಯಿಂದ ಪಾರುಮಾಡಲು ಸಮರ್ಥವಾಗಿತ್ತು. ಪರಕೀಯ ಶತ್ರುಗಳನ್ನು ಎದುರಿಸಲು-ಒಳಗಿನ ಅಂತಃಸತ್ವವನ್ನೂ, ಒಗ್ಗಟ್ಟನ್ನೂ, ಉಳಿಸಿಕೊಳ್ಳುವುದು ಅಗತ್ಯವಾಗಿತ್ತು. ಈ ಒಂದು ದೃಷ್ಟಿಯಿಂದ ಯಾದವ ಸಾಮ್ರಾಜ್ಯವು ಯಾವುದೇ ಅಂತಃಕಲಹ, ಒಡಕುಗಳಿಲ್ಲದೆ ಸದೃಢವಾಗಿ, ಸುಸಂಘಟಿತವಾಗಿ ಉಳಿಯುವುದು ಅಗತ್ಯವಾಗಿತ್ತು. ಇದನ್ನರಿತ ಮುಮ್ಮಡಿಸಿಂಗನು ತನಗೆ ಹಾಗೂ ಸಾಮ್ರಾಜ್ಯಕ್ಕೆ ದ್ರೋಹ ಬಗೆದ ವಿದ್ರೋಹಿ ಸಾಮಂತರನ್ನು ಶಿಕ್ಷಿಸದೆ, ಅವರನ್ನು ಉದಾರವಾಗಿ ನಡೆಸಿಕೊಂಡು, ಅವರ ಪ್ರೀತಿ ವಿಶ್ವಾಸಗಳನ್ನು ಗಳಿಸಿಕೊಂಡನು.

ಸಾಮ್ರಾಜ್ಯದಲ್ಲಿ ಹಠಾತ್ತನೆ ತಲೆದೋರಿದ್ದ ವಿದ್ರೋಹದ ಬೆಂಕಿ ಮೊಳಕೆಯಲ್ಲೇ ಹೊಸೆದುಹಾಕಲ್ಪಟ್ಟ ಮೇಲೆ ರಾಮದೇವರಾಯನಿಗೆ ದೊಡ್ಡದೊಂದು ಜವಾಬ್ದಾರಿ ಕೆಳಗಿಳಿಸಿದಂತೆ ಆಗಿತ್ತು. ಸದ್ಯಕ್ಕೆ ಕುಲಶತ್ರುಗಳಾಗಿದ್ದ

ದ್ವಾರಸಮುದ್ರದ ಹೊಯ್ಸಳರು ದೇವಗಿರಿಯ ತಂಟೆಗೆ ಬರಲು ಹಿಂದುಮುಂದೆ ತುಳಿಯುತ್ತಿದ್ದರು. ಅವರಿಂದ ಸಾಮ್ರಾಜ್ಯಕ್ಕೆ ಯಾವುದೇ ಗಂಡಾಂತರವಿರಲಿಲ್ಲ. ಓರಂಗಲ್ಲಿನ ಕಾಕತೀಯರೂ, ಪಾಂಡ್ಯ, ಚೋಳ ದೊರೆಗಳೂ ದೇವಗಿರಿಯ ಸಾಮ್ರಾಟರನ್ನೂ ದಕ್ಷಿಣಾಪಥದ ನಾಯಕಮಣಿಯೆಂದು ಒಪ್ಪಿಕೊಂಡಿದ್ದರು. ಈ ಹೆಗ್ಗಳಿಕೆಯನ್ನು ಸಾರ್ಥಕಪಡಿಸಿಕೊಳ್ಳಬೇಕೆಂಬುದೇ ರಾಮದೇವರಾಯನ ಆಶಯವಾಗಿತ್ತು.

ಉತ್ತರದಲ್ಲಿ ನೆಲೆಯಾಗಿ ಕಾಲೂರಿದ್ದ ಯವನರ ಪಾದಾಕ್ರಾಂತಳಾಗಿದ್ದ ಭಾರತ ಸೌಭಾಗ್ಯ ಲಕ್ಷ್ಮಿಯನ್ನು ಸಾಧ್ಯವಾದರೆ ಬಂಧಮುಕ್ತಳಾಗಿ ಮಾಡಬೇಕೆಂಬ ಮಹತ್ವಾಕಾಂಕ್ಷೆಯನ್ನು ಎದೆಯಲ್ಲಿ ಹೊತ್ತು, ಮುಸಲ್ಮಾನರ ಬಲಾಬಲಗಳನ್ನೂ ಹಿಂದೂ ಧರ್ಮ ಸಂಸ್ಕೃತಿಗಳಿಗೆ ಅವರಿಂದ ಒದಗಿರುವ ಗಂಡಾಂತರವನ್ನೂ ಪ್ರತ್ಯಕ್ಷವಾಗಿ ತಿಳಿದು ತನಗೆ ವರದಿ ಮಾಡಲು ಕ್ಷೇತ್ರ ಯಾತ್ರೆಯ ನೆಪದಲ್ಲಿ ತನ್ನ ಹಿರಿಯ ಮಗ ಶಂಕರದೇವನನ್ನು, ಸಾಕಷ್ಟು ದೊಡ್ಡ ಪರಿವಾರದೊಂದಿಗೆ ಕಳುಹಿಸಿಕೊಟ್ಟನು. ಅವರ ಜತೆಯಲ್ಲಿ ತನ್ನ ಬಹುಕಾಲದ ಆಸೆಯನ್ನು ಈಡೇರಿಸಿಕೊಳ್ಳಲು ಮಹಾರಾಣಿ ಎಂಗಲದೇವಿಯೂ ಹೊರಟಿದ್ದಳು.

ಆಕೆಯು ತನ್ನ ಹರಯದಲ್ಲಿ ತನಗೆ ಪುತ್ರರತ್ನವಾದರೆ ಕಾಶಿಯ ವಿಶ್ವನಾಥನ ದರ್ಶನಕ್ಕೆ ಬರುವುದಾಗಿ ಹರಕೆ ಹೊತ್ತಿದ್ದಳು. ಅದರಂತೆ ತನಗೆ ಒಂದು ಗಂಡುಮಗು ಹುಟ್ಟಿದಾಗ ಅವನಿಗೆ ಶಂಕರದೇವನೆಂದು ನಾಮಕರಣ ಮಾಡಿದ್ದರೂ, ತನ್ನ ಹರಕೆಯಂತೆ ವಿಶ್ವೇಶ್ವರನ ದರ್ಶನಕ್ಕೆ ವಾರಣಾಸಿಗೆ ಹೋಗಿಬರಲು ಸಾಧ್ಯವಾಗಿರಲಿಲ್ಲ. ಈಗ ಉತ್ತರ ಭಾರತದ ರಾಜಕೀಯ ಪರಿಸ್ಥಿತಿಯನ್ನು ತಿಳಿದುಕೊಂಡುಬರಲು ಶಂಕರದೇವನು ಸೂಕ್ತ ಪರಿವಾರದೊಂದಿಗೆ ಹೊರಡುವ ಸುದ್ದಿಯನ್ನು ಕೇಳಿ ಎಂಗಲದೇವಿಯು ಅವನೊಡನೆ ತಾನೂ ಕ್ಷೇತ್ರಯಾತ್ರೆಗೆ ಹೊರಟಳು.

ಇದಕ್ಕೆ ರಾಮದೇವರಾಯನು ಸಂತೋಷದಿಂದಲೇ ಸಮ್ಮತಿಸಿದನು. ಎಂಗಲದೇವಿಯೂ ಶಂಕರದೇವನ ಜತೆಯಲ್ಲಿದ್ದರೆ ತಮ್ಮ ಕ್ಷೇತ್ರಯಾತ್ರೆಯ ಉದ್ದಿಶ್ಯವನ್ನು ಯಾರೂ ಶಂಕಿಸುವುದಿಲ್ಲವೆಂದು ಭಾವಿಸಿದನು. ಇದರಿಂದ ಬಹುಕಾಲದ ಹರಕೆಯು ಕೈಗೊಳ್ಳುವುದರ ಜತೆಗೆ ಯಾತ್ರಿಕರ ಛದ್ಮವೇಷದ

ಯವನರ ರಾಜ್ಯದಲ್ಲಿ ನಿರ್ಭಯವಾಗಿ ಸಂಚರಿಸಬಹುದಿತ್ತು. ಆಳರಸರ ಶಕ್ತಿಯನ್ನೂ, ದೇಶದ ಪರಿಸ್ಥಿಯನ್ನೂ ಸುಲಭವಾಗಿ ಪರಿಚಯ ಮಾಡಿಕೊಳ್ಳಬಹುದಿತ್ತು.

ಉತ್ತರ ಭಾರತದ ಬಗ್ಗೆ ರಾಮದೇವರಾಯನ ಆಸಕ್ತಿ ದಿನ ದಿನಕ್ಕೂ ಹೆಚ್ಚಾಗುತ್ತಿತ್ತು. ಇದಕ್ಕೆ ಕಾರಣ ಗುಲಾಮಿ ಅರಸರನ್ನು ಕೊಲೆಮಾಡಿ ಖಿಲ್ಜಿ ಸಂತತಿಯವರು ದೆಹಲಿಯ ಗಾದಿಯನ್ನು ಹತ್ತಿದ್ದರು. ದೇಶದಲ್ಲೆಲ್ಲಾ ಅನಾಯಕತೆ ತಲೆದೋರಿತ್ತು. ಯವನರನ್ನು ಭಾರತದಿಂದ ಓಡಿಸಲು ಇದಕ್ಕಿಂತ ಉತ್ತಮ ಸುಸಂಧಿ ಇರಲಿಲ್ಲ. ಈ ಸಮಯವನ್ನು ಸಾಧಿಸಿ ಭಾರತವನ್ನು ಯವನರ ಆಕ್ರಮಣದಿಂದ ಮುಕ್ತಗೊಳಿಸಬೇಕೆಂದು ರಾಯದೇವರಾಯನು ಆಶಿಸಿದ್ದನು. ಅದಕ್ಕೆ ದೆಹಲಿಯ ರಾಜಕೀಯ ಪರಿಸ್ಥಿತಿ ತುಂಬಾ ಅನುಕೂಲವಾಗಿತ್ತು.

ಕೇವಲ ಒಂದು ನೂರು ವರ್ಷಗಳ ಹಿಂದೆ ಭಾರತದ ಪುಣ್ಯಭೂಮಿಯ ಮೇಲೆ ಮಹಮದೀಯರು ಕಾಲಿರಿಸಿದ್ದರು. ಅವರ ಆಗಮನದೊಂದಿಗೆ ಸ್ವತಂತ್ರ ಭಾರತದ ಭಾಗ್ಯರವಿ ಅಸ್ತಂಗತವಾಯಿತು. ಪೃಥ್ವೀರಾಜ ಜಯಚಂದ್ರರಲ್ಲಿ ಉಂಟಾದ ದ್ವೇಷಾಸೂಯೆ, ವೈಮನಸ್ಯಗಳು ಮಹಮದ್ ಘೋರಿಗೆ ಪ್ರಥಮ ಬಾರಿಗೆ ಭಾರತಕ್ಕೆ ಬರಲು ಆಹ್ವಾನವಿತ್ತಿತ್ತು. ಅದರ ಪರಿಣಾಮವಾಗಿ ಯವನರು ಭಾರತದಲ್ಲಿ ನೆಲೆಯಾಗಿ ನಿಂತರು. ಅದು ಭಾರತದ ಇತಿಹಾಸದಲ್ಲಿ ಎಂದಿಗೂ ಮರೆಯಲಾಗದ ಒಂದು ದುರಂತ ಕಥೆ.

ಚೋಹಣ ಕುಲದೀಪಕ ಪೃಥ್ವೀರಾಜನು ದಿಲ್ಲಿಯನ್ನು ಆಳುತ್ತಿದ್ದಾಗ ಕನ್ಯಕುಬ್ಜದಲ್ಲಿ ರಾಠೊಡ ವಂಶದ ಜಯಚಂದ್ರನು ಆಳುತ್ತಿದ್ದನು. ಪುರುಷಶ್ರೇಷ್ಠನಾದ ಪೃಥ್ವೀರಾಜನು ರಾಜಪುತ್ರರಿಗೆ ಒಪ್ಪುವಂತೆ ಸ್ವಯಂವರದಲ್ಲಿ ಸಂಯುಕ್ತೆಯನ್ನು ವಿವಾಹವಾದುದೇ ಅವನುಮಾಡಿದ ಮಹಾಪರಾಧವಾಯಿತು ಇದರಿಂದ ಕುಪಿತನಾದ ಜಯಚಂದ್ರನು ಪೃಥ್ವೀರಾಜನು ತನ್ನ ಅಳಿಯನೆಂಬುದನ್ನು ಮರೆತು, ಅವನ ನಾಶಕ್ಕೆ ಕಾರಣನಾದನು. ಪೃಥ್ವಿರಾಜನ ಮೇಲೆ ಸೇಡು ತೀರಿಸಿಕೊಳ್ಳಲು ಅವನು ಮಹಮದ್ ಘೋರಿಗೆ ಭಾರತಕ್ಕೆ ಬರಲು ಆಮಂತ್ರಣ ನೀಡಿದನು.

ಘೋರಿಯು ಸೈನ್ಯ ಸಮೇತ ಹೊರಟು ಸ್ಥಾಣೇಶ್ವರದಲ್ಲಿ ಬಂದು ಬೀಡು ಬಿಟ್ಟನು. ಪಾಷಾಣ ಹೃದಯಿಯಾದ ಜಯಚಂದ್ರನು ಆಳಿಯನಿಗೆ ಸಹಾಯ ಮಾಡಲಿಲ್ಲ. ಕುಟಿಲನಾದ ಘೋರಿಯು ರಾತ್ರಿಯ ವೇಳೆ ಮೋಸದಿಂದ ಯುದ್ಧ ಮಾಡಿ ಪೃಥ್ವೀರಾಜನನ್ನು ಸಂಹರಿಸಿದನು. ಅದರೊಂದಿಗೆ ಭಾರತ ರಮಣಿಯ ಸೌಭಾಗ್ಯ ಸೂರೆಯಾಯಿತು. ಸಂಯುಕ್ತೆಯು ಕ್ಷತ್ರಿಯ ರಾಣಿಯರಿಗೆ ಒಪ್ಪು ವಂತೆ ಅಗ್ನಿಪ್ರವೇಶ ಮಾಡಿದಳು.

ಮಾರನೆಯ ವರ್ಷ ಪೃಥ್ವೀರಾಜನಿಗೆ ದ್ರೋಹ ಬಗೆದ ಜಯಚಂದ್ರನು ತನ್ನ ದ್ರೋಹದ ಫಲವನ್ನು ಅನುಭವಿಸಬೇಕಾಯಿತು. ಅವನು ಯಾವ ಯವನರಿಗೆ ಭಾರತವನ್ನು ಪ್ರವೇಶಿಸಲು ದಾರಿಮಾಡಿಕೊಟ್ಟನೋ ಅದೇ ಮುಸ ಲ್ಮಾನರ ಕೂರ್ಗತ್ತಿಗೆ ಬಲಿಯಾದನು. ಹೀಗೆ ಅವನು ತನ್ನ ಪಾಪದ ಫಲವನ್ನು ಭೋಗಿಸಿದನು. ಆದರೆ ಅವನು ಮಾಡಿದ ಮೂರ್ಖತನದಿಂದಾಗಿ ಭಾರತೀಯರ ಸ್ವಾತಂತ್ರ್ಯ ಹರಣವಾಗಿ, ಹಿಂದೂಧರ್ಮ - ಸಂಸ್ಕೃತಿಗಳು ಗಂಡಾಂತರಕ್ಕೆ ಸಿಲುಕಿದವು.

ಕನ್ಯಕುಬ್ಜವು ಮುಸಲ್ಮಾನರ ವಶವಾದ ಮೇಲೆ ಮಹಮದ್ ಘೋರಿಯು ಕಾಶಿಯವರೆಗೆ ದಂಡೆತ್ತಿಹೋಗಿ, ದಾರಿಯಲ್ಲಿ ಸಿಕ್ಕಿದ ಎಲ್ಲ ಪವಿತ್ರ ಹಿಂದೂ ದೇವಾಲಯಗಳನ್ನು ನಾಶಮಾಡಿದನು. ಹಿಂದೂ ಸ್ತ್ರೀಯರ ಮೇಲೆ ಅತ್ಯಾಚಾರ ನಡೆಸಿದನು. ಕೊಲೆ ಸುಲಿಗೆಗಳಿಂದ ಕಾಲಿಟ್ಟ ಪ್ರದೇಶವನ್ನು ಹಾಳುಗೆಡಹಿ ದನು. ಅವನು ತನ್ನ ಪ್ರತಿನಿಧಿಯಾಗಿ ಕುತ್ಬುದೀನನೆಂಬ ಗುಲಾಮನನ್ನು ಹಿಂದೆ ಉಳಿಸಿಹೋದರೂ ಭಾರತದ ಇತಿಹಾಸದಲ್ಲಿ ಅವನ ಆಗಮನ ನಿರ್ಗಮನ ಗಳು ರಕ್ತದಿಂದ ಬರೆಯಲ್ಪಟ್ಟ ಹೊಸ ಅಧ್ಯಾಯವಾಯಿತು.

ಗುಲಾಮಿ ಅರಸರ ಕಾಲದಲ್ಲಿ ಬಿಹಾರ, ಬಂಗಾಳ, ಗ್ವಾಲಿಯರ್, ಕಲಿಂಗರ್, ಕಾಲಪಿ, ಚೌದಾನಗಳೂ, ಮಾಳವ, ಉಜ್ಜಯನಿಗಳೂ, ಯವನರ ದುರಾಕ್ರಮಣಕ್ಕೆ ಬಲಿಯಾದವು. ಉಜ್ಜಯನಿಯ ಮಹಾ ಕಾಳಿಯ ಮಂದಿರದ ವಿಗ್ರಹಗಳು ದಿಲ್ಲಿಯ ಮಸೀದಿಯ ಮೆಟ್ಟಲುಗಳಾಗಿ ಮಾರ್ಪಟ್ಟವು.

ಕುತ್ಬುದೀನ್....
ರಜಿಯಾ ಬೇಗಂ....
ನಾಸಿರುದ್ದೀನ್....
ಗಯಾಸುದ್ದೀನ್....

ಕೈಕೂಬಾದ್....

ಹಿಂದೂ ಸಾಮ್ರಾಜ್ಯಲಕ್ಷ್ಮಿಯು ಬೆಲೆವೆಣ್ಣಾಗಿ ತುರುಕ ದೊರೆಗಳಿಗೂ, ಮದ್ಯಪಾಯಿಗಳಿಗೂ, ಸ್ತ್ರೀವ್ಯಸನಿಗಳಿಗೂ, ದುರ್ಬಲರಿಗೂ, ಹೇಡಿಗಳಿಗೂ ಊಳಿಗ ಮಾಡಬೇಕಾಯಿತು.

ಈಗ ಗುಲಾಮಿ ಅರಸರನ್ನು ಕೊಲೆಮಾಡಿ ಖಿಲ್ಜಿವಂಶದ ಎಪ್ಪತ್ತು ವರ್ಷದ ಜಲಾಲುದ್ದೀನನು ದಿಲ್ಲಿಯ ಸಿಂಹಾಸವನ್ನು ಏರಿದ್ದನು. ಅವನು ವೃದ್ಧನಾದರೂ ರಾಜ್ಯಲೋಭ ಬಿಡಲಿಲ್ಲ. ವಿದ್ವಾಂಸರಿಗೆ ಆಶ್ರಯನಾಗಿದ್ದನು. ಧರ್ಮಿಷ್ಠನೂ ವಿವೇಕಿಯೂ ಶಾಂತಪ್ರಿಯ ದೊರೆಯಾದರೂ ಅವನ ಕಾಲದಲ್ಲಿ ದೇಶದ ಮೂಲೆ ಮೂಲೆಗಳಲ್ಲಿ ದಂಗೆಗಳು ಉಂಟಾಗಿದ್ದವು. ಎಲ್ಲೆಲ್ಲೂ ಅಸಮಾಧಾನ, ಅಸಂತೃಪ್ತಿಗಳ ಹೊಗೆಯಾಡುತ್ತಿದ್ದುವು. ಅರಾಜಕತೆ ತಲೆದೋರಿತ್ತು. ಅನಾಯಕತೆಯಿಂದ ಸಾಮ್ರಾಜ್ಯದ ಆಡಳಿತಯಂತ್ರವು ಕುಸಿದಿತ್ತು. ಎಲ್ಲೆಲ್ಲಿ ನೋಡಿದರೂ ಲಂಚ, ವಿದ್ರೋಹ, ಅನ್ಯಾಯದ ದಂಡನೆ, ಅತ್ಯಾಚಾರಗಳೂ, ಮತಾಂತರಗಳೂ ದೇಶದಲ್ಲಿ ಕ್ಷೋಭೆಯನ್ನುಂಟುಮಾಡಿದ್ದವು. ರಾಜ್ಯಕ್ರಾಂತಿಗೆ ಎಲ್ಲೆಡೆಯಲ್ಲೂ ಅನುಕೂಲವಾದ ವಾತಾವರಣ ಉಂಟಾಗಿತ್ತು. ಅದಕ್ಕೆ ತಕ್ಕಂತೆ ಕೆಲವು ತಿಂಗಳ ಹಿಂದೆ ಜಲಾಲುದ್ದೀನನನ್ನು ಕೊಲೆಮಾಡುವ ಪ್ರಯತ್ನವೊಂದು ನಡೆದಿತ್ತು.

ದುರ್ಬಲನಾದ ಜಲಾಲುದ್ದೀನನನ್ನು ಸಿಂಹಾಸನದಿಂದ ಉರುಳಿಸಲು ಅವನ ಆಸ್ಥಾನಿಕರೇ ಪಿತೂರಿ ಮಾಡಿದ್ದರು. ಆದರೆ ಸುದೈವದಿಂದ ಈ ಕೊಲೆಯ ಸಂಚು ಕಾರ್ಯಗತವಾಗುವ ಮೊದಲೇ ಜಲಾಲುದ್ದೀನನಿಗೆ ತಿಳಿದು ಅವನು ಪಾರಾದನು. ಕೊಲೆಗಾರರು ಸಭೆ ಸೇರಿದ್ದ ಸ್ಥಳಕ್ಕೆ ಬಂದು ಕೈಗೆ ಕತ್ತಿ ಹಿರಿದು,

"ದ್ರೋಹಿಗಳಿರಾ, ನಿಮ್ಮಲ್ಲಿ ಪೌರುಷವಿದ್ದರೆ, ನನ್ನೊಡನೆ ಹೋರಾಡಿ. ನನ್ನನ್ನು ಕೊಂದು ಅನಂತರ ಸಿಂಹಾಸನವನ್ನು ಆಕ್ರಮಿಸಿಕೊಳ್ಳಿ" ಎಂದು ಧೈರ್ಯದಿಂದ ಹೇಳಿದನು.

ಅವನ ದೈತ್ಯಾವೇಶವನ್ನು ನೋಡಿ ಅಲ್ಲಿದ್ದವರೆಲ್ಲರೂ ಗಾಬರಿಗೊಂಡರು. ಅವರಲ್ಲಿ ಯಾರೊಬ್ಬರಿಗೂ ದೊರೆಯನ್ನು ಎದುರಿಸಿ ನಿಲ್ಲುವ ಧೈರ್ಯವಾಗಲಿಲ್ಲ. ಅವರು ಅಪಮಾನಿತರಾಗಿ ಲಜ್ಜೆಯಿಂದ ತಲೆತಗ್ಗಿಸಿ ನಿಂತಾಗ, ಜಲಾಲು

ದ್ದೀನನು ಆ ದ್ರೋಹಿಗಳ ಮುಖವನ್ನು ತಿರಸ್ಕಾರದಿಂದ ನೋಡಿ ಹೇಳಿದನು : "ದ್ರೋಹಿಗಳಿರಾ, ನನ್ನ ಯಾವ ಅಪರಾಧಕ್ಕಾಗಿ ಈ ಶಿಕ್ಷೆ ವಿಧಿಸಬೇಕೆಂದು ನಿಶ್ಚಯಿಸಿರುವಿರಿ ?"

ಅವರು ಯಾರೂ ಈ ಮಾತಿಗೆ ಉತ್ತರ ಕೊಡದೆ ತಮ್ಮ ತಪ್ಪನ್ನು ಕ್ಷಮಿಸಲು ದೊರೆಯ ಕಾಲಿಗೆ ಬಿದ್ದರು. ಜಲಾಲುದ್ದೀನನು ಆ ಸಮಯದಲ್ಲಿ ಸಿಟ್ಟಿನ ಕೈಗೆ ಬುದ್ಧಿಯನ್ನು ಕೊಡದೆ ತುಂಬಾ ಉದಾರತನದಲ್ಲಿ ಅವರನ್ನು ನಡೆಸಿಕೊಂಡನು. ಅವನು ಸೇಡಿಗಾಗಿ ಹಂಬಲಿಸದೆ, ಅವರ ತಪ್ಪುಗಳನ್ನು ಕ್ಷಮಿಸಿದನು.

ಅಲ್ಲಿಂದಾಚೆಗೆ ಅವನ ಮೇಲೆ ಯಾರೂ ಕೈಮಾಡಲಿಲ್ಲ. ಆದರೂ ಅರಮನೆಯಲ್ಲೂ, ಆಸ್ಥಾನದಲ್ಲೂ, ದೇಶದ ಮೂಲೆ ಮೂಲೆಗಳಲ್ಲೂ ಅಶಾಂತಿ ಅಸಂತೃಪ್ತಿಗಳು ತಾಂಡವಾಡುತ್ತಿದ್ದವು. ಯಾವ ಗಳಿಗೆಯಲ್ಲಾದರೂ ಖಿಲ್ಜಿ ಸಂತತಿ ಕೊನೆಗೊಳ್ಳಬಹುದಾಗಿತ್ತು. ಆದುದರಿಂದ ರಾಮದೇವರಾಯನು ಈ ಸುಸಂಧಿಯನ್ನು ನೋಡಿ, ಸಾಧ್ಯವಾದರೆ ದೆಹಲಿಯ ಮೇಲೆ ದಂಡೆತ್ತಿ ಹೋಗಿ, ಯವನರ ಪ್ರಭುತ್ವಕ್ಕೆ ಇತಿಶ್ರೀ ಹಾಡಲು ನಿಶ್ಚಯಿಸಿದ್ದನು. ಅದರ ಪೂರ್ವಪೀಠಿಕೆಯಾಗಿ ಉತ್ತರದ ಪರಿಸ್ಥಿತಿಯನ್ನು ಅರಿತುಬರಲು ತನ್ನ ಹಿರಿಯ ಮಗ ಶಂಕರದೇವನನ್ನು ಕಳುಹಿಸಿಕೊಟ್ಟಿದ್ದನು. ಪರದೇಶದಲ್ಲಿರುವಾಗ ಅವರಿಗೆ ಯವನರಿಂದ ತೊಂದರೆಯಾಗದಿರಲೆಂದು ದೊಡ್ಡದೊಂದು ಸೈನ್ಯವೂ ಛದ್ಮ ವೇಷದಲ್ಲಿ ಅವರನ್ನು ಹಿಂಬಾಲಿಸಿತ್ತು. ಆದರೆ ರಾಮದೇವರಾಯನೊಂದು ಬಗೆದಿದ್ದರೆ, ದೈವವೊಂದು ಬಗೆಯಿತು. ಯಾವ ಶತ್ರುವನ್ನು ಹುಡುಕಿಕೊಂಡು ತಾನು ದೆಹಲಿಗೆ ಹೋಗಬೇಕೆಂದಿದ್ದನೋ, ಅದೇ ಶತ್ರುವು ಅವನ ಮನೆಯ ಬಾಗಿಲಿಗೇ ಬಂದು ಭೇಟಿ ಕೊಟ್ಟಿದ್ದನು. ಯಾವ ಸೈತಾನನನ್ನು ದೇಶದಿಂದ ಹೊರಗಟ್ಟಬೇಕೆಂದು ಅವನು ಆಶಿಸಿದ್ದನೋ, ಅದೇ ಸೈತಾನನು ಅಲ್ಲಾವುದ್ದೀನನ ರೂಪದಲ್ಲಿ ದೇವಗಿರಿಯ ಮುಂದೆ ಕಾಣಿಸಿಕೊಂಡಿದ್ದನು. ಅದೂ ಅನಿರೀಕ್ಷಿತವಾಗಿ. ದೇವಗಿರಿಯ ರಕ್ಷಣೆಗೆ ಸಾಕಷ್ಟು ಸಂಖ್ಯೆಯಲ್ಲಿ ಸೈನ್ಯವು ಇಲ್ಲದೆ ಇದ್ದ ಸಮಯದಲ್ಲಿ ಅಲ್ಲಾವುದ್ದೀನ ತನ್ನ ಅಸಂಖ್ಯಾತ ಬಲದೊಡನೆ ಬಂದು ದೇವಗಿರಿಗೆ ಮುತ್ತಿಗೆ ಹಾಕಿದ್ದನು. ಇವೆಲ್ಲವೂ ಆಕಸ್ಮಿಕವೆಂಬಷ್ಟು ಅನಿರೀಕ್ಷಿತವಾಗಿ ಸಂಭವಿಸಿತ್ತು.

# ೬

ಅಲ್ಲಾವುದ್ದೀನನು ಜಲಾಲುದ್ದೀನ ಖಿಲ್ಜಿಯ ಸೋದರಳಿಯ – ಹಾಗೂ ಅವನ ಮಗಳ ಗಂಡ. ಇವನು ಬಾಲ್ಯದಿಂದಲೂ ಜಲಾಲುದ್ದೀನನ ಪೋಷಣೆಗೆ ಸೇರಿದ್ದನು. ಇವನು ಅತ್ಯಂತ ಮಹತ್ವಾಕಾಂಕ್ಷಿಯಾದ ಯುವಕ. ತಾನು ಅಲೆಕ್ಸಾಂಡರನಂತೆ ಪ್ರಪಂಚವನ್ನು ಗೆದ್ದು ಸಿಕಂದರನೆನಿಸಿಕೊಳ್ಳಬೇಕೆಂದು ಕನಸು ಕಾಣುತ್ತಿದ್ದನು ಇವನು ಮಹತ್ವಾಕಾಂಕ್ಷಿಯಾಗಿರುವುದರ ಜತೆಯಲ್ಲೇ ಮುತ್ಸದ್ದಿಯೂ, ರಾಜಕಾರಣಪಟುವೂ, ಶೂರನೂ ಸಾಹಸಿಯೂ ಆಗಿದ್ದನು. ಅಷ್ಟೇ ಕುಟಿಲನೂ, ಸ್ತ್ರೀವ್ಯಸನಿಯೂ, ಮದ್ಯಪಾಯಿಯೂ ಆಗಿದ್ದನು. ಅವನು ರಾಜ್ಯಲೋಭದಿಂದ ತನ್ನನ್ನು ಚಿಕ್ಕಂದಿನಿಂದಲೂ ತಂದೆಗಿಂತಲೂ ಅತಿಶಯವಾಗಿ ಪ್ರೀತಿಸುತ್ತಾ ಬಂದಿದ್ದ ಮಾವನನ್ನು ಕೊಲೆಮಾಡಲು ಹೇಸಿರಲಿಲ್ಲ. ಜಲಾಲುದ್ದೀನನನ್ನು ಕೊಲೆಮಾಡಲು ಅವನ ಆಸ್ಥಾನಿಕರು ನಡೆಸಿದ್ದ ಪಿತೂರಿಯಲ್ಲಿ ಅವನು ಮಹತ್ವದ ಪಾತ್ರ ವಹಿಸಿದ್ದನು. ತಾನು ಹಾಲೆರೆದು ಸಾಕಿದ ಸೋದರಳಿಯನೇ ಹಾವಾದನೆಂದು ತಿಳಿದಾಗ, ಜಲಾಲುದ್ದೀನನಿಗೆ ತುಂಬಾ ವಿಷಾದವಾಯಿತು. ಅವನು ಅಲ್ಲಾವುದ್ದೀನನನ್ನು ಬಳಿಗೆ ಕರೆಸಿಕೊಂಡು ಹೀಗೆ ಹೇಳಿದನು :

“ ಬೇಟಾ, ಅಲ್ಲಾವುದ್ದೀನ್, ನೀನು ಇನ್ನೂ ಬಚ್ಚ. ನನ್ನ ಕಣ್ಣೆದುರಿನಲ್ಲಿ ಬೆಳೆದ ಹುಡುಗ ನೀನು. ಇನ್ನೂ ಮೀಸೆ ಕೂಡ ಕಪ್ಪಾಗಿಲ್ಲ. ಆಗಲೇ ನೀನು ದ್ರೋಹಿಗಳ ಕಡೆ ಸೇರಿಕೊಂಡು ನನ್ನನ್ನು ಕೊಲೆಮಾಡಲು ಸಂಚು ಮಾಡಿದೆಯಾ ? ಈ ದ್ರೋಹಕ್ಕೆ ನಾನು ಮಾಡಿದ ಅಪರಾಧವಾದರೂ ಏನು ? ನನ್ನ ವಿರುದ್ಧ ನೀನೇಕೆ ಕತ್ತಿ ಕಟ್ಟಿರುವೆ ?”

ಈ ಮಾತು ಕೇಳಿ ಅಲ್ಲಾವುದ್ದೀನನಿಗೆ ಏನು ಹೇಳಬೇಕೋ ತೋಚದೆ ಹೋಯಿತು. ಈಗ ತಪ್ಪು ಒಪ್ಪಿಕೊಳ್ಳದ ಹೊರತು ಗತ್ಯಂತರವಿರಲಿಲ್ಲ.

“ ದಾದಾಜಿ, ನಾನು ತಿಳಿಯದೆ ತಪ್ಪುಮಾಡಿದೆ. ಸ್ವಾರ್ಥಿಗಳ ಮಾತು ಕೇಳಿಕೊಂಡು ದೇವರಂತೆ ಇರುವ ನಿಮ್ಮ ಮೇಲೆ ಕತ್ತಿ ಎತ್ತಿದೆ. ನಿಮ್ಮ ಅನ್ನದ ಋಣ ಹೊತ್ತು ತಮಗೆ ಎರಡು ಬಗೆದೆ. ನಾನು ತಿಳಿಯದೆ ಮಾಡಿದ ಅಪರಾಧ

ವನ್ನು ತಾವು ಅಲ್ಲಾನ ಹೆಸರಿನಲ್ಲಿ ಕ್ಷಮಿಸಿ, ನನ್ನನ್ನು ಕಾಪಾಡಬೇಕು" ಎಂದು ಹೇಳಿ ಸುಲ್ತಾನನ ಕಾಲುಗಳನ್ನು ಹಿಡಿದುಕೊಂಡನು.

ಅಲ್ಲಾವುದ್ದೀನನ ವರ್ತನೆಯಿಂದ ಜಲಾಲುದ್ದೀನನ ಮನಸ್ಸು ಕರಗಿತು. ಅವನು ವಿದ್ರೋಹವನ್ನು ಮರೆತು,

"ಬೇಟಾ, ಆದುದು ಆಗಿಹೋಯಿತು. ಅದಕ್ಕಾಗಿ ಈಗ ಚಿಂತಿಸಿ ಫಲವಿಲ್ಲ. ಇನ್ನು ಮುಂದೆ ನೀನು ಈ ನೀಚರಿಂದ ದೂರವಿರು! ಸ್ವಾರ್ಥ ಸಾಧಕರ ಹಾಗೂ ವಿಶ್ವಾಸಘಾತುಕರ ಬಲೆಯಿಂದ ದೂರವಿರು! ಇದರಿಂದ ನಿನಗೆ ಶ್ರೇಯಸ್ಸಿದೆ. ಈ ಮಾತನ್ನು ನಿನ್ನ ಶ್ರೇಯಾಕಾಂಕ್ಷೆಯಿಂದ ಹೇಳು ತ್ತಿದ್ದೇನೆ. ಏಕೆಂದರೆ, ನೀನು ಬೇರೆಯಲ್ಲ – ನನ್ನ ಮಕ್ಕಳು ಬೇರೆಯಲ್ಲ. ನೀನು ಅಡ್ಡದಾರಿ ತುಳಿದರೆ ನನಗೆ ತುಂಬಾ ಸಂಕಟವಾಗುತ್ತದೆ. ಇನ್ನು ಮೇಲಾದರೂ ನೀನು ಬುದ್ಧಿವಂತನಾಗಿರು" ಎಂದು ಹೇಳಿ ಅಲ್ಲಾವುದ್ದೀನನಿಗೆ ಬುದ್ಧಿ ಹೇಳಿ ಅವನನ್ನು ದೂರವಿಟ್ಟಿರುವುದು ಒಳ್ಳೆಯದೆಂದು ಕಾರಾ ಪ್ರಾಂತ್ಯಕ್ಕೆ ಅಧಿಪತಿಯನ್ನಾಗಿ ಮಾಡಿದನು.

ಅಲ್ಲಾವುದ್ದೀನನಿಗೆ ಬೇಕಾಗಿದ್ದುದೂ ಇದೇ. ಅವನಿಗೆ ತಾನು ಜಲಾಲು ದ್ದೀನನಿಗೆ ದ್ರೋಹ ಬಗೆದುದು ಬಯಲಾದ ಮೇಲೆ ರಾಜಧಾನಿಯಲ್ಲಿ ಇರಲು ಧೈರ್ಯವಿರಲಿಲ್ಲ. ಇಂದು ತನ್ನನ್ನು ಕ್ಷಮಿಸಿರುವ ಸುಲ್ತಾನನು ನಾಳೆ ಬೇರೊಬ್ಬರ ಮಾತು ಕೇಳಿಕೊಂಡು ತನ್ನ ಮೇಲೆ ಶಂಕಿಸಿ ಉಗ್ರಕ್ರಮ ಕೈಗೊಳ್ಳ ಬಹುದೆಂದು ಹೆದರಿದನು. ಈ ಸಮಯದಲ್ಲಿ ವಯಸ್ಸಿನಿಂದ ಅರುಳು ಮರು ಳಾಗಿದ್ದ ಮಾವನಿಂದ ದೂರವಿರುವುದೇ ಕ್ಷೇಮವೆಂದು ಭಾವಿಸಿದನು. ಅಲ್ಲದೆ ತನ್ನ ಮಹತ್ವಾಕಾಂಕ್ಷೆಗಳನ್ನು ಕಾರ್ಯಗತ ಮಾಡಲು ಸ್ವಾತಂತ್ರ್ಯ ಬೇಕಾಗಿ ಇತ್ತು. ಅಲ್ಲದೆ ತನ್ನ ದುಷ್ಟ ಆಲೋಚನೆಗಳನ್ನು ಕಾರ್ಯರೂಪಕ್ಕೆ ತರಲು ದೂರದಲ್ಲಿರುವುದೂ ಅಗತ್ಯವಾಗಿತ್ತು. ಅಂತಲೇ ಕೇವಲ ಐದು ಸಾವಿರ ಅಶ್ವಪಡೆ, ಹತ್ತು ಸಾವಿರ ಪದಾತಿ ದಳದೊಡನೆ ಹೊರಟು ಕರಾ ಪ್ರಾಂತ್ಯದ ಸುಭೇದಾರಿಯನ್ನು ವಹಿಸಿಕೊಂಡನು.

ಅಲ್ಲಾವುದ್ದೀನನು ಕಾರಾಕ್ಕೆ ಬಂದೊಡನೆಯೇ ತನ್ನ ದುಷ್ಟ ಯೋಚನೆ ಗಳನ್ನು ಕಾರ್ಯಗತ ಮಾಡುವುದಕ್ಕೆ ಪ್ರಯತ್ನಿಸಿದನು. ಅವನಿಗೆ ಆಸ್ಥಾನದ ಕವಿಯಾಗಿದ್ದ ಅಮೀರ್ ಖುಸ್ರುವಿನ ಬಾಯಲ್ಲಿ ತನ್ನ ಮೂವತ್ತೆರಡನೇ

ವಯಸ್ಸಿಗೇ ಜಗತ್ತನ್ನೆಲ್ಲಾ ಗೆಲ್ಲಲು ಹೊರಟು, ಭಾರತಕ್ಕೂ ಬಂದಿದ್ದ ಅಲೆಕ್ಸಾಂಡರನ ಸಾಹಸದ ಕಥೆ ಕೇಳಿದ ಲಾಗಾಯಿತು, ತಾನೂ ಅವನಂತೆ ಜಗತ್ತನ್ನು ಗೆದ್ದು ಸಿಕಂದರನೆಂಬ ಬಿರುದಿಗೆ ಪಾತ್ರನಾಗಬೇಕೆಂಬ ಆಕಾಂಕ್ಷೆ ಬಲವತ್ತರವಾಗಿತ್ತು. ಇದನ್ನು ಕಾರ್ಯರೂಪಕ್ಕೆ ತರಲು ದಿಲ್ಲಿಯ ಸಿಂಹಾಸನ ವನ್ನು ತನ್ನದು ಮಾಡಿಕೊಳ್ಳುವುದು ಅನಿವಾರ್ಯವಾಗಿತ್ತು. ಅದಕ್ಕಾಗಿ ಜಲಾಲುದ್ದೀನನನ್ನು ಕೊಲೆಮಾಡುವುದು ಅವಶ್ಯಕವಾಗಿತ್ತು. ಈ ಎಲ್ಲ ಕಾರ್ಯಕ್ಕೆ ಸಮರ್ಥರೂ, ಸಾಹಸಿಗಳೂ, ಸ್ವಾಮಿನಿಷ್ಠ ಸೇವಕರೂ ಆದ ಸೈನಿಕರ ತಂಡ ಅಗತ್ಯವಾಗಿತ್ತು. ಅದನ್ನು ಕಟ್ಟಲು ಯಥೇಚ್ಛವಾಗಿ ಹಣ ಬೇಕಾಗಿತ್ತು.

ಅಲ್ಲಾವುದ್ದೀನನು ಬಾಲ್ಯದಿಂದಲೂ ತನ್ನ ಸುತ್ತಲೂ ತನ್ನ ದುಷ್ಟ ಕಾರಾಸ್ಥಾನಕ್ಕೆ ತಕ್ಕ ಸಂಗಡಿಗರನ್ನು ಆಯ್ದುಕೊಳ್ಳುತ್ತಾ ಬಂದಿದ್ದನು. ಅವನು ಧನಕನಕ ಲೋಭದಿಂದಲೂ, ಅಧಿಕಾರ ವ್ಯಾಮೋಹದಿಂದಲೂ, ಕುಟಿಲತನಕ್ಕೆ ಹೆಸರಾದ ಧೂರ್ತರನ್ನು ತನ್ನವರಾಗಿ ಮಾಡಿಕೊಂಡಿದ್ದನು. ಅವನು ತನ್ನ ಸಂಗಡಿಗರ ಸ್ವಾಮಿನಿಷ್ಠೆಯನ್ನು ಪರೀಕ್ಷಿಸಲು ಅನೇಕ ಮಾರ್ಗಗಳನ್ನು ಹುಡುಕಿದ್ದನು.

ಅವನು ಬೀದಿಯಲ್ಲಿ ಯಾವಳಾದರೂ ಸುಂದರ ಸ್ತ್ರೀಯನ್ನು ನೋಡಿದರೆ ಅವಳನ್ನು ತನ್ನವಳನ್ನಾಗಿ ಮಾಡುವ ಹೊಣೆಗಾರಿಕೆಯನ್ನು ಅವರಿಗೆ ವಹಿಸುತ್ತಿದ್ದನು. ಇದರಲ್ಲಿ ವಿಫಲರಾದವರನ್ನು ನಿರ್ದಯದಿಂದ ಕೊಲ್ಲುತ್ತಿದ್ದನು. ಅವನು ಆಜ್ಞೆಮಾಡಿದರೆ ಅವರು ಸ್ವಂತ ತಂದೆತಾಯಿಗಳನ್ನೂ ಕೊಲ್ಲಲು ಸಿದ್ಧರಾಗಬೇಕಾಗಿತ್ತು. ಅವರು ಹಿಂಜರಿದರೆ ಅಲ್ಲಾವುದ್ದೀನನ ಕೂರ್ಗತ್ತಿಗೆ ಬಲಿಯಾಗಬೇಕಾಗಿತ್ತು. ಈ ಪರೀಕ್ಷೆಯಲ್ಲಿ ಅವರು ಯಶಸ್ವಿಯಾದರೆ, ಅಂತಹವರನ್ನು ಅವನು ತನ್ನ ಇನ್ನೊಂದು ಜೀವವೆಂಬಂತೆ ನೋಡಿಕೊಳ್ಳುತ್ತಿದ್ದನು. ಇಂತಹ ನೂರಾರು ಸಂಗಡಿಗರು ಇಂದು ಅವನ ಸೈನ್ಯದಲ್ಲಿ ಇದ್ದರು. ಅವರ ಬೆಂಬಲದಿಂದ ಕಾರಾಕ್ಕೆ ಬಂದೊಡನೆಯೇ ತನ್ನ ನೀಚ ಯೋಜನೆಗೆ ಪ್ರಥಮ ಸೋಪಾನವಾದ ಹಣ ಸಂಗ್ರಹಣ ಕಾರ್ಯಕ್ಕೆ ತೊಡಗಿದನು.

ಆ ಸಮಯದಲ್ಲಿ ಯಾರೋ ದಾರಿಹೋಕರು ದೇವಗಿರಿ ಯಾದವರ ವೈಭವವನ್ನೂ, ಅವರ ಸಂಪತ್ತನ್ನೂ ವರ್ಣಿಸಿ ಹೇಳಿದರು. ಈ ವಾರ್ತೆಯನ್ನು

ಕೇಳಿ ಅಲ್ಲಾವುದ್ದೀನನ ಬಾಯಲ್ಲಿ ನೀರೂರಿತು. ಅವನು ತನ್ನ ವಕ್ರದೃಷ್ಟಿ ದೇವಗಿರಿಯ ಮೇಲೆ ಹರಿಸಿದ್ದನು.

ಅವನು ಮಾಡಿದ ಮೊದಲನೆಯ ಕಾರ್ಯವೆಂದರೆ ದಿಲ್ಲಿಯ ಸುಲ್ತಾನನಾದ ಜಲಾಲುದ್ದೀನನ ಅಪ್ಪಣೆಯನ್ನು ಪಡೆದು ಮಧ್ಯಭಾರತದ ಭಿಲ್ಸಾದ ಮೇಲೆ ದಂಡೆತ್ತಿ ಹೋದನು. ಅನಂತರ ಸೇವೂಣರ ಸಾಮಂತ ದೊರೆ ಎಲಿಚ್‌ಪುರದ ಎಲರಾಜನ ಮೇಲೆ ಬಿದ್ದು ಅವನನ್ನು ಓಡಿಸಿ, ಎಲಿಚ್‌ಪುರವನ್ನು ಆಕ್ರಮಿಸಿಕೊಂಡನು. ಅಲ್ಲಿಂದ ಮುಂದೆ ನುಗ್ಗಿ ತನ್ನ ಎಂಟು ಸಾವಿರ ಅಶ್ವದಳ, ಹತ್ತು ಸಾವಿರ ಪದಾತಿ ದಳದೊಡನೆ ದೇವಗಿರಿಯ ಸಮೀಪದಲ್ಲಿದ್ದ ಲಾಸುರದ ಬಳಿ ಬೀಡುಬಿಟ್ಟನು. ಈ ಸುದ್ದಿ ಕಾಳ್ಗಿಚ್ಚಿನಂತೆ ಬಂದು ರಾಮದೇವರಾಯನನ್ನು ತಲ್ಲಣಗೊಳಿಸಿತ್ತು.

ಮೊದಲು ರಾಮದೇವರಾಯನು ಈ ಸುದ್ದಿಯನ್ನು ನಂಬಲಿಲ್ಲ. ಎಲ್ಲಾದರೂ ಉಂಟೆ? ದಿಲ್ಲಿಯ ರಾಜಕೀಯದ ಪರಿಸ್ಥಿತಿ ಹದಗೆಟ್ಟಿರುವಾಗ ಸುಲ್ತಾನನ ಸೈನ್ಯ ಅಧಿಕ ಸಂಖ್ಯೆಯಲ್ಲಿ ತನ್ನ ರಾಜಧಾನಿ ಸಮೀಪದಲ್ಲಿ ಬಂದು ಬೀಡುಬಿಟ್ಟಿದೆ ಎಂದರೆ ಯಾರು ನಂಬುವ ಮಾತು? ಇದು ಸುಳ್ಳು ವಾರ್ತೆ ಇರಬೇಕು – ಎಂದುಕೊಂಡು ಈ ಸುದ್ದಿಯನ್ನು ಹೇಳಿದ ಬೇಹುಗಾರರನ್ನು ಗದರಿಸಿದನು. ಅವರು ಈ ವಾರ್ತೆ ಅಪ್ರಿಯವಾದರೂ ಯಥಾರ್ಥವೆಂದು ಬಿನ್ನವಿಸಿಕೊಂಡಾಗ, ನಿರ್ವಾಹವಿಲ್ಲದೆ ಇದನ್ನು ನಂಬಬೇಕಾಯಿತು.

ಇತ್ತೀಚೆಗೆ ಲಾಸುರದಿಂದ ಬಂದ ಗೂಢಾಚಾರರು ಇನ್ನಷ್ಟು ವಿವರಗಳನ್ನು ತಂದಿದ್ದರು. ದಂಡೆತ್ತಿ ಬಂದಿರುವವನು ದಿಲ್ಲಿಯ ಸುಲ್ತಾನನ ಸೋದರಳಿಯ ಅಲ್ಲಾವುದ್ದೀನನಂತೆ. ಇನ್ನೂ ಮೂವತ್ತು ವರ್ಷ ತುಂಬಿದ ಯುವಕನಂತೆ. ಅವನ ಬಳಿ ಹತ್ತು ಸಾವಿರಕ್ಕಿಂತ ಹೆಚ್ಚಿಗೆ ಅಶ್ವದಳವಿದೆಯಂತೆ. ಅವರು ಒಳ್ಳೆಯ ಯೋಧರಂತೆ! ಅವರ ಕುದುರೆಗಳು ಅರಬ್ಬೀ ಟಾಕಣಗಳಂತೆ! ದೇವಗಿರಿಯ ಸಂಪತ್ತನ್ನು ಕೇಳಿ ಅದನ್ನು ಕೊಳ್ಳೆಹೊಡೆಯಲು ಬಂದಿರುವರಂತೆ! ....

ಇಂತಹವೇ ನೂರಾರು ಸುದ್ದಿಗಳು ಕಾದ ಸೀಸನಂತೆ ಕಿವಿಯನ್ನು ಭೇದಿಸಿದ್ದವು.

ಇದನ್ನೆಲ್ಲಾ ಕೇಳಿ ರಾಮದೇವರಾಯನು ತಲೆಯ ಮೇಲೆ ಕೈಹೊತ್ತು ಕುಳಿತನು. ರಾಜಧಾನಿಯಲ್ಲಿ ಯುವರಾಜ ಕುಮಾರ ಶಂಕರದೇವನು ಇಲ್ಲದಿರುವ ಸಮಯದಲ್ಲಿ – ರಾಜಧಾನಿಯ ರಕ್ಷಣೆಗೆ ಸಾಕಷ್ಟು ಸೈನ್ಯ ಸಂಗ್ರಹವಿಲ್ಲದ ಸಮಯದಲ್ಲಿ ಇಂತಹ ಧಾಳಿಯನ್ನು ಅವನು ಕನಸು ಮನಸಿನಲ್ಲೂ ಊಹಿಸಿರಲಿಲ್ಲ. ಮುಮ್ಮಡಿಸಿಂಗನು ಜಗದಾಪಿ ಮುಂತಾದವರ ವಿದ್ರೋಹವನ್ನು ಅಡಗಿಸಿದ ಮೇಲೆ ತನ್ನ ಸೈನ್ಯ ಸಮೇತ ದೊರೆವಾಡಿಗೆ ಹಿಂದಿರುಗಿದ್ದನು. ಈ ಸಮಯದಲ್ಲಿ ಮುಮ್ಮಡಿಸಿಂಗನು ಬಳಿಯಲ್ಲಿ ಇದ್ದಿದ್ದರೆ .... ಇದ್ದಿದ್ದರೆ .... ಎಂದು ಯೋಚಿಸುತ್ತಿರುವಲ್ಲಿ, ರಾಮದೇವರಾಯನು ಯಾರನ್ನು ನೆನೆಸುತ್ತಿದ್ದನೋ ಆ ಮುಮ್ಮಡಿಸಿಂಗನೇ ದೇವಗಿರಿಗೆ ಬಂದಿದ್ದನು. ಅವನು ಗೂಢಚಾರರಿಂದ ಯವನರು ಯಾದವ ಸಾಮ್ರಾಜ್ಯದೊಳಗೆ ನುಗ್ಗಿರುವರೆಂಬ ಸಂಗತಿಯನ್ನು ಕೇಳಿ ದೇವಗಿರಿಗೆ ಓಡಿಬಂದಿದ್ದನು.

ಇದನ್ನು ಕೇಳಿ ರಾಮದೇವರಾಯನಿಗೆ ಹೋದ ಜೀವ ಬಂದಂತಾಯಿತು. ಅವನು ಸಂತೋಷದಿಂದ ಕುಣಿದಾಡಿದನು. ಮುಳುಗುತ್ತಿದ್ದವನಿಗೆ ದೋಣಿಯೊಂದು ಸಿಕ್ಕಿದಂತೆ ಆಗಿತ್ತು. ಮುಮ್ಮಡಿಸಿಂಗನು ಬರುತ್ತಲೇ, ಆವನನ್ನು ಆಲಿಂಗಿಸಿ ಅಂತರ್‌ಗೃಹಕ್ಕೆ ಕರೆದೊಯ್ದು ನಡೆದ ಸಂಗತಿಯನ್ನು ತಿಳಿಸಿದನು :

“ ಮುಮ್ಮಡಿಸಿಂಗರೇ, ನಾನು ಇದೇ ತಾನೇ ನಿಮ್ಮನ್ನು ನೆನೆಯುತ್ತಿದ್ದೆ. ನಿಮಗೆ ನೂರು ವರ್ಷ ಆಯುಸ್ಸು. ನೀವು ಬಾರದೆ ಇದ್ದಿದ್ದರೆ ನಾನೇ ನಿಮ್ಮನ್ನು ಕರೆತರಲು ದೂತರನ್ನು ಅಟ್ಟುತ್ತಿದ್ದೆ. ನೀವು ಬಂದುದು ಒಳ್ಳೆಯದೇ ಆಯಿತು. ನನಗೆ ಈಗ ಹೋದ ಜೀವ ಮತ್ತೆ ಬಂದಂತೆ ಆಗಿದೆ. ಇನ್ನು ನನಗೆ ಯವನರ ಭಯವಿಲ್ಲ ” ಎಂದನು.

“ ಪ್ರಭು, ನಮ್ಮ ಗಡಿಯೊಳಗೆ ಯವನರು ಅಲ್ಲಾವುದ್ದೀನನೆಂಬ ತರುಣ ಸಾಹಸಿಯ ನೇತೃತ್ವದಲ್ಲಿ ನುಗ್ಗಿ ಹಾವಳಿ ಮಾಡುತ್ತಿದೆ ಎಂಬ ಸುದ್ದಿಯನ್ನು ಕೇಳಿ ಓಡಿಬಂದೆ. ನಾನು ಇಲ್ಲಿಗೆ ಬರುವುದರೊಳಗೆ ಎಲಿಚ್‌ಪುರವು ಯವನರ ವಶವಾಗಿ, ಅವರು ಲಾಸುವದ ಬಳಿಗೆ ಬಂದಿದ್ದಾರೆಂದು ಕೇಳಿದೆ. ಈ ಸುದ್ದಿ ನಿಜವಾದರೆ ಇದು ಭಯಂಕರವಾದ ವಾರ್ತೆ ” ಎಂದು ಆತಂಕದಿಂದ ಹೇಳಿದನು.

"ಏಕೆ ಈಗೇನಾಯಿತು ?"

"ಪ್ರಭು, ಯವನರು ಯಾವುದೇ ಸುದ್ದಿ ಕೊಡದೆ ಹಠಾತ್ತನೆ ಲಾಸುರದ ಮೇಲೆ ದಾಳಿ ಇಟ್ಟಿರುವುದನ್ನು ನೋಡಿದರೆ ಇದರಲ್ಲಿ ಯಾವುದೋ ದುರುದ್ದೇಶ, ವಿರುವಂತೆ ಕಾಣಿಸುತ್ತಿದೆ. ಶತ್ರುವು ನಾವು ಊಹಿಸಿರುವುದಕ್ಕಿಂತಲೂ ಚತುರ. ಅವನು ಅತ್ಯಲ್ಪ ಕಾಲದಲ್ಲಿ ಎಲಿಚ್‌ಪುರವನ್ನು ಜಯಿಸಿ, ಲಾಸುರದ ಬಳಿಗೆ ಬಂದಿರುವುದನ್ನು ನೋಡಿದರೆ ಯಾಕೋ ಗಾಬರಿಯಾಗುತ್ತಿದೆ" ಎಂದನು.

"ಮುಮ್ಮಡಿಸಿಂಗರೇ, ಧೈರ್ಯ ಹೇಳಬೇಕಾದ ನಿಮ್ಮಂತಹವರೇ ಹೀಗೆ ಗಾಬರಿಗೊಂಡರೆ ಇನ್ನು ನಮ್ಮ ಗತಿ ಏನು ?" ಕಳವಳದಿಂದ ರಾಮದೇವ ರಾಯನು ಹೇಳಿದ.

"ಪ್ರಭು, ಯವನರು ಮಾಯಾವಿಗಳು. ನಿಜಕ್ಕೂ ಅವರಿಗೆ ಸೈತಾನರ ಬೆಂಬಲವಿದೆ. ಇಲ್ಲದೆ ಇದ್ದರೆ ನಮ್ಮ ರಾಜಧಾನಿಯ ರಕ್ಷಣೆಗೆ ಸಾಕಷ್ಟು ಸೈನ್ಯವಿಲ್ಲವೆಂಬುದು ಅವರಿಗೆ ಹೇಗೆ ತಿಳಿಯಬೇಕು. ಶಂಕರದೇವರ ಹಿಂದೆ ಹೋಗಿರುವ ಸೈನ್ಯ ಹಿಂದಕ್ಕೆ ಕರೆಸಿಕೊಳ್ಳಲು ಅನೇಕ ದಿನಗಳೇ ಬೇಕಾಗ ಬಹುದು. ಇನ್ನು ನನ್ನ ಸೈನ್ಯವಾದರೂ ಇಲ್ಲಿ ಇದ್ದಿದ್ದರೆ ಹೆದರುವ ಕಾರಣ ವಿರಲಿಲ್ಲ—ಆದರೆ ಅದು ದೂರವಾಡಿಯಲ್ಲಿ ಬೀಡು ಬಿಟ್ಟಿದೆ. ಈ ಸೈನ್ಯಗಳನ್ನು ಸಂಗ್ರಹಿಸಿಕೊಂಡು ಶತ್ರುಗಳ ಮೇಲೆ ಬೀಳುವವರೆಗೆ ನಮಗೆ ಅವಕಾಶವಿದೆಯೆ ? ನಾವು ಹೇಗಾದರೂ ಮಾಡಿ ಶತ್ರು ದೇವಗಿರಿಯವರೆಗೂ ಬರದಂತೆ ತಡೆಯ ಬೇಕು—ಇಲ್ಲದಿದ್ದರೆ ಖಂಡಿತವಾಗಿ ಅನರ್ಥವಾಗುತ್ತದೆ."

"ಹಾಗಾದರೆ ಈಗ ನಾವು ಏನು ಮಾಡಬೇಕು ?"

"ನಾವು ಹೆದರಿ ಕುಳಿತರೆ ಸೋಲುವುದು ದಿಟ. ಈಗ ಕೋಟೆಯಲ್ಲಿ ಕೊಂಚ ಸೈನ್ಯವಿದೆ. ಕೋಟೆಯೂ ಸಾಕಷ್ಟು ಬಲವಾಗಿದೆ. ನಾವು ನಮ್ಮ ರಾಜಭಂಡಾರವನ್ನು, ಇನ್ನಿತರ ಬೆಲೆಬಾಳುವ ವಸ್ತುವನ್ನು, ಆಹಾರಸಾಮಾಗ್ರಿ ಗಳನ್ನು ಮೇಲುಕೋಟೆಗೆ ಸಾಗಿಸಬೇಕು. ಅರಮನೆಯ ರಾಜಕುಟುಂಬದವರು ಅವರ ಪರಿವಾರದವರು ರಾಜಧಾನಿಯ ಹೆಂಗಸರೂ ಮಕ್ಕಳೂ ಕೋಟೆಯಲ್ಲಿ ರಕ್ಷಣೆ ಪಡೆಯಲಿ. ಉಳಿದ ಗಂಡಸರೆಲ್ಲರೂ ಶಸ್ತ್ರಪಾಣಿಗಳಾಗಿ, ತಮ್ಮ ಮನೆ



ಟ್ಟಿಕೊಳ್ಳ

ಮಠಗಳ ತಂಟೆಗೆ ಯವನರು ಬಾರದಂತೆ ತಡೆಯಲಿ. ಅಷ್ಟರಲ್ಲಿ ನನ್ನ ದೂರ ವಾಡಿಯ ಸೈನ್ಯವೂ, ಶಂಕರದೇವರ ಸೈನ್ಯವೂ ಬಂದು ನಮ್ಮನ್ನು ಕೂಡಿಕೊಳ್ಳು ತ್ತವೆ. ನಾವು ಈ ಸುದ್ದಿಯನ್ನು ಕೂಡಲೇ ವಾರಣಾಸಿಯ ದಾರಿಯಲ್ಲಿರುವ ಶಂಕರದೇವರಿಗೆ ತಿಳಿಸುವುದು ಅಗತ್ಯವಾಗಿದೆ. ಅಂತಲೇ ನಾವು ಹೊಯ್ಸಳ ರಾಜಧಾನಿಗೂ ಯವನರ ವಿರುದ್ಧ ನಮಗೆ ನೆರವು ನೀಡಲು ಯೋಗ್ಯ ರಾಯ ಭಾರಿಗಳನ್ನು ಕಳುಹಿಸಿಕೊಡಬೇಕಾಗಿದೆ.

ಈ ಮಾತು ಕೇಳಿ ರಾಮದೇವರಾಯರಿಗೆ ಆಶ್ಚರ್ಯವಾಯಿತು. "ಮುಮ್ಮಡಿಸಿಂಗರೇ, ಏನಿದು ನಿಮ್ಮ ಮಾತು ? ನಮ್ಮ ಹಿತಶತ್ರುಗಳಾಗಿರುವ ಸರ್ವದಾ ನಮ್ಮ ನಾಶವನ್ನೇ ಹಾರೈಸುತ್ತಿರುವ ಹೊಯ್ಸಳರ ಬಳಿಗೆ ನೆರವು ಬೇಡಿ ರಾಯಭಾರಿಗಳನ್ನು ಕಳುಹಿಸುವುದೆ ? ನೀವು ವಿನೋದಕ್ಕೆ ಈ ಮಾತು ಹೇಳುತ್ತಿಲ್ಲ ತಾನೆ ?" ಎಂದನು.

"ಇಲ್ಲ ಪ್ರಭು, ಇದುವರೆಗೆ ಸೇವುಣರಿಗೂ ಹೊಯ್ಸಳರಿಗೂ ಹೋರಾಟ ನಡೆಯುತ್ತಿತ್ತು. ಅವರು ಪರಸ್ಪರ ಶತ್ರುಗಳಾಗಿದ್ದರು. ಈಗ ಹೊರಗಿನ ಶತ್ರುವಿನ ಮುಂದೆ ನಾವು ನಮ್ಮ ಅಂತರಂಗದ ಹಗೆತನ ವೈಷಮ್ಯಗಳನ್ನು ಮರೆತು-ಒಂದಾಗಿ ಹೋರಾಡಬೇಕಾಗಿದೆ. ಇಲ್ಲದಿದ್ದರೆ ಯವನರ ದಾಳಿಗೆ ದಕ್ಷಿಣಾಪಥವು ಬಲಿಯಾಗುವುದು ಖಂಡಿತ. ನಾವು ನಮ್ಮಲ್ಲಿ ಕಾದಾಡು ತ್ತಿದ್ದರೆ, ಶತ್ರುಗಳು ಈ ಸಮಯವನ್ನು ಸಾಧಿಸಿ, ನಮ್ಮಿಬ್ಬರನ್ನು ಸೋಲಿಸಿ ತಮ್ಮ ಅಂಕೆಯಲ್ಲಿ ಇಟ್ಟುಕೊಳ್ಳುವ ಪ್ರಸಂಗವಿದೆ. ದಕ್ಷಿಣದಲ್ಲಿ ಹಿಂದೂ ಸಾಮ್ರಾಜ್ಯಗಳು ಹೇಳಹೆಸರಿಲ್ಲದಂತೆ ಆದರೆ, ಹಿಂದೂ ಧರ್ಮ-ಸಂಸ್ಕೃತಿ-ನಾಗರೀಕತೆಗಳಿಗೆ ಯವನರಿಂದ ಖಂಡಿತವಾಗಿಯೂ ವಿಪತ್ತು ಕಾದಿದೆ. ಆದುದರಿಂದ ಈಗ ಮುಸಲ್ಮಾನರ ದಾಳಿಯ ವಿರುದ್ಧ ಹಿಂದುಗಳೆಲ್ಲರೂ ನಿಂತು ಹೋರಾಡುವುದು ಆದ್ಯ ಕರ್ತವ್ಯ. ಈಗ ಒಳಜಗಳಗಳಿಗೆ, ಅಂತರಂಗದ ದ್ವೇಷಾಸೂಯೆಗಳಿಗೆ ಸಮಯವಿಲ್ಲ. ಅಖಂಡ ದಕ್ಷಿಣ ಪಥದ ಹಾಗೂ ಹಿಂದೂ ಧರ್ಮದ ಹಿತದೃಷ್ಟಿಯಿಂದ ವಿಚಾರಮಾಡಬೇಕಾಗಿದೆ. ಈ ದೃಷ್ಟಿ ಯಲ್ಲಿ ಹೊಯ್ಸಳರು ನಮಗೆ ನೆರವು ಕೊಡಬಹುದು."

"ಒಂದು ವೇಳೆ ಅವರು ನಮ್ಮ ಕೋರಿಕೆಯನ್ನು ತಿರಸ್ಕರಿಸಿದರೆ ? "

"ತಿಳಿದೇ ಇದೆ. ನಾವು ಒಬ್ಬರೇ ನಿಂತು, ಶತ್ರುಗಳನ್ನು ಎದುರಿಸೋಣ. ಜಯಾಪಜಯಗಳು ದೈವಾಯತ್ತ. ಈ ಹೋರಾಟದಲ್ಲಿ ದೇವಗಿರಿಯು ಯಾದವರು ನಾಮಾವಶೇಷರಾದರೂ ಸರಿ. ಇತಿಹಾಸದಲ್ಲಿ ಮಾತೃಭೂಮಿಯ ರಕ್ಷಣೆಗಾಗಿ ಹೋರಾಡಿದ ವೀರರೆಂಬ ಕೀರ್ತಿಗೇ ಪಾತ್ರರಾಗುತ್ತಾರೆ. ಇಂದು ತಮಗೆ ನೆರವು ನೀಡದೆ ಹೋದರೆ–ಇದರ ಫಲವನ್ನು ಅವರೂ ಅನುಭವಿಸಬೇಕಾಗುತ್ತದೆ. ಇಂದು ನಮಗಾದ ಗತಿ–ನಾಳೆ ಅವರಿಗೂ ಕಾದಿದೆ. ಈಗ ದುಡುಕಿದರೆ ನಾಳೆ ಪಶ್ಚಾತ್ತಾಪ ಪಡಬೇಕಾಗುವುದು. ನಾವು ಹೊಯ್ಸಳರ ಬಳಿಗೆ ಸಹಾಯವನ್ನು ಯಾಚಿಸಿ ಯಾರನ್ನಾದರೂ ಕಳುಹಿಸಿಕೊಡುವುದರಿಂದ ನಮಗೆ ಯಾವ ನಷ್ಟವೂ ಇಲ್ಲ. ನಮಗೆ ಲಾಭವೇ ಇದೆ. ಒಂದು ವೇಳೆ ನಮ್ಮ ರಾಯಭಾರ ವಿಫಲವಾದರೆ ಫಲಾಫಲಗಳು ದೈವಾಯತ್ತ–ಪ್ರಯತ್ನ ಮಾತ್ರ ನಮ್ಮದು. ನಾವು ನಮ್ಮ ಪ್ರಯತ್ನ ಮಾಡೋಣ. ದೈವೇಚ್ಛೆ ಇದ್ದಂತೆ ಆಗಲಿ !"

"ಮುಮ್ಮಡಿಸಿಂಗರೇ, ನಿಮ್ಮ ಆಶಯ ಒಳ್ಳೆಯದೇ. ಈ ಸಮಯದಲ್ಲಿ ದಕ್ಷಿಣಾಪಥದ ಹಿಂದೂ ರಾಜರೆಲ್ಲರೂ ಸಂಘಟಿಸಿ ಯವನರ ದಾಳಿಯನ್ನು ತಡೆಯಬೇಕಾಗಿದೆ. ಈ ಪ್ರಯತ್ನದಲ್ಲಿ ನಾವು ಎಷ್ಟರಮಟ್ಟಿಗೆ ಯಶಸ್ವಿಯಾಗುವೆವೋ ತಿಳಿಯದು. ಪ್ರಯತ್ನ ನಮ್ಮದು. ಈ ಪ್ರಯತ್ನದಲ್ಲಿ ನಮ್ಮ ಸರ್ವಸ್ವವೂ ಬಲಿ ಕೊಡಬೇಕಾದರೂ ನಾವು ಹೆದರುವುದಿಲ್ಲ. ಆದರೆ ನಮ್ಮೊಡನೆ ಹೊಯ್ಸಳರು ಸಹಕರಿಸುವರೆಂಬ ನಂಬಿಕೆ ಇಲ್ಲ. ನಿಮ್ಮ ಆಶಯದಂತೆ ಹೊಯ್ಸಳರಬಳಿಗೆ ಮಾತ್ರವಲ್ಲ, ಓರಂಗಲ್ಲಿನ ಕಾಕತೀಯರ ಬಳಿಗೂ, ಮಧುರೆಯ ಪಾಂಡ್ಯರ ಬಳಿಗೂ ರಾಯಭಾರಿಗಳನ್ನು ಕಳುಹಿಸಿಕೊಡೋಣ. ಅವರೆಲ್ಲರ ನೆರವು ದೊರಕಿದರೆ–ನಮ್ಮ ಭಾಗ್ಯ–ನಮ್ಮ ನಾಡಿನ ಭಾಗ್ಯ ! ಅದು ದೊರೆಯದಿದ್ದರೆ ನಮ್ಮೆಲ್ಲರ ದೌರ್ಭಾಗ್ಯ '" ಎಂದು ನಿಟ್ಟುಸಿರುಬಿಟ್ಟನು.

ಕೆಲಕಾಲ ಮೌನ ಆವರಿಸಿತು. ಅನಂತರ ರಾಮದೇವರಾಯ ಹೇಳಿದ : "ಹೊಯ್ಸಳರ ಬಳಿಗೆ ಬೇರೆಯವರನ್ನು ರಾಯಭಾರಿಗಳಾಗಿ ಕಳುಹಿಸಿಕೊಡಲು ನನಗೆ ಇಷ್ಟವಿಲ್ಲ–ಈ ಮಹತ್ತರ ಕಾರ್ಯಕ್ಕೆ ನಿಮ್ಮ ಹೊರತು ಬೇರೆ ಯಾರೂ ಸಮರ್ಥರಲ್ಲ. ಆದುದರಿಂದ ನೀವೇ ಈ ಕಾರ್ಯಕ್ಕೆ ಕಂಕಣ ತೊಟ್ಟುಕೊಳ್ಳಬೇಕು" ಎಂದನು.

"ಪ್ರಭು, ನಾನು ದ್ವಾರಸಮುದ್ರಕ್ಕೆ ಹೋಗಲು ಸಂತೋಷದಿಂದಲೇ ಸಮ್ಮತಿಸುತ್ತೇನೆ. ಆದರೆ, ಶತ್ರುಗಳು ಬಾಗಿಲ ಬಳಿ ಬಂದು ನಿಂತಿರುವಾಗ, ತಮ್ಮನ್ನೂ ರಾಜಧಾನಿಯ ಜನತೆಯನ್ನೂ ಅಪಾಯಕ್ಕೆ ಒಡ್ಡಿ ನಾನು ದೂರ ಹೋಗಲು ಮನಸ್ಸು ಹಿಂಜರಿಯುತ್ತಿದೆ."

"ನೀವು ನಮ್ಮ ರಕ್ಷಣೆಯ ಬಗ್ಗೆ ಚಿಂತಿಸಬಾರದು. ನೀವು ಹೇಳಿದಂತೆ ರಾಜಧಾನಿಯ ಹೆಂಗಸರು ಮಕ್ಕಳನ್ನೂ, ಬೆಲೆಬಾಳುವ ವಸ್ತುಗಳನ್ನೂ ಮೇಲಿನ ದುರ್ಗದಲ್ಲಿ ರಕ್ಷಿಸಲಾಗುತ್ತದೆ. ಆ ಬಗ್ಗೆ ನೀವು ಚಿಂತಿಸುವ ಕಾರಣವಿಲ್ಲ. ಈಗ ಸ್ವದೇಶ ಸ್ವಧರ್ಮಗಳಿಗೆ ಬಂದಿರುವ ಗಂಡಾಂತರ ಪಾರುಮಾಡುವುದು ಹೇಗೆಂದು ಯೋಚಿಸಬೇಕಾಗಿದೆ. ನೀವು ನಿಶ್ಚಿಂತೆಯಿಂದ ಹೊಯ್ಸಳರ ಬಳಿಗೆ ಹೋಗಿಬನ್ನಿ ! ನೀವು ಹಿಂದಿರುಗಿ ಬರುವವರೆಗೂ ನಾನು ಶತ್ರುಗಳು ರಾಜಧಾನಿಯನ್ನು ಪ್ರವೇಶಿಸದಂತೆ ತಡೆದಿರುತ್ತೇನೆ" ಎಂದು ಭರವಸೆ ಕೊಟ್ಟಮೇಲೆ ಮುಮ್ಮಡಿಸಿಂಗನು ದ್ವಾರಸಮುದ್ರಕ್ಕೆ ಪ್ರಯಾಣ ಬೆಳೆಸಿದನು.

ಇನ್ನೊಬ್ಬ ಪತ್ರವಾಹನು ಈ ಎಲ್ಲ ಸಂಗತಿಯನ್ನು ಯುವರಾಜ ಶಂಕರ ದೇವನಿಗೆ ತಿಳಿಸಲು ಬೇರೊಂದು ಮಾರ್ಗ ಹಿಡಿದನು. ಅದರಂತೆ ಓರಂಗಲ್ಲು, ಆನೆಗುಂದಿ, ಮಧುರೈ ಮುಂತಾದ ಹಿಂದೂ ದೊರೆಗಳಿಗೆ ಪತ್ರಗಳನ್ನು ತೆಗೆದುಕೊಂಡು ವಿಶೇಷ ರಾಯಭಾರಿಗಳು ಹೊರಟರು.

## ೭

ರಾಮದೇವರಾಯನ ಊಹೆ ಉತ್ಪ್ರೇಕ್ಷೆಯಾಗಿರಲಿಲ್ಲ. ಹೊರ ಶತ್ರುಗಳ ಸಮ್ಮುಖದಲ್ಲಿ ತಮ್ಮ ಒಳಗಿನ ವೈಮನಸ್ಸು-ದ್ವೇಷಾಸೂಯೆಗಳನ್ನು ಮರೆತು ಸಂಘಟಿಸಿ, ಹೋರಾಡುವಷ್ಟು ವಿವೇಕವಾಗಲೀ, ಹೃದಯ ವೈಶಾಲ್ಯವಾಗಲೀ, ತಮ್ಮ ದೇಶ, ಹಾಗೂ ಧರ್ಮಗಳಿಗೆ ಯವನರಿಂದ ಗಂಡಾಂತರವೆಂದು ತಿಳಿಯುವ ಧರ್ಮಬುದ್ಧಿಯಾಗಲೀ ಹೊಯ್ಸಳರ ದೊರೆ ಮುಮ್ಮಡಿ ವೀರಬಲ್ಲಾಳ

ನಿಗೆ ಇರಲಿಲ್ಲ. ಕೊಂಚ ಸಮಯದ ಹಿಂದೆ ಮುಮ್ಮಡಿ ನರಸಿಂಹನ ಮರಣ ಹೊಂದಿ ಅವನ ಮಗ ಮುಮ್ಮಡಿ ವೀರಬಲ್ಲಾಳನು ದೊರೆಯಾಗಿದ್ದನು. ದಕ್ಷಿಣ ಭಾರತದ ದುರ್ದೈವದಿಂದ ಆಸೇತು ತುಂಗಭದ್ರೆಯವರೆಗೆ ವಿಸ್ತರಿಸಿದ್ದ ಹೊಯ್ಸಳ ಸಾಮ್ರಾಜ್ಯವು ಈಗ ಕುಗ್ಗಿ ಕುಸಿಯುತ್ತಾ ಬಂದಿತ್ತು. ಸಿಂಹಾಸನಕ್ಕಾಗಿ ವೀರಸೋಮೇಶ್ವರನ ಮಕ್ಕಳಾದ ವೀರನರಸಿಂಹ ಹಾಗೂ ರಾಮನಾಥ ಇವರಲ್ಲಿ ನಡೆದ ಯಾದವಿ ಕಲಹವು ಸಾಮ್ರಾಜ್ಯದ ಭದ್ರತೆ, ಅಖಂಡತೆಗಳಿಗೆ ಕೊಡಲಿ ಪೆಟ್ಟನ್ನು ಹಾಕಿತ್ತು.

ವೀರನರಸಿಂಹನು ಬಿಜ್ಜಳದೇವಿಯ ಹೊಟ್ಟೆಯಲ್ಲಿ ಹುಟ್ಟಿದ ಮಗೂ ರಾಮನಾಥನು ಇನ್ನೊಬ್ಬ ಪತ್ನಿ ದೇವಲದೇವಿಯ ಮಗ. ಇವರಿಬ್ಬರಿಗೆ, ಮೊದಲಿನಿಂದಲೂ ಹೊಂದಾಣಿಕೆ ಇಲ್ಲದಿರುವುದನ್ನು ಕಂಡು ವೀರಸೋಮೇಶ್ವರನು ತನ್ನ ಮಕ್ಕಳಲ್ಲಿ ಮುಂದೆ ನಡೆಯುವ ಹೋರಾಟವನ್ನು ತಪ್ಪಿಸಲು ಒಂದು ಯೋಜನೆಯನ್ನು ಸಿದ್ಧಗೊಳಿಸಿದನು. ಅದರಂತೆ ಸಾಮ್ರಾಜ್ಯವನ್ನು ಎರಡು ಭಾಗಮಾಡಿ ಅವುಗಳಿಗೆ ಇಬ್ಬರು ಮಕ್ಕಳನ್ನು ಮಾಂಡಲೇಶ್ವರರಾಗಿ ನೇಮಿಸಿದನು.

ಅವನ ನಂತರ ವೀರನರಸಿಂಹನು ಮುಮ್ಮಡಿಸಿಂಹನೆಂಬ ಹೆಸರಿನಲ್ಲಿ ದ್ವಾರಸಮುದ್ರದಲ್ಲಿ ಹೊಯ್ಸಳ ಸಾಮ್ರಾಜ್ಯಕ್ಕೆ ಅಧಿಪತಿಯಾದನು. ರಾಮನಾಥನು ಇಂದಿನ ಕೋಲಾರ ಹಾಗೂ ತಮಿಳು ಪ್ರದೇಶಗಳಿಗೆ ಒಡೆಯನಾಗಿ ಕಣ್ಣನೂರನ್ನು ರಾಜಧಾನಿಯಾಗಿ ಮಾಡಿಕೊಂಡು ರಾಜ್ಯಭಾರ ಮಾಡುತ್ತಿದ್ದನು.

ಆದರೆ ತಂದೆ ಸತ್ತ ನಂತರ ಇವರಿಬ್ಬರು ಸಹೋದರರಿಗೆ ಮತ್ತೆ ಸಿಂಹಾಸನಕ್ಕಾಗಿ ಹೋರಾಟ ಆರಂಭವಾಯಿತು. ಇದು ಅಖಂಡವಾಗಿ ಮುವತ್ತು ವರ್ಷಗಳ ಕಾಲ ನಡೆದಿದ್ದರೂ ಇನ್ನೂ ಬಗೆಹರಿದಿರಲಿಲ್ಲ ಅಷ್ಟೇ ಅಲ್ಲ, ಅವರ ಮಕ್ಕಳ ಕಾಲಕ್ಕೂ ಹೆಪ್ಪುಗಟ್ಟಿ ಬಂದಿತ್ತು. ಮುಮ್ಮಡಿ ನರಸಿಂಹನ ನಂತರ ಮುಮ್ಮಡಿ ಬಲ್ಲಾಳನು ಸಿಂಹಾಸನವನ್ನೇರಿದಾಗ, ರಾಮನಾಥನ ಮಗ ವಿಶ್ವನಾಥನು ಅವನ ಪ್ರತಿಸ್ಪರ್ಧಿಯಾದನು.

ಹೀಗೆ ಹೊಯ್ಸಳ ರಾಜವಂಶದಲ್ಲಿ ಉಂಟಾಗಿದ್ದ ಗೃಹಕಲಹದಿಂದ ದೇಶದಲ್ಲಿ ಅನಾಯಕತೆ ಅರಾಜಕತೆಗಳು ತಲೆದೋರಿ, ಪರಕೀಯರ ಆಕ್ರಮಣ-

ವನ್ನು ಎದುರಿಸಲು ಹೊಯ್ಸಳ ರಾಜ್ಯವು ತೀರಾ ದುರ್ಬಲವಾಗಿತ್ತು. ಸಾಮ್ರಾಜ್ಯವು ಅನಾಯಕವಾಗಿದ್ದರೂ, ಸಾಮ್ರಾಜ್ಯನೌಕೆ ಮುಳುಗದಂತೆ ತಡೆಹಿಡಿದಿದ್ದವನೆಂದರೆ ಪ್ರಧಾನ ಅಮಾತ್ಯ ಮಾಧವ ದಂಡನಾಯಕ.

ಇವನು ಪೆರುಮಾಳ ದಂಡನಾಯಕನ ಹಿರಿಯ ಮಗ. ಈ ವಂಶದವರು ತಲೆಮಾರುಗಳಿಂದ ಹೊಯ್ಸಳ ದೊರೆಗಳಿಗೆ ನಿಷ್ಠೆಯಿಂದ ಸೇವಿಸುತ್ತಾ ಬಂದಿದ್ದರು. ಇವರು ಬ್ರಾಹ್ಮಣರಾದರೂ ದಂಡಾಧಿಪತಿಗಳಾಗಿ ಕೆಲಸ ಮಾಡಿದ್ದರು. ಮಾಧವನು ಮೈಸೂರಿನ ಬಳಿಯ ಹೆರದನ ಹಳ್ಳಿಯಲ್ಲಿ ಜನ್ಮ ತಾಳಿದ್ದನು. ತನ್ನ ಸ್ವಸಾಮರ್ಥ್ಯದಿಂದ ಅಮಾತ್ಯ ಪದವಿಗೇರಿದ್ದನು. ಇವನು ಮಲ್ಲಣ್ಣ ದಂಡನಾಯಕನ ಬಳಿ ರಣವಿದ್ಯೆಯನ್ನು ಕಲಿತಿದ್ದನು. ಹೊಯ್ಸಳರ ಆಸ್ಥಾನದಲ್ಲಿ ಇವನು ಅತ್ಯಂತ ಪ್ರಭಾವಶಾಲಿಯಾದ ವ್ಯಕ್ತಿಯಾಗಿದ್ದನು. ಈ ಸಮಯದಲ್ಲಿ ಅವನಿಗೆ ತಕ್ಕ ದೊರೆ ಮುಮ್ಮಡಿಬಲ್ಲಾಳನಲ್ಲ ಇದು ನಾಡಿನ ದುರ್ದೈವ.

ಮುಮ್ಮಡಿಸಿಂಗನು ದ್ವಾರಸಮುದ್ರ ತಲುಪಿ ಹೊಯ್ಸಳೇಶ್ವರ ಬಲ್ಲಾಳ ದೊರೆಯನ್ನು ನೋಡುವ ಮುನ್ನ ಪ್ರಧಾನ ಅಮಾತ್ಯ ಮಾಧವ ದಂಡನಾಯಕನನ್ನು ಅವನ ನಿವಾಸದಲ್ಲಿ ಕಂಡನು. ಅವನು ಮನಸ್ಸುಮಾಡಿದರೆ ತಮಗೆ ಹೊಯ್ಸಳರ ನೆರವನ್ನು ಸುಲಭವಾಗಿ ದೊರಕಿಸಿಕೊಡಬಹುದೆಂದು ಮುಮ್ಮಡಿಸಿಂಗನಿಗೆ ತಿಳಿದಿತ್ತು. ಅಲ್ಲದೆ ಅವನು ಮಾಧವ ದಂಡೇಶನ ಕೀರ್ತಿಯನ್ನು ಕೇಳಿದ್ದನು. ಅವನ ಬಗ್ಗೆ ಅಭಿಮಾನವಿತ್ತು. ಇಬ್ಬರಿಗೂ ಪೂರ್ವ ಪರಿಚಯ-ಸ್ನೇಹಗಳು ಇದ್ದವು.

ಮಾಧವ ದಂಡನಾಯಕನು ಮುಮ್ಮಡಿಸಿಂಗನನ್ನು ವಿಶ್ವಾಸದಿಂದಲೇ ಬರಮಾಡಿಕೊಂಡು, ಆದರಿಸಿ ಸತ್ಕರಿಸಿದನು. ಇಬ್ಬರೂ ಹೃದಯ ಬಿಚ್ಚಿ ಮಾತನಾಡಿದರು.

"ಮುಮ್ಮಡಿಸಿಂಗರೇ, ನಿಮಗೆ ಸಹಾಯ ನೀಡಲು ನಾನು ಉತ್ಸುಕನಾಗಿದ್ದೇನೆ. ಈ ಸಮಯದಲ್ಲಿ ನಾವು ನಮ್ಮ ಅಂತಃಕಲಹಗಳನ್ನು ಬದಿಗೊತ್ತಿ ಹೊರಗಿನ ಶತ್ರು ಧಾಳಿಯನ್ನು ಇದಿರಿಸದೆ ಇದ್ದರೆ ಯವನರು ದಕ್ಷಿಣಾಪಥವನ್ನು ಪಾದಕ್ರಾಂತಗೊಳಿಸುವುದು ಖಂಡಿತ. ಈಗ ನಾವು ಒಂದಾಗಿ ತುರಕೀಯರ ಧಾಳಿಯನ್ನು ಎದುರಿಸಬೇಕು. ಆದರೆ ಈ ಬಗ್ಗೆ ಸಾಮ್ರಾಟರ

ಅಭಿಪ್ರಾಯ ತಿಳಿದುಕೊಳ್ಳದೆ ನಾವೇನೂ ಹೇಳುವಂತಿಲ್ಲ" ಎಂದನು. ಅನಂತರ ಸಾಮ್ರಾಟ ಮುಮ್ಮಡಿ ಬಲ್ಲಾಳನನ್ನು ಭೇಟಿಮಾಡಿಸಲು ಮುಮ್ಮಡಿಸಿಂಗನನ್ನು ಕರೆದುಕೊಂಡು ಹೋದನು.

ಸಾಮ್ರಾಟನು ಸ್ವರ್ಗಸಾದೃಶವಾಗಿದ್ದ ಅರಮನೆಯಲ್ಲಿ ವಿಶ್ರಾಂತಿ ಸುಖ ಅನುಭವಿಸುತ್ತಿದ್ದನು. ತನ್ನನ್ನು ನೋಡಲು ಸೇವುಣರ ರಾಯಭಾರಿ ಬಂದಿರುವ ಸಂಗತಿ ಕೇಳಿದಾಗ, ಚಂದ್ರಶಾಲೆಗೆ ಬಂದು ತಾನೇ ಅವರನ್ನು ಸ್ವಾಗತಿಸಿ ವಿಶ್ವಾಸ, ಗೌರವಗಳಿಂದ ನಡೆಸಿಕೊಂಡನು.

ಮುಮ್ಮಡಿಸಿಂಗನು ತಾನು ತಂದಿದ್ದ ಪತ್ರವನ್ನು ಕೊಟ್ಟನು. ಸುವರ್ಣ ಕೊಳವೆಯಲ್ಲಿ ನವಿರಾದ ರೇಶ್ಮೆಯ ಹೊದಿಕೆಯುಳ್ಳ ಸೇವುಣ ರಾಜಲಾಂಛನ ಸುವರ್ಣ ಗರುಡನ ಚಿಹ್ನೆ ಹೊತ್ತ ರಾಯಸವನ್ನು ಕೈಗೆ ತೆಗೆದುಕೊಂಡು ಓದಿ ಹೇಳಲು ಅಮಾತ್ಯ ಮಾಧವ ದಂಡನಾಯಕನ ಕೈಗೆ ಇತ್ತನು.

ಆವನು ಅದನ್ನು ಗಂಭೀರವಾಗಿ ಓದಿದನು.

ಸ್ವಸ್ತಿ॥ ಶ್ರೀಮನ್ಮಹಾರಾಜಾಧಿರಾಜ ರಾಜ ಪರಮೇಶ್ವರ, ಪೃಥ್ವೀವಲ್ಲಭ ಭುಜಬಲ ಪ್ರತಾಪ ಹೊಯ್ಸಳ ಚಕ್ರೇಶ್ವರರಾದ ಶ್ರೀ ವೀರ ಬಲ್ಲಾಳ ಸಾರ್ವಭೌಮರ ಸನ್ನಿಧಿಗೆ—

ದೇವಗಿರಿಯ ಯಾದವ ಚಕ್ರವರ್ತಿ ರಾಮಚಂದ್ರದೇವನು ಬರೆಸಿದ ನಿರೂಪವೇನೆಂದರೆ :-

ಇದುವರೆಗೆ ಸೇವುಣರಿಗೂ ಹೊಯ್ಸಳರಿಗೂ ಹಗೆತನವಿತ್ತು. ನಾವು ಪರಸ್ಪರ ಹೋರಾಡಿ ಗೆದ್ದಿದ್ದೇವೆ, ಸೋತಿದ್ದೇವೆ. ಇದರಿಂದ ಯಾರಿಗೂ ಲಾಭವಾಗಿಲ್ಲವೆಂಬುದು ತಮಗೂ ವೇದ್ಯವಾಗಿದೆ. ಈಗ ನಾವು ಹಿಂದೆ ನಡೆದುದನ್ನು ಮರೆತು ಸ್ನೇಹಿತರಾಗಿ, ಸಹೋದರರಂತೆ ಇರುವ ಕಾಲ ಬಂದಿದೆ. ನಿಮಗೆ ತಿಳಿದಿರಬಹುದು : ದಿಲ್ಲಿಯ ಸುಲ್ತಾನನ ಸೋದರಳಿಯನಾದ ಅಲ್ಲಾವುದ್ದೀನನೆಂಬ ಯವನನು ಪ್ರಥಮ ಬಾರಿ ದಕ್ಷಿಣ ಭಾರತದ ಮೇಲೆ ದಂಡೆತ್ತಿಬಂದು, ದೇವಗಿರಿಯ ಬಳಿ ಲಾಸೂರದ ಬಳಿ ಬೀಡುಬಿಟ್ಟದ್ದಾನೆ. ಈಗ ನಾವು ನಮ್ಮ ಹಿಂದಣ ವೈಷಮ್ಯವನ್ನು ನೆನೆದು ಈ ಯವನರ ದಾಳಿಯನ್ನು ಉಪೇಕ್ಷಿಸಿದರೆ, ಮುಂದೆ ಇದರಿಂದ ನಮಗೆ ಮಾತ್ರವಲ್ಲ–ಇಡೀ ದಕ್ಷಿಣ ಪಥಕ್ಕೇ ಇದರಿಂದ ಗಂಡಾಂತರವಿದೆ. ಹಿಂದೂ ಧರ್ಮ ಸಂಸ್ಕೃತಿಗಳಿಗೆ ಅವರಿಂದ ಧಕ್ಕೆ ಇದೆ.

ಆದುದರಿಂದ ನಾವು ಈಗ ಒಂದಾಗಿ–ಸ್ವದೇಶ, ಸ್ವಧರ್ಮಗಳಿಗೆ ಬಂದಿರುವ ಗಂಡಾಂತರವನ್ನು ತಪ್ಪಿಸಬೇಕಾಗಿದೆ.

ತಮಗೆ ಮುಸಲ್ಮಾನರು ಉತ್ತರಾಪಥದಲ್ಲಿ ನಡೆಸಿರುವ ನಡೆಸುತ್ತಿರುವ ಕೊಲೆ, ಸುಲಿಗೆ, ಅತ್ಯಾಚಾರ, ಮತಾಂತರಗಳ ಕಥೆಯನ್ನು ನಾನು ತಿಳಿಸ ಬರೆಯಬೇಕಾಗಿಲ್ಲ. ಇದು ದಕ್ಷಿಣ ಪಥದಲ್ಲೂ ಮುಂದುವರೆಯಬಾರದೆಂದೇ ನನ್ನ ಅಭಿಲಾಷೆ. ಸಾಧ್ಯವಾದರೆ ನಾವು ಇಬ್ಬರೂ ಒಂದಾಗಿ ದಿಲ್ಲಿಯಿಂದ ಯವನರನ್ನು ಅಟ್ಟಿ ಮಾತೃಭೂಮಿಯನ್ನು ಬಂಧವಿಮೋಚನಗೊಳಿಸಬೇಕೆಂಬ ಮಹತ್ಸಂಕಲ್ಪವಿದೆ. ಇದು ನೆರವೇರುವುದೂ ಬಿಡುವುದೂ ನಿಮ್ಮ ಸಹಕಾರ ಹಾಗೂ ಪರಮಾತ್ಮನ ದಯದ ಮೇಲೆ ನಿಂತಿದೆ.

ಈಗ ತಮ್ಮಲ್ಲಿ ನಾನು ಬೇಡುವುದು ಇಷ್ಟೆ. ತಾವು ತೊಂದರೆಯಲ್ಲಿರುವ ನಮಗೆ ಸಹಾಯ ಮಾಡಬೇಕು. ಇದರಿಂದ ದಕ್ಷಿಣ ಭಾರತದಲ್ಲಿ ಯವನರು ಕಾಲಿಡದಂತೆ ತಡೆದ ಕೀರ್ತಿ ತಮ್ಮದಾಗುತ್ತದೆ. ತಮ್ಮ ಈ ಉಪಕಾರವನ್ನು ನಾವು ಎಂದಿಗೂ ಮರೆಯುವುದಿಲ್ಲ–ಎಲ್ಲವನ್ನೂ ಬಲ್ಲವರಿಗೆ ಹೆಚ್ಚಿಗೆ ಹೇಳುವು ದೇನಿದೆ ?

ಇಂತು ನಿಮ್ಮ ಸ್ನೇಹಾಕಾಂಕ್ಷಿ,
ರಾಮಚಂದ್ರದೇವರಾಯ.

ಈ ಪತ್ರವನ್ನು ಕೇಳಿ ಬಲ್ಲಾಳನು ಗಹಗಹಿಸಿ ನಕ್ಕನು. ಇದನ್ನು ನೋಡಿ ಮುಮ್ಮಡಿಸಿಂಗನಿಗೆ ಕರುಳಿಗೆ ಬರೆ ಇಟ್ಟಂತೆ ಆಯಿತು.

"ಏಕೆ ಪ್ರಭು ?" ಎಂದು ಅವನಿಗೆ ಅರಿವಾಗದಂತೆ ಕೇಳಿದನು.

"ಇನ್ನೇನು ರಾಯಭಾರಿಗಳೇ, ಇದುವರೆಗೆ ನಮ್ಮ ಕುಲಶತ್ರುಗಳಾಗಿದ್ದ ಸೇವುಣರಿಗೆ–ಈ ಬುದ್ಧಿ ಎಲ್ಲಿ ಹೋಗಿತ್ತು ಈ ಮೊದಲು ? ಶತ್ರುಗಳು ಮನೆಯ ಬಾಗಿಲಿನ ಬಳಿಗೆ ಬಂದಾಗ ನಮ್ಮ ಬಳಿಗೆ ಲಜ್ಜೆ ಬಿಟ್ಟು ಸಹಾಯ ಕೋರಿ ಪತ್ರ ಬರೆದಿದ್ದಾರೆ. ಇಂದು ನಾವು ಅವರ ಸವಿಮಾತಿಗೆ ಮರುಳಾಗುವೆವೆಂದು ಬಗೆ ದಿದ್ದೀರಾ ? ಇಲ್ಲ. ರಾಯಭಾರಿಗಳೇ, ಎಂದಿದ್ದರೂ ಸೇವುಣರು ನಮ್ಮ ಶತ್ರು ಗಳು. ಹಿಂದೂ ಅಷ್ಟೇ, ಇಂದೂ ಅಷ್ಟೇ, ಮುಂದೆಯೂ ಅಷ್ಟೇ. ಅವರಿಗೆ ನಾವು ಸಹಾಯ ಮಾಡಲು ಸಾಧ್ಯವೇ ಇಲ್ಲ."

"ಪ್ರಭು, ಧರ್ಮಾವತಾರರಾದ ತಾವೇ ಹೀಗೆ ಹೇಳಿದರೆ ಹೇಗೆ ಪ್ರಭು? ಈ ಸಮಯದಲ್ಲಿ ತಾವು ದಕ್ಷಿಣಾಪಥವನ್ನು ಕೈಬಿಟ್ಟರೆ ನಾಳೆ ಯವನರ ಆಕ್ರಮಣದಿಂದ ಹಿಂದೂ ಧರ್ಮವನ್ನು ರಕ್ಷಿಸಲು ಸಾಧ್ಯವೆ? ದುಡುಕುವ ವಿಷಯವಲ್ಲ ಪ್ರಭು, ಚೆನ್ನಾಗಿ ಆಲೋಚಿಸಬೇಕಾಗಿರುವ ಸಂಗತಿ ಇದು."

"ಅದು ನನಗೂ ತಿಳಿದಿದೆ. ನೀವು ಈ ಬಗ್ಗೆ ನಮಗೆ ಹೇಳಿಕೊಡಬೇಕಾಗಿಲ್ಲ. ಇದುವರೆಗೆ ನೀವು ನಮ್ಮ ಶತ್ರುಗಳಾಗಿ ನಮಗೆ ಮಾಡಿದ ಅನ್ಯಾಯಗಳನ್ನು ನಾವು ಮರೆತಿರುವೆವೆಂದು ಭಾವಿಸಿದಿರಾ? ಇಲ್ಲ – ಎಂದೂ ನಾವು ಸೇವುಣರಿಗೆ ಸಹಾಯಮಾಡಲು ಸಾಧ್ಯವಿಲ್ಲ – ಅವರ ನಾಶವನ್ನು ಸರ್ವದಾ ಹಾರೈಸುತ್ತಿರುವ ನಾವು ಅವರಿಗೆ ನೆರವು ನೀಡುವುದೆ? ನಿಮ್ಮ ದೊರೆಗೆ ಅರಳು ಮರಳು. . ಇಲ್ಲದಿದ್ದರೆ ಹಿಂದಿನ ಕಥೆಯನ್ನು ಮರೆತು ನಮ್ಮ ಬಳಿಗೆ ಸಹಾಯ ಬೇಡಿ ಪತ್ರ ಬರೆಯುತ್ತಿರಲಿಲ್ಲ!"

ಎಂದು ಗಹಗಹಿಸಿ ನಕ್ಕನು. "ನಮ್ಮ ಮೇಲೆ ದ್ವೇಷ ಸಾಧಿಸಿದುದರ ಫಲ ಇದು! ಅನುಭವಿಸಲಿ" ಮತ್ತೆ ವಿಕಟವಾಗಿ ನಕ್ಕನು.

"ಪ್ರಭು, ಇದು ಪರಿಹಾಸ್ಯೆಯ್ಯುವ ವಿಷಯುವೆ?" ಎಂದು ನೊಂದು ಹೇಳಿದ ಮಾಧವ ದಂಡನಾಯಕ.

"ಅಮಾತ್ಯರೇ ಇದು ಪರಿಹಾಸ್ಯದ ವಿಷಯುವಲ್ಲದೆ ಮತ್ತೇನು? ನಿನ್ನೆಯವರೆಗೆ ಕುಲಶತ್ರುಗಳಾಗಿದ್ದ ಸೇವುಣರು ಇಂದು ಸ್ನೇಹ ಭಿಕ್ಷೆ ಬೇಡಿದರೆ ಇದಕ್ಕೆ ಬೆಲೆ ಇದೆಯೆ? ಅವರು ಪರಿಸ್ಥಿತಿಯ ಒತ್ತಡದಿಂದ, ಬೇರೆ ದಾರಿ ಕಾಣದೆ ನಮ್ಮ ಬಳಿಗೆ ನೆರವು ಬೇಡಲು ಬಂದಿದ್ದಾರೆ. ಆದರೆ ಅವರು ಈ ಹಿಂದೆ ಸೊಕ್ಕಿ ನಮ್ಮ ಮೇಲೆ ನಡೆಸಿದ ಆಕ್ರಮಣವನ್ನು ಮರೆಯಲಾದೀತೆ? ಅವರು ನಮಗೆ ಮಾಡಿರುವ ಅಪಮಾನವು ಅಲ್ಪವೆ? ನಮ್ಮ ಹಿಂದಣ ಪರಾಭವಗಳಿಗೆ ಅವರ ಮೇಲೆ ಸೇಡು ಬಗೆಯಲು ಇದೀಗ ಸುಸಂಧಿ! ಇಂಥವರಿಗೆ ಸಹಾಯವೇ?" ಎಂದು ತಿರಸ್ಕಾರದಿಂದ ಮುಮ್ಮಡಿಸಿಂಗನನ್ನು ನೋಡಿದನು.

"ಪ್ರಭು, ನಮ್ಮನ್ನು ತಾವು ಸರಿಯಾಗಿ ಅರ್ಥಮಾಡಿಕೊಂಡಂತೆ ಕಾಣುವುದಿಲ್ಲ. ನಾವು ತೊಂದರೆಯಲ್ಲಿದ್ದೇವೆ ದಿಟ. ಆದರೆ ನಮ್ಮ ಸರ್ವಸ್ವವು ಹಾನಿಯಾಗಿಲ್ಲ – ನಾವು ಏಕಾಂಗಿಯಾಗಿ ನಿಂತು ಶತ್ರುಗಳ ಮೇಲೆ ಬಿದ್ದು

ಹೋರಾಡಿ ಅವರನ್ನು ಹೊರದೂಡಬಲ್ಲೆವು! ದೇವಗಿರಿಯ ಯಾದವ ಸೈನಿಕರಲ್ಲಿ ತೊಟ್ಟು ರಕ್ತವಿರುವವರೆಗೂ ಶತ್ರುಗಳಿಗೆ ನೆಲೆಯೂರಲು ಅವಕಾಶ ಕೊಡುವುದಿಲ್ಲ. ಆ ಮಾತು ಬೇರೆ. ಈಗ ನಾವು ಶತ್ರುಗಳಿಗೆ ಹೆದರಿ ಕಂಗೆಟ್ಟು - ನಿಮ್ಮ ದಯಾಭಿಕ್ಷೆ ಬೇಡಲು ಬಂದಿಲ್ಲ. ಈ ಸಮಯದಲ್ಲಿ ನಾವು - ಹಿಂದೂ ಸಾಮ್ರಾಟರು - ಒಂದಾಗಿ ನಿಂತು ಹೋರಾಡಿದರೆ ಮತ್ತೆ ದಕ್ಷಿಣಾಪಥದ ಸುದ್ದಿಗೆ ಯವನರು ಬಾರದಂತೆ ಮಾಡಬಹುದು. ಒಮ್ಮೆ ಅವರಿಗೆ ಸರಿಯಾದ ಬುದ್ಧಿ ಕಲಿಸಿದರೆ - ಮತ್ತೊಮ್ಮೆ ಅವರು ನಮ್ಮ ತಂಟೆಗೆ ಬರುವುದಿಲ್ಲ - ಈಗ ನಾವು ಅಂತಃಕಲಹಗಳಲ್ಲಿ ತೊಡಗಿ ಶತ್ರುಗಳಿಗೆ ಕಾಲೂರಲು ಅವಕಾಶ ಕೊಟ್ಟರೆ, ನಾಳೆ ನಾವೆಲ್ಲರೂ ಇದಕ್ಕಾಗಿ ಪಶ್ಚಾತ್ತಾಪ ಪಡಬೇಕಾದ ಪ್ರಸಂಗ ಬರಬಹುದು!"

"ರಾಯಭಾರಿಗಳೇ, ನೀವು ಈ ಎಲ್ಲ ಸವಿಮಾತುಗಳಿಂದ ನಮ್ಮನ್ನು ವಂಚಿಸಲಾರಿರಿ! ನಿಮಗೆ ಬಂದಿರುವ ಕುತ್ತದಿಂದ ನೀವು ಪಾರಾಗಲು ಸ್ವದೇಶ, ಸ್ವಧರ್ಮಗಳ ಮಾತು ಹೇಳುತ್ತಿದ್ದೀರಿ. ಇವೆಲ್ಲ ನೀವು ಶತ್ರುಗಳ ಕೈಯಿಂದ ಬದುಕಿ ಉಳಿಯಲು ಮಾಡಿರುವ ಒಂದು ನಾಟಕ. ನಮ್ಮ ನೆರವನ್ನು ದೊರಕಿಸಿಕೊಳ್ಳಲು ಹಾಕಿರುವ ಸೋಗು! ಇವುಗಳಿಗೆ ನಾವು ಮರುಳಾಗುವುದಿಲ್ಲ."

"ಪ್ರಭು, ಇದರಲ್ಲಿ ಯಾವುದೇ ಮೋಸ, ವಂಚನೆ, ಕಪಟ ನಾಟಕಗಳು ಇಲ್ಲ. ಇಂದು ದೇವಗಿರಿ ಉಳಿದರೆ ನಾಳೆ ದಕ್ಷಿಣಾಪಥ ಉಳಿಯುತ್ತದೆ. ದೇವಗಿರಿ ಯವನರ ಪಾಲಾದರೆ - ನಾಳೆ ದಕ್ಷಿಣ ಭಾರತವೆಲ್ಲಾ ಯವನರ ಪಾಲಾಗುತ್ತದೆ. ದಕ್ಷಿಣಾಪಥದ ಅಳಿವು ಉಳಿವು ದೇವಗಿರಿಯ ಮುತ್ತಿಗೆಯಲ್ಲಿ ನಿರ್ಣಯವಾಗುತ್ತದೆ ಪ್ರಭು. ಈ ದೃಷ್ಟಿಯಲ್ಲಿ ತಾವು ಪ್ರಸ್ತುತ ನೆರವನ್ನು ವಿಚಾರಿಸಬೇಕು!"

"ದೇವಗಿರಿ ಉಳಿದರೆಷ್ಟು? ಅಳಿದರೆಷ್ಟು? ಸೇವುಣರು ನಮ್ಮ ಕುಲ ಶತ್ರುಗಳು. ಅವರ ಹೆಸರು ದಕ್ಷಿಣಾಪಥದಿಂದ ತೊಡೆದುಹೋದರೇನೇ ನಮಗೆ ಶಾಂತಿ. ದೇವರು ನಮ್ಮ ಮನೋರಥವನ್ನು ಸುಸಂಧಿಯನ್ನು ದಯಪಾಲಿಸಿರುವಾಗ - ಅವರಿಗೆ ನಾವು ನೆರವು ಕೊಡುವುದೆ? ಖಂಡಿತ ಸಾಧ್ಯವಿಲ್ಲ!"

"ಪ್ರಭು, ತಮ್ಮ ಇಚ್ಛೆಗೆ ವಿರುದ್ಧ ನಮಗೆ ಸಹಾಯಮಾಡಬೇಕೆಂದು ನಾವು ತಮ್ಮನ್ನು ಒತ್ತಾಯಮಾಡುತ್ತಿಲ್ಲ. ಆದರೆ ಸಧ್ಯದ ಗಂಭೀರ ಪರಿಸ್ಥಿತಿ

ಯಾವುದನ್ನೂ ಕೂಲಂಕಷವಾಗಿ ವಿಚಾರಿಸಿ ತೀರ್ಮಾನ ಕೈಗೊಳ್ಳುವುದು ಹೆಚ್ಚು ಸಮಂಜಸವೆನಿಸುವುದರಿಂದ ಈ ಮಾತನ್ನು ಮತ್ತೊಮ್ಮೆ ಒತ್ತಿ ಹೇಳು ತ್ತಿದ್ದೇನೆ. ಹಿಂದೆ ಸೇವುಣರು ತಮಗೆ ಅಪಮಾನ ಮಾಡಿದ್ದಾರೆ ದಿಟ, ಅನ್ಯಾಯ ಬಗೆದಿದ್ದಾರೆ ದಿಟ. ಆದರೆ ಇಂತಹದೇ ಅನ್ಯಾಯ ಅಪಮಾನ ಗಳನ್ನು ಹೊಯ್ಸಳರೂ ಮಾಡಿದ್ದಾರೆ. ಇಂದು ಅವುಗಳನ್ನು ನೆನೆದು ಮನಸ್ಸನ್ನು ಪ್ರಕ್ಷುಬ್ಧಗೊಳಿಸಿಕೊಂಡರೆ ಇಡೀ ದಕ್ಷಿಣಾಪಥಕ್ಕೇ ಯವನರಿಂದ ಗಂಡಾಂತರ ಕಾದಿದೆ. ನಮ್ಮ ಅಂತಃಕಲಹಗಳಿಗೆ ದೇಶದ ಹಿತಾಸಕ್ತಿಯನ್ನು ಬಲಿಗೊಟ್ಟರೆ ಮುಂದೆ ಇತಿಹಾಸದ ಕಣ್ಣಿನಲ್ಲಿ ನಾವು ದ್ರೋಹಿಗಳಾಗುತ್ತೇವೆ.

ಇನ್ನೊಂದು ದೃಷ್ಟಿಯಲ್ಲೂ ನಾವು ಸಂಘಟಿಸಿ ಹೋರಾಡುವುದು ಅತ್ಯಗತ್ಯ. ಇಂದು ನಾವು ಹಿಂದಣ ವೈಮನಸ್ಸನ್ನು ನೆನೆದು ದೂರವಿದ್ದರೆ, ಶತ್ರುಗಳಿಂದ ನಾವಿಬ್ಬರೂ ನಾಶವಾಗುವ ಸಂಭವವಿದೆ. ಈ ಆತ್ಮವಿನಾಶದ ಹಾದಿಯನ್ನು ನಾವು ತುಳಿಯಬಾರದೆಂದೇ ನಾನು ತಮ್ಮಲ್ಲಿ ನೆರವು ಯಾಚಿಸಲು ಬಂದಿದ್ದೇನೆ. ಈಗಲೂ ತಾವು ತಮ್ಮ ಹಠವನ್ನೇ ಮುಂದೊತ್ತುವುದಾದರೆ ತಮ್ಮನ್ನು ಒಲಿಸಿಕೊಳ್ಳುವ ಶಕ್ತಿ ನಮಗೆ ಇಲ್ಲ. ನಾವೊಬ್ಬರೇ ಶತ್ರುಗಳೊಡನೆ ಹೋರಾಡುತ್ತೇವೆ. ಮುಂದಿನದು ದೈವೇಚ್ಛೆಯಿದ್ದಂತೆ ಆಗಲಿ!" ಎಂದು ಹೇಳಿ ನಿಟ್ಟುಸಿರುಬಿಟ್ಟ ಮುಮ್ಮಡಿಸಿಂಗ.

"ರಾಯಭಾರಿಗಳೇ, ನಮಗೆ ಅಪ್ರಿಯವಾದ ಸಂಗತಿಯನ್ನು ಮೇಲಿಂದ ಮೇಲೆ ಕೆದಕಿ ಪ್ರಸ್ತಾಪಿಸುವುದರಿಂದ ಪ್ರಯೋಜನವಿಲ್ಲ – ಈ ವಿಷಯದಲ್ಲಿ ನಾವು ಒಂದು ನಿರ್ಧಾರಕ್ಕೆ ಎಂದೋ ಬಂದುಬಿಟ್ಟಿದ್ದೇವೆ. ನಮ್ಮ ಅಂತಿಮ ತೀರ್ಮಾನವನ್ನು ನಾಳೆ ಅಮಾತ್ಯರು ನಿಮಗೆ ತಲುಪಿಸುತ್ತಾರೆ. ನಾವು ಇನ್ನು ಬರುತ್ತೇವೆ" ಎಂದು ಹೇಳಿ ಮುಮ್ಮಡಿ ಬಲ್ಲಾಳನು ಅಲ್ಲಿಂದ ಹಠಾತ್ತನೆ ನಿರ್ಗಮಿಸಿದನು.

ಇದರಿಂದ ಮುಮ್ಮಡಿಸಿಂಗನಿಗೆ ತುಂಬಾ ನಿರಾಶೆಯಾಯಿತು. ತನ್ನನ್ನೂ ತನ್ನ ದೊರೆಯನ್ನೂ ಹೊಯ್ಸಳ ಸಾಮ್ರಾಟನು ನಡೆಸಿಕೊಂಡಿರುವ ರೀತಿ ಯನ್ನೂ ಕಂಡು ಅಸಮಾಧಾನವಾಯಿತು. ಇದು ಅವರ ಘನತೆಗೆ ಒಪ್ಪುವ ಕಾರ್ಯವಲ್ಲವೆಂದು ಬಗೆದನು. ಸಾಮ್ರಾಟರ ಈ ಬಗೆಯ ವರ್ತನೆ ಮಾಧವ ದಂಡನಾಯಕನಿಗೂ ಪ್ರಿಯವಾಗಲಿಲ್ಲ – ಸಾಮ್ರಾಟನ ವರ್ತನೆ ಮನಸ್ಸಿಗೆ

ಬೇಸರವನ್ನುಂಟುಮಾಡಿತ್ತು. ತನಗೆ ನೆರವು ನೀಡುವ ಇಚ್ಛೆಯಿಲ್ಲದಿದ್ದರೆ ಹೋಗಲಿ! ದೇವಗಿರಿಯ ರಾಯಭಾರಿಯನ್ನು ಗೌರವದಿಂದ ನಡೆಸಿಕೊಳ್ಳ ಬೇಕಾಗಿತ್ತು ಎಂದು ಅನಿಸದೆ ಇರಲಿಲ್ಲ. ಅಂತಲೇ ಮನೆಗೆ ಹಿಂದಿರುಗಿದಾಗ ದೊರೆಯಿಂದಾದ ಅಸಮಾಧಾನಕ್ಕೆ ಸಂತೈಸುವಂತೆ ಹೇಳಿದ. "ಮುಮ್ಮಡಿ ಸಿಂಗರೇ, ಇಂದು ಸಾಮ್ರಾಟರ ವರ್ತನೆಯಿಂದ ತಮಗೆ ತುಂಬಾ ಬೇಸರ ವಾಗಿರಬೇಕಲ್ಲವೆ?"

"ಅಮಾತ್ಯರೇ, ರಾಯಭಾರಿಯಾಗಿ ಬಂದಮೇಲೆ ಇಷ್ಟಕ್ಕೆಲ್ಲಾ ಬೇಸರ ಪಟ್ಟುಕೊಂಡರೆ ಕಾರ್ಯ ಸಿದ್ಧಿಸುವುದೆ? ನನಗೆ ಸಾಮ್ರಾಟರ ವರ್ತನೆಯಿಂದ ಬೇಸರ ಬರಲಿಲ್ಲ, ಆದರೆ ಅವರು ನಮ್ಮ ಸಾಮ್ರಾಟರ ಕೋರಿಕೆಯನ್ನು ಉಪೇಕ್ಷೆಯಿಂದ ಕಂಡುದಕ್ಕೆ ಬೇಸರವಾಯಿತು. ಇದು ದುಡುಕುವ ವಿಷಯ ವಲ್ಲವೆಂಬುದು ತಮಗೂ ತಿಳಿದಿದೆ. ಸಾಮ್ರಾಟರು ಪೂರ್ವಾಭಿಪ್ರಾಯಕ್ಕೆ ಎಡೆಗೊಡದೆ ಪ್ರಶಾಂತ ಮನಸ್ಸಿನಲ್ಲಿ ವಿಚಾರಮಾಡದೆ, ದುಡುಕು ತೀರ್ಮಾನ ವನ್ನು ಕೈಗೊಂಡರಲ್ಲಾ ಎಂದೇ ನನ್ನ ವ್ಯಥೆ! ಇದು ಕೇವಲ ನಮ್ಮೆರಡು ರಾಷ್ಟ್ರಗಳನ್ನು ಸಂಬಂಧಿಸದ ಸಂಗತಿಯಲ್ಲ – ಇದರ ಭವಿಷ್ಯದ ಮೇಲೆ ದಕ್ಷಿಣ ಭಾರತದ ಭವಿಷ್ಯ, ಹಿಂದೂಧರ್ಮ ಸಂಸ್ಕೃತಿಗಳ ಭವಿಷ್ಯ ನಿಂತಿವೆ. ಅಂತಲೇ ಈ ಬಗ್ಗೆ ಸಾಮ್ರಾಟರು ಕೊಂಚ ಸಾವಧಾನವಾಗಿ ವಿಚಾರಮಾಡಿ ತೀರ್ಮಾನ ಕೈಗೊಳ್ಳುವುದು ಅಗತ್ಯವಿತ್ತು. ಹೋಗಲಿ, ನಿಮ್ಮ ಸಲಹೆಯನ್ನಾದರೂ ತೆಗೆದುಕೊಳ್ಳಬೇಕಿತ್ತು. ನಿಮ್ಮ ಸಲಹೆಯನ್ನೂ ಉಪೇಕ್ಷಿಸಿದರು. ಇದಕ್ಕಾಗಿ ನಾನು ವ್ಯಥೆಪಡುತ್ತಿದ್ದೇನೆ. ತಮ್ಮಂತಹ ವಿವೇಕಶಾಲಿಗಳೂ, ಧರ್ಮಪರಾಯ ಣರೂ, ರಾಜನೀತಿ ಚತುರರೂ ಇದ್ದೂ ಸಾಮ್ರಾಟರು ಹೀಗೆ ನಡೆದುಕೊಂಡ ರಲ್ಲಾ ಎಂದು ಸಂಕಟಪಡುತ್ತಿದ್ದೇನೆ."

"ರಾಯಭಾರಿಗಳೇ, ತಮ್ಮ ನಿರಾಶೆಯನ್ನು ನಾನು ಊಹಿಸಬಲ್ಲೆ. ಆದರೆ ಈ ಬಗ್ಗೆ ನಾನೇನು ಮಾಡುವ ಸ್ಥಿತಿಯಲ್ಲಿ ಇಲ್ಲ. ನಾನು ನಿಮ್ಮಷ್ಟೇ ಅಸಹಾ ಯಕನಾಗಿದ್ದೇನೆ. ಹಿಂದಿನ ದೊರೆಗಳ ಕಾಲದಲ್ಲಾಗಿದ್ದರೆ, ನನ್ನ ಮಾತಿಗೆ ಕಿಂಚಿತ್ತಾದರೂ ಬೆಲೆ ಇತ್ತು. ಈಗಿನ ಪ್ರಭುಗಳಿಗೆ ಯಾರ ಮಾತಿನಲ್ಲೂ ನಂಬಿಕೆ ಇಲ್ಲ – ಆದರೆ ಎಲ್ಲರ ಮಾತನ್ನೂ ಕೇಳುತ್ತಾರೆ. ಇದೇ ನಮ್ಮ ದೌರ್ಭಾಗ್ಯ. ಅವರಿಗೆ ತಮ್ಮದೆನ್ನುವ ಅಭಿಪ್ರಾಯವಿಲ್ಲ. ಒಮ್ಮೆ ಒಂದು

ನಿರ್ಣಯಕ್ಕೆ ಬಂದರೆ ಅದನ್ನೇ ಮೊಂಡುಹಿಡಿದು ಸಾಧಿಸುವ ಹಠಮಾರಿತನ ಅವರದು. ಈ ಪ್ರಸಂಗ ಹೀಗೆ ಕೊನೆಗೊಳ್ಳುವುದೆಂದು ನಾನು ಕನಸು ಮನಸಿನಲ್ಲಿ ತಿಳಿದಿರಲಿಲ್ಲ!"

"ಹಾಗಾದರೆ ನಮ್ಮ ಕಾರ್ಯಭಾರ ವಿಫಲವಾಯಿತೆಂದು ತಿಳಿಯಲೆ?"

"ತಾವು ಹಾಗೆ ತಿಳಿಯಬೇಕಾದ ಕಾರಣವಿಲ್ಲ– ಇಂದಲ್ಲ ನಾಳೆ ಪ್ರಭುಗಳು ತಮ್ಮ ಮನಸ್ಸನ್ನು ಬದಲಾಯಿಸಬಹುದು. ಇಂದು ನಿಮಗೆ ಸಹಾಯ ಇಲ್ಲವೆಂದ ಪ್ರಭುಗಳು ನಾಳೆ ತಾವಾಗಿ ತಾವಾಗಿಯೆ ನಿಮ್ಮ ನೆರವಿಗೆ ಸೈನ್ಯ ಕಳುಹಿಸಬಹುದು – ಅವರ ಬಗ್ಗೆ ಯಾವುದನ್ನೂ ಖಚಿತವಾಗಿ ಹೇಳಲು ಸಾಧ್ಯವಿಲ್ಲ. ನೀವು ಈ ವಿಷಯವನ್ನು ನನಗೆ ಬಿಟ್ಟು ನಿಶ್ಚಿಂತೆಯಿಂದ ದೇವಗಿರಿಗೆ ತೆರಳಿರಿ. ಅದರ ರಕ್ಷಣೆಗೆ ಅಗತ್ಯವಾದ ಕಾರ್ಯಕ್ರಮ ಕೈಗೊಳ್ಳಿ. ಅಷ್ಟರಲ್ಲಿ ನಾನು ಕೈಲಿ ಸಾಧ್ಯವಾದುದನ್ನೆಲ್ಲಾ ಮಾಡಿ ಸಾಮ್ರಾಟರನ್ನು ಒಲಿಸಿಕೊಂಡು – ನಿಮಗೆ ಹೊಯ್ಸಳರ ನೆರವು ದೊರೆಯುವಂತೆ ಮಾಡುತ್ತೇನೆ!"

ಈ ಭರವಸೆಯನ್ನು ಮಾಧವ ದಂಡನಾಯಕನು ಕೊಟ್ಟಮೇಲೆ ಮುಮ್ಮಡಿಸಿಂಗನಿಗೆ ಎಷ್ಟೋ ಸಮಾಧಾನವಾಯಿತು. ಆದರೂ ಅವನು ತನ್ನ ಕಾರ್ಯಭಾರ ವಿಫಲವಾದುದಕ್ಕೆ ಭಾರವಾದ ಹೃದಯ ಹೊತ್ತು ದೇವಗಿರಿಗೆ ಹಿಂತಿರುಗಿ ನಡೆದ ಸಂಗತಿಯನ್ನೆಲ್ಲಾ ದೊರೆ ರಾಮದೇವರಾಯನಿಗೆ ನಿವೇದಿಸಿ ಹೊಯ್ಸಳ ಸಾಮ್ರಾಟನು ಕೊಟ್ಟ ಪ್ರತ್ಯುತ್ತರವನ್ನು ತಲುಪಿಸಿದನು. ಅದರಲ್ಲಿ ವೀರಬಲ್ಲಾಳನು ಎರಡೇ ಮಾತುಗಳನ್ನು ಬರೆದಿದ್ದನು: "ತಮ್ಮ ಪತ್ರ ಕರಗತವಾಯಿತು. ಸಧ್ಯದ ಪರಿಸ್ಥಿತಿಯಲ್ಲಿ ಹೊಯ್ಸಳ ಸೈನ್ಯವನ್ನು ತಮ್ಮ ನೆರವಿಗೆ ಕಳುಹಿಸಿಕೊಡಲು ಅಸಮರ್ಥನಾಗಿದ್ದೇನೆ. ನನ್ನ ಜ್ಞಾತಿಯಾದ ವಿಶ್ವನಾಥನು ಸಿಂಹಾಸನದ ಮೇಲೆ ಕಣ್ಣಿಟ್ಟಿರುವ ಈ ಸಮಯದಲ್ಲಿ ನಮ್ಮ ಸೈನ್ಯವು ರಾಜಧಾನಿಯಲ್ಲಿರುವುದು ಅಗತ್ಯವಾಗಿದೆ." ಈ ಪತ್ರವನ್ನು ಓದಿಕೊಂಡು ರಾಮದೇವರಾಯನು ತಿರಸ್ಕಾರದಿಂದ ನಕ್ಕನು.

೮

ತನ್ನ ರಾಯಭಾರ ವಿಫಲವಾದುದಕ್ಕೆ ಮುಮ್ಮಡಿಸಿಂಗನಿಗೆ ನಿರಾಶೆಯಾಗಿದ್ದರೂ, ಹೀಗಾಗಬಹುದೆಂದು ಮೊದಲೇ ಊಹಿಸಿದ್ದ ರಾಮದೇವರಾಯನು ಅಷ್ಟು ನಿರಾಶೆಗೊಳ್ಳಲಿಲ್ಲ.

"ಮುಮ್ಮಡಿಸಿಂಗರೇ, ನಾವು ಹೀಗಾಗಬಹುದೆಂದು ನಿರೀಕ್ಷಿಸಿರಲಿಲ್ಲವೆ? ನನ್ನ ನಿರೀಕ್ಷೆ ಕಡೆಗೂ ಸುಳ್ಳಾಗಲಿಲ್ಲ. ಹೊಯ್ಸಳರು ಕಡೆಗೂ ರಾಷ್ಟ್ರಹಿತವನ್ನು ತಮ್ಮ ಸ್ವಾರ್ಥಕ್ಕೆ ಬಲಿಗೊಟ್ಟರು. ಈಗ ನಾವು ಸ್ವಶಕ್ತಿಯಲ್ಲಿ ನಂಬಿಕೆ ಇರಿಸಿ, ದೈವವನ್ನು ನಂಬಿ ಹೋರಾಡುವುದಷ್ಟೇ ಉಳಿದಿದೆ. ಕಾಕತೀಯರೂ, ಪಾಂಡ್ಯರೂ, ಚೋಳರೂ ನಮಗೆ ಸಕಾಲದಲ್ಲಿ ನೆರವಾಗುವರೆಂಬ ನಂಬಿಕೆ ಇಲ್ಲ - ಈಗ ನಮ್ಮ ಕಾಲ ಮೇಲೆ ನಾವು ನಿಂತು ಹೋರಾಡೋಣ, ದೈವೇಚ್ಛೆಯಿದ್ದಂತೆ ಆಗಲಿ!" ಎಂದು ನಿಟ್ಟುಸಿರು ಬಿಟ್ಟನು.

ಈ ಮಾತಿಗೆ ಮುಮ್ಮಡಿಸಿಂಹನು ಮೌನವಾಗಿ ತಲೆದೂಗಿದನು.

ಇಷ್ಟೆಲ್ಲಾ ಸಂಧಾನ ನಡೆಯುವುದರೊಳಗೆ ಅಲ್ಲಾವುದ್ದೀನನು ಲಾಸುರದಿಂದ ಹೊರಟು ದೇವಗಿರಿಯ ಬಳಿ ಬಂದಿಳಿದಿದ್ದನು. ಈ ಅವಧಿಯಲ್ಲಿ ಮುಮ್ಮಡಿಸಿಂಗನ ಸೈನ್ಯ ದೂರವಾಡಿಯಿಂದ ಬಂದು ರಾಮದೇವರಾಯನ ಸೈನ್ಯವನ್ನು ಕೂಡಿಕೊಂಡಿತ್ತು. ಇದರಿಂದ ರಾಮದೇವರಾಯನಿಗೆ ಎಷ್ಟೋ ಧೈರ್ಯ ಬಂದಿತ್ತು.

ದೇವಗಿರಿ ಕೋಟೆಯು ಎತ್ತರವಾದ ಗುಡ್ಡದ ಮೇಲೆ ನಿಂತ ದುರ್ಭೇದ್ಯವಾದ ಕಲ್ಲಿನ ಕೋಟೆಯಾಗಿತ್ತು. ಅದರ ಸುತ್ತಲೂ ಆಳವಾದ ಕಂದಕವಿತ್ತು. ಅದರ ಸುತ್ತಲೂ ರಾಜಧಾನಿಯು ವಿಸ್ತರಿಸಿತ್ತು. ನಗರವನ್ನು ಇನ್ನೊಂದು ಕೋಟೆಯು ಆವರಿಸಿತ್ತು. ಇದು ಅಷ್ಟು ಭದ್ರವಾಗಿರಲಿಲ್ಲ. ಆದರೂ ಮುಮ್ಮಡಿಸಿಂಗನು ಅದರ ರಕ್ಷಣೆಗೆ ಸೂಕ್ತಕಮ ಕೈಗೊಂಡಿದ್ದನು. ಅವನು ಕೋಟೆಯ ಬಾಗಿಲುಗಳನ್ನು ಭದ್ರಪಡಿಸಿ - ಅವುಗಳ ಮೇಲ್ವಿಚಾರಣೆಗೆ ತನ್ನ ಪಡೆಯಲ್ಲಿ ಆರಿಸಿದ್ದ ಚತುರರಾದ ಬಿಲ್ಗಾರರನ್ನು ನೇಮಿಸಿದ್ದನು. ಕೋಟೆಯ ಬತೇರಿಗಳಲ್ಲಿ ಭಯಂಕರ ತೋಪುಗಳು ಮದ್ದು ತುಂಬಿಸಿಕೊಂಡು ಶತ್ರುಗಳ

ಮರ್ದನಕ್ಕೆ ಸಿದ್ಧವಾಗಿದ್ದವು. ಕೋಟೆಯ ಬುರುಜಿನ ಮೇಲೆಲ್ಲಾ ಸಶಸ್ತ್ರಪಡೆ ಹಗಲು ರಾತ್ರಿ ಎನ್ನದೆ ಗಸ್ತು ತಿರುಗುತಿತ್ತು.

ಮುಮ್ಮಡಿಸಿಂಗನು ಒಂದು ವೇಳೆ ರಾಜಧಾನಿಯು ಶತ್ರುಗಳ ವಶವಾದರೆ ಅದರಿಂದ ತಮಗೆ ಅಷ್ಟು ತೊಂದರೆಯಾಗಬಾರದೆಂದು ನಗರದಲ್ಲಿದ್ದ ಬೆಲೆ ಬಾಳುವ ವಸ್ತುಗಳನ್ನೆಲ್ಲಾ ಕೋಟೆಯ ಮೇಲಣ ಭಂಡಾರಕ್ಕೆ ಸಾಗಿಸಿದ್ದನು. ಕೋಟೆಯಲ್ಲಿ ಸಾಕಷ್ಟು ಆಹಾರ ಸಂಗ್ರಹ ಇದ್ದುದರಿಂದಲೂ, ಜನಕ್ಕೆ ಬೇಕಾದ ಧಾನ್ಯಸಂಗ್ರಹವನ್ನು ಧಾನ್ಯದ ಮಳಿಗೆಗಳಿಂದ ಒದಗಿಸಲಾಗಿತ್ತು. . ಈ ಮಳಿಗೆ ಗಳು ಸೈನಿಕ ಶಿಬಿರದ ಬಳಿ ಇದ್ದುವು. ರಾಜಧಾನಿಯಲ್ಲಿದ್ದ ಹೆಂಗಸರನ್ನೂ, ಮಕ್ಕಳನ್ನೂ, ಅರಮನೆಗೆ ಸೇರಿದವರನ್ನೂ ಬೆಟ್ಟದ ಮೇಲಿನ ಬಿಡದಿಗಳಲ್ಲಿ ಇಟ್ಟಿದ್ದರು. ಅಲ್ಲಿ ಅವರಿಗೆ ಯಾವುದಕ್ಕೂ ಕೊರತೆಯಾಗದಂತೆ ವ್ಯವಸ್ಥೆ ಮಾಡಲಾಗಿತ್ತು. ಈ ದುರ್ಗದ ರಕ್ಷಣೆಗಾಗಿ ವಿಶೇಷ ವ್ಯವಸ್ಥೆ ಮಾಡಲಾಗಿತ್ತು. ಸ್ವಯಂ ರಾಮದೇವರಾಯನೇ ನಿಂತು ಯವನರ ಧಾಳಿಯನ್ನು ಎದುರಿಸಲು ಬೇಕಾಗುವ ಸೈನ್ಯವ್ಯೂಹದ ರಚನೆಯಲ್ಲೂ ತೊಡಗಿದ್ದನು. ಅವನಿಗೆ ಬಲ ಗೈಯಾಗಿ ಮುಮ್ಮಡಿಸಿಂಗನು ಕೆಲಸಮಾಡುತ್ತಿದ್ದನು. ಈ ಎಲ್ಲ ಸಿದ್ಧತೆ ಮುಗಿಯುತ್ತಿದ್ದಂತೆ ಶಂಕರದೇವನು ಸೈನ್ಯ ಸಮೇತ ಹಿಂದಿರುಗುತ್ತಿರುವನೆಂಬ ವಾರ್ತೆ ಬಂತು. ಇದನ್ನು ಕೇಳಿ ರಾಮದೇವರಾಯನಿಗೆ ಹೋದ ಜೀವ ಮತ್ತೆ ಬಂದಂತೆ ಆಯಿತು. ಶಂಕರದೇವನು ಬರುವತನಕ ತಾವು ಹೇಗಾದರೂ ಶತ್ರು ಗಳನ್ನು ತಡೆದರೆ ಮುಂದೆ ಶತ್ರುಗಳಿಗೆ ಹೆದರುವ ಕಾರಣವಿಲ್ಲವೆಂದು ಯೋಚಿಸಿ ದನು. ಆದರೆ ಅವನೊಂದು ಬಗೆದಿದ್ದರೆ ದೈವವೊಂದು ಬಗೆದಿತ್ತು.

ಮುಮ್ಮಡಿಸಿಂಗನು ರಾಜಧಾನಿಯಲ್ಲಿದ್ದ ಧಾನ್ಯ ಸಂಗ್ರಹವನ್ನು ಹತೋಟಿಗೆ ತೆಗೆದುಕೊಳ್ಳುವುದರಲ್ಲಿ ಒಂದು ಉದ್ದೇಶವಿತ್ತು. ನಗರದ ವ್ಯಾಪಾರಿಗಳು ಅಧಿಕ ಲಾಭದ ಆಸೆಯಿಂದ ಶತ್ರುಗಳಿಗೆ ಆಹಾರಧಾನ್ಯಗಳನ್ನು ಒದಗಿಸಬಹುದೆಂಬ ಭಯವಿತ್ತು. ಶತ್ರುಗಳಿಗೆ ಆಹಾರವಸ್ತುಗಳು ಸಿಕ್ಕದಂತೆ ಮಾಡಿದರೆ ಅವರು ತಾವಾಗಿ ಕಾಲಿಗೆ ಬುದ್ಧಿಹೇಳುವರೆಂದು ಅವನು ಊಹಿ ಸಿದ್ದನು. ಅವನು ಶತ್ರುಗಳಿಗೆ ಆಹಾರವಸ್ತುಗಳನ್ನು ಒದಗಿಸುವುದು ಅಪರಾಧ ವೆಂದೂ, ರಾಜಾಜ್ಞೆಯ ವಿರುದ್ಧ ಶತ್ರುಗಳಿಗೆ ಆಹಾರವಸ್ತುಗಳನ್ನು ಒದಗಿಸಿ ದವರನ್ನು ಉಗ್ರವಾಗಿ ಶಿಕ್ಷಿಸಲಾಗುವುದೆಂದೂ ರಾಜಘೋಷಣೆ ಹೊರಡಿಸಿದ್ದನು.

ಇದನ್ನು ರಾಜಧಾನಿಯಲ್ಲಿ ಮಾತ್ರವಲ್ಲದೆ ರಾಜಧಾನಿಯ ಸುತ್ತಮುತ್ತಲಿನ ಹಳ್ಳಿಗಳಲ್ಲೂ, ನಗರಗಳಲ್ಲೂ ಡಂಗೂರ ಹಾಕಿಸಿದ್ದನು.

ಈ ರಾಜಾಜ್ಞೆಯಂತೆ ಯಾರೂ ಶತ್ರುಗಳಿಗೆ ಆಹಾರಧಾನ್ಯಗಳನ್ನು ಒದಗಿಸಲು ಮುಂದೆ ಬರಲಿಲ್ಲ. ಶತ್ರುಗಳ ಶಿಬಿರದಲ್ಲಿ ಆಹಾರ ವಸ್ತುಗಳಿಗಾಗಿ, ಹಾಹಾಕಾರವೆದ್ದಿತು. ಅಲ್ಲಿದ್ದ ಆನೆ, ಕುದುರೆ ಹೇರೆತ್ತುಗಳಿಗೆ ಮೇವು ಸಿಕ್ಕು ವುದು ದುರ್ಲಭವಾಯಿತು. ಈಗ ತಾವು ದೇವಗಿರಿಯ ಮೇಲೆ ದಾಳಿಯಿಟ್ಟು ಅದನ್ನು ವಶಪಡಿಸಿಕೊಳ್ಳದಿದ್ದರೆ ತುಂಬಾ ಪಶ್ಚಾತ್ತಾಪ ಪಡಬೇಕಾಗುವುದೆಂಬು ದನ್ನು ಅರಿತು ಅಲ್ಲಾವುದ್ದೀನನು ತನ್ನ ಸೈನ್ಯಕ್ಕೆ ದಾಳಿಯಿಡಲು ಆಜ್ಞೆ ಮಾಡಿದನು.

ಈ ಸಮಯದಲ್ಲಿ ಒಂದು ಘಟನೆ ನಡೆಯಿತು.

ದೇವಗಿರಿಯ ಧಾನ್ಯದ ವರ್ತಕನೊಬ್ಬನಿಗೆ ಆಹಾರಧಾನ್ಯವನ್ನು ಒದಗಿಸು ತ್ತಿದ್ದ ಒಬ್ಬ ವ್ಯಾಪಾರಿಯು, ಅಧಿಕ ಲಾಭದ ಆಶೆಯಿಂದ, ಶತ್ರುಸೈನ್ಯಕ್ಕೆ ಅವುಗಳನ್ನು ಮಾರಲು ಕಳ್ಳತನದಲ್ಲಿ ಸಾಗಿಸುತ್ತಿರುವನೆಂಬ ವಾರ್ತೆಯನ್ನು ಗೂಢಾಚಾರರು ತಂದರು. ಈ ಸುದ್ದಿಯನ್ನು ಕೇಳಿ ರಾಮದೇವನು ಕೆರಳಿ, ಆ ದ್ರೋಹಿ ವ್ಯಾಪಾರಿಯನ್ನು ಶಿಕ್ಷಿಸಲು, ಅವನ ಸಮಸ್ತ ಧಾನ್ಯವನ್ನೂ ಮುಟ್ಟುಗೋಲು ಹಾಕಿಕೊಳ್ಳಲು ಮುಮ್ಮಡಿಸಿಂಗನಿಗೆ ಆಜ್ಞಾಪಿಸಿದನು. ಮುಮ್ಮಡಿಸಿಂಗನು ತನ್ನ ದಳಪತಿಗಳನ್ನು ಕಳುಹಿಸಿ, ಕಳ್ಳಸಾಗಾಣಿಕೆ ವ್ಯಾಪಾರ ದಲ್ಲಿ ತೊಡಗಿದ್ದ ಆ ವ್ಯಾಪಾರಿಯನ್ನು ಮಾರ್ಗಮಧ್ಯೆ ಹಠಾತ್ತನೆ ಹಿಡಿದು ಬಂಧಿಸಿದನು. ಅವನ ಬಳಿಯಿದ್ದ ಒಂದು ಸಾವಿರ ಗೋಧಿಯ ಮೂಟೆಗಳನ್ನು ವಶಪಡಿಸಿಕೊಂಡು ಧಾನ್ಯಸಂಗ್ರಹಾಲಯಕ್ಕೆ ಕಳುಹಿಸಿಕೊಟ್ಟನು. ಅಲ್ಲಿನ ಉಗ್ರಾಣದಲ್ಲಿ ಸ್ಥಳವಿಲ್ಲದುದರಿಂದಲೂ, ಬೆಟ್ಟದ ಮೇಲಿನ ಧಾನ್ಯದ ದಾಸ್ತಾನು ಕಡಿಮೆ ಬಿದ್ದುದರಿಂದಲೂ, ಮುಟ್ಟುಗೋಲು ಹಾಕಿಕೊಂಡ ಸಾವಿರ ಚೀಲ ಗಳನ್ನು ಹೆಚ್ಚಿನ ಪರೀಕ್ಷೆಗೆ ಗುರಿಪಡಿಸದೆ ಬೆಟ್ಟದ ಮೇಲಿನ ಮಳಿಗೆಗೆ ಕಳುಹಿಸಿ ಕೊಡಲಾಯಿತು. ತಮ್ಮ ಆಜ್ಞೆಯನ್ನು ಉಲ್ಲಂಘಿಸಿ ನಡೆದ ವ್ಯಾಪಾರಿಗೆ ತಕ್ಕ ಶಿಕ್ಷೆ ವಿಧಿಸಿದರು. ಉಳಿದವರಿಗೆ ತಕ್ಕ ಪಾಠ ಕಲಿಸಲು ಅವನನ್ನು ಕತ್ತೆಯ ಮೇಲೆ ಕೂಡಿಸಿ ಮೆರವಣಿಗೆ ಮಾಡಿ, ನಗರದಾಚೆ ಹೊಡೆದಟ್ಟಿದರು. ಇದೇ ಮುಂದೆ ಯಾದವರ ಸೋಲಿಗೆ ಕಾರಣವಾಯಿತು.

ಅಲ್ಲಾವುದ್ದೀನನು ಆದಷ್ಟು ಬೇಗ ದೇವಗಿರಿಯನ್ನು ಮುತ್ತಿ ವಶಪಡಿಸಿಕೊಂಡು, ಅದನ್ನು ಸೂರೆ ಹೊಡೆದು ತನ್ನ ಊರಿಗೆ ಹಿಂದಿರುಗಬೇಕೆಂದು ನಿಶ್ಚಯಿಸಿದ್ದನು. ಅವನಿಗೆ ಗೂಢಚಾರರಿಂದ ದೇವಗಿರಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಸೈನ್ಯ ಸಂಗ್ರಹವಿಲ್ಲವೆಂಬುದು ತಿಳಿದಿತ್ತು. ಶಂಕರದೇವನ ನೇತೃತ್ವದಲ್ಲಿ ಅದು ದೂರದಲ್ಲಿ ಇತ್ತೆಂಬುದೂ ತಿಳಿದಿತ್ತು. ಈ ಸೈನ್ಯ ಹಿಂದಿರುಗಿಬರುವುದರೊಳಗಾಗಿ ತಾನು ದೇವಗಿರಿಯನ್ನು ವಶಪಡಿಸಿಕೊಳ್ಳಬೇಕೆಂದು ಹೆಚ್ಚು ಹುರುಪಿನಿಂದ ದಾಳಿ ಇಟ್ಟಿದ್ದನು.

ಅನೇಕ ದಿನಗಳವರೆಗೆ ದಾಳಿ ಇಟ್ಟರೂ ದೇವಗಿರಿಯ ಕೋಟೆಯ ಒಂದು ಕಲ್ಲನ್ನು ಕೀಳಲು ಸಾಧ್ಯವಾಗಲಿಲ್ಲ. ಮುಮ್ಮಡಿಸಿಂಗನ ಕೈಕೆಳಗೆ ಯಾದವ ಸೈನಿಕರು ಪ್ರಾಣದ ಹಂಗು ತೊರೆದು ಕೋಟೆಯ ರಕ್ಷಣೆಗೆ ನಿಂತಿದ್ದರು. ಹೋರಾಟ ತಾನು ನಿರೀಕ್ಷಿಸಿದ್ದಕ್ಕಿಂತಲೂ ದೀರ್ಘಕಾಲ ಮುಂದುವರೆದುದನ್ನು ಕಂಡು ಅಲ್ಲಾವುದ್ದೀನನಿಗೆ ಗಾಬರಿಯಾಯಿತು. ಅವನು ಮೋಸದಿಂದ ಕೋಟೆಯನ್ನು ಸಾಧಿಸಿಕೊಳ್ಳಲು ನೋಡಿದನು.

ಅಲ್ಲಾವುದ್ದೀನನು ಯಾದವ ಸೈನ್ಯಕ್ಕೆ ಹಿಮ್ಮೆಟ್ಟಿರುವನೆಂಬ ಸುದ್ದಿಯನ್ನು ಸೈನಿಕರ ಶಿಬಿರದಲ್ಲಿ ಹರಡಿದನು. ಇದು ರಾಮದೇವನಿಗೆ ಕುತೂಹಲವನ್ನುಂಟುಮಾಡಿತು. ಇದರಲ್ಲಿ ಏನೋ ಮೋಸವಿರಬೇಕೆಂದು ಮುಮ್ಮಡಿಸಿಂಗನು ಯೋಚಿಸಿದನು. ಆದರೆ ಈ ವಾರ್ತೆ ನಿಜವೆನ್ನುವಂತೆ, ಅಲ್ಲಾವುದ್ದೀನನು ತನ್ನ ಸೈನ್ಯಗಳಿಗೆ ಲಾಸುರಕ್ಕೆ ಹಿಂದಿರುಗಲು ಆಜ್ಞೆಮಾಡಿದ್ದನು. ಇದೇ ಸಮಯದಲ್ಲಿ ವರ್ಷಾಕಾಲ ಆರಂಭವಾಗಿತ್ತು. ಬಯಲುಸೀಮೆಯಲ್ಲಿ ಮಳೆಗೆ ಆಶ್ರಯ ಹೊಂದುವುದೂ ಅವನ ಉದ್ದಿಶ್ಯವಾಗಿತ್ತು. ಈ ವರ್ತನೆಯನ್ನು ನೋಡಿ ರಾಮದೇವರಾಯನು-ಶತ್ರುಗಳು ಸುಲಭವಾಗಿ ದೇವಗಿರಿಯನ್ನು ಬಿಟ್ಟು ಹೊರಟರು—ಎಂದು ಹರ್ಷಿಸಿದನು. ಅವನು ಮುಮ್ಮಡಿಸಿಂಗನ ಮಾತಿನಂತೆ, ಶತ್ರುಗಳನ್ನು ಹಿಂಬಾಲಿಸಿ ಹೋಗಿ ಅವರ ಮೇಲೆ ಬಿದ್ದಿದ್ದರೆ, ದೇವಗಿರಿಯು ಪತನವಾಗುತ್ತಿರಲಿಲ್ಲ. ಆದರೆ ತಮಗೆ ದೊರೆತ ಜಯದಿಂದ ಹಿಗ್ಗಿ ರಾಮದೇವರಾಯನು ಯವನರ ಬಗ್ಗೆ ಉಪೇಕ್ಷೆ ತಾಳಿದನು. ಇದರ

ಪ್ರತ್ಯಕ್ಷ ಪರಿಣಾಮವನ್ನು ಅವನು ಅನುಭವಿಸಬೇಕಾದುದು ಮಾತ್ರವಲ್ಲ ದೇವಗಿರಿಯ ನಿರಪರಾಧಿ ನಿವಾಸಿಗಳು ಅದಕ್ಕೆ ತಕ್ಕ ಬೆಲೆ ತೆರಬೇಕಾಯಿತು.

ಮುಮ್ಮಡಿಸಿಂಗನ ನಿರೀಕ್ಷೆ ಸುಳ್ಳಾಗಲಿಲ್ಲ. ಮಾಯಾವಿಗಳಾದ ಯವನರನ್ನು ನಂಬಬಾರದೆಂದು ಹೇಳಿದ ಮಾತು ನಿಜವಾಯಿತು.

ಅಲ್ಲಾವುದ್ದೀನನು ಲಾಸುರಕ್ಕೆ ಹಿಂತಿರುಗಿದ್ದವನು ಇದ್ದಕ್ಕಿದ್ದ ಹಾಗೆ ಬಂದು ದಿನರಾತ್ರಿ ದೇವಗಿರಿಯ ಮೇಲೆ ಹಠಾತ್ತನೆ ದಾಳಿ ಇಟ್ಟನು. ಅಲ್ಲಾವುದ್ದೀನನ ಎಂಜಲಿಗೆ ಆಸೆ ಬಿದ್ದು ಒಬ್ಬ ದೇವಗಿರಿಯ ನಿವಾಸಿ ಕೋಟೆಯ ಬಾಗಿಲು ತೆರೆದು ದ್ರೋಹ ಬಗೆದನು. ಅಧಿಕ ಸಂಖ್ಯೆಯಲ್ಲಿ ಅಲ್ಲಾವುದ್ದೀನನು ಕೋಟೆಯನ್ನು ಹೊಕ್ಕು ಬೆಳಗಾಗುವುದರೊಳಗೆ ದೇವಗಿರಿಯನ್ನು ವಶಮಾಡಿಕೊಂಡನು. ನಗರದಲ್ಲಿ ಹಾಹಾಕಾರವೆದ್ದಿತು – ಅದೇನೆಂದು ನೋಡಲು ರಾಮದೇವರಾಯನು ತನ್ನ ಅರಮನೆಯಿಂದ ಹೊರಗೆ ಬರುವುದರೊಳಗೆ ಮುಮ್ಮಡಿಸಿಂಗನು ಓಡುತ್ತಾ ಬಂದು,

"ಪ್ರಭು, ಅನ್ಯಾಯವಾಯಿತು. ಯಾರೋ ದ್ರೋಹಿಗಳು ಕಳೆದ ರಾತ್ರಿ ಶತ್ರುಗಳಿಗೆ ಕೋಟೆಯ ದ್ವಾರಗಳನ್ನು ತೆರೆದುಬಿಟ್ಟಿದ್ದಾರೆ. ಶತ್ರುಗಳು ಅಸಂಖ್ಯಾತರಾಗಿ ಬಂದು ನಗರದೊಳಗೆ ನುಗ್ಗಿ ಕೈಗೆ ಸಿಕ್ಕಿದುದನ್ನೆಲ್ಲಾ ಕೊಳ್ಳೆ ಹೊಡೆಯುತ್ತಿದ್ದಾರೆ. ಅವರನ್ನು ಈಗ ನಾವು ಎದುರಿಸಿ ಪ್ರಯೋಜನವಿಲ್ಲ – ತಾವು ಕೂಡಲೇ ಬೆಟ್ಟದ ಮೇಲೆ ಇರುವ ಕೋಟೆಯನ್ನು ಸೇರಿಕೊಳ್ಳುವುದು ಒಳ್ಳೆಯದು !" ಎಂದನು.

"ಏನು ? ನಗರವನ್ನು ಶತ್ರುಗಳ ವಶಪಡಿಸಿಕೊಂಡರೆ ? ನಾನೊಬ್ಬ ಜೀವಗಳ್ಳನಂತೆ, ಬೆಟ್ಟದ ಮೇಲಿನ ಕೋಟೆಯಲ್ಲಿ ತಲೆತಪ್ಪಿಸಿಕೊಳ್ಳಲೇ ? ಸಾಧ್ಯವಿಲ್ಲ"

"ಪ್ರಭು, ನನ್ನ ಮಾತನ್ನು ತಾವು ಆಲಿಸಿರಿ ! ಈಗ ಶತ್ರುಗಳು ಅಧಿಕ ಸಂಖ್ಯೆಯಲ್ಲಿ ನಗರವನ್ನು ಪ್ರವೇಶಿಸಿದ್ದಾರೆ. ಅರಮನೆಯನ್ನು ಮುತ್ತಲು ಅಲ್ಲಾವುದ್ದೀನನೇ ಇತ್ತ ಹೊರಟಿದ್ದಾನೆಂದು ವಾರ್ತೆ ಬಂದಿದೆ. ತಾವು ಇಲ್ಲಿದ್ದರೆ ತಮ್ಮ ಜೀವಕ್ಕೆ ಅಪಾಯವಿದೆ. ತಾವು ಒಬ್ಬರು ಸುರಕ್ಷಿತವಾಗಿದ್ದರೆ – ಇಂತಹ ನೂರು ಅಲ್ಲಾವುದ್ದೀನರನ್ನು ಸೋಲಿಸಿ ಹಿಮ್ಮೆಟ್ಟಿಸಬಹುದು ! ತಾವು ಈಗ ಇಲ್ಲಿಂದ ಹೊರಡಬೇಕು ! ಇಲ್ಲದಿದ್ದರೆ ಅನಾಹುತವಾಗುತ್ತದೆ !"

"ನಾನು ಇಲ್ಲಿಂದ ಹೊರಟರೆ ನಗರವನ್ನು ಶತ್ರುಗಳು ಸಂಪೂರ್ಣ ನಾಶ ಮಾಡುತ್ತಾರೆ. ಇದನ್ನು ತಪ್ಪಿಸುವವರು ಯಾರು?"

"ಈ ಜವಾಬ್ದಾರಿ ನನಗೆ ಇರಲಿ! ನಾನು ಶತ್ರುಗಳ ಕೈಯಿಂದ ದೇವಗಿರಿಯನ್ನು ಉಳಿಸಿಕೊಳ್ಳಲು ಕೈಲಾದಷ್ಟು ಹೋರಾಡುತ್ತೇನೆ. ಇಲ್ಲಿ ಅವರಿಗೆ ಕುರುಡು ಕವಡೆಯೂ ದೊರೆಯುವುದಿಲ್ಲ-ಹೆಂಗಸರು ಮಕ್ಕಳು ದುರ್ಗದಲ್ಲಿ ಸುರಕ್ಷಿತರಾಗಿದ್ದಾರೆ. ಇನ್ನು ತಮ್ಮ ಮನೆಮಠಗಳನ್ನು ಸಂರಕ್ಷಿಸಿಕೊಳ್ಳಲೂ ರಾಜಧಾನಿಯ ನಿವಾಸಿಗಳು ಕೈಗೆ ಸಿಕ್ಕಿದ ಆಯುಧಗಳನ್ನು ಹಿಡಿದು ಹೋರಾಡುತ್ತಿದ್ದಾರೆ. ಅವರ ಬೆಂಬಲಕ್ಕೆ ನಮ್ಮ ಶಸ್ತ್ರ ಪಡೆ ನಿಂತರೆ ಶತ್ರುಗಳನ್ನು ಹೊರಗಟ್ಟುವುದು ಅಷ್ಟು ಕಷ್ಟವಾಗುವುದಿಲ್ಲ - ಈಗ ತಾವು ಸುರಕ್ಷಿತವಾಗಿ ಉಳಿದರೆ, ದೇವಗಿರಿಯ ಸೌಭಾಗ್ಯ ಉಳಿದಂತೆ!" ಎಂದು ಹೇಳಿ ಬಲಾತ್ಕಾರದಲ್ಲಿ ರಾಮದೇವರಾಯನನ್ನು ಮೇಲಿನ ಕೋಟೆಗೆ ಕಳುಹಿಸಿಕೊಟ್ಟನು.

ಬೇರೆ ದಾರಿ ಕಾಣದೆ ರಾಮದೇವರಾಯನು ಮೇಲಿನ ಕೋಟೆಯೊಳಗೆ ರಕ್ಷಣೆ ಪಡೆಯಬೇಕಾಯಿತು.

ಮುಮ್ಮಡಿಸಿಂಗನು ಶತ್ರುಗಳ ವಿಷಯದಲ್ಲಿ ತಪ್ಪು ತಿಳಿದಿದ್ದನು. ಆ ರಾತ್ರಿ ಅಲ್ಲಾವುದ್ದೀನನು ತನ್ನ ಸಮಸ್ತ ಸೈನ್ಯದೊಡನೆ ಹೆಚ್ಚಿನ ರಕ್ತಪಾತವಿಲ್ಲದೆ ದೇವಗಿರಿಯನ್ನು ಹೊಕ್ಕಿದ್ದನು. ಸಂಜೆಯವರೆಗೂ ಹೊರವಲಯದ ಕಾಡಿನಲ್ಲಿ ತಲೆಮರೆಸಿಕೊಂಡಿದ್ದು, ರಾತ್ರಿಯಾಗುತ್ತಲೂ ನಗರದೊಳಗೆ ನುಗ್ಗಿ ಬಂದಿದ್ದನು. ಮುಮ್ಮಡಿಸಿಂಗನು ತನ್ನ ಸೈನ್ಯವನ್ನು ಸಂಗ್ರಹಿಸಿಕೊಂಡು ಬರುವುದರೊಳಗಾಗಿ ನಗರದ ಪ್ರಮುಖ ಆಯಕಟ್ಟಿನ ಪ್ರದೇಶಗಳೂ - ಧಾನ್ಯಾಗಾರವೂ, ಸಿಡಿಮದ್ದಿನ ಉಗ್ರಾಣವೂ, ಶಸ್ತ್ರಾಸ್ತ್ರಗಳೂ ಶತ್ರುಗಳಿಗೆ ವಶವಾಗಿತ್ತು. ಈಗ ಶತ್ರುಗಳನ್ನು ಸೋಲಿಸಿ ಹಿಮ್ಮೆಟ್ಟಿಸುವುದು ಕಷ್ಟವಾಗಿತ್ತು. ಈ ಸಮಯದಲ್ಲಿ ಬೇರೇನು ಮಾಡಲು ತೋಚದೆ ಮುಮ್ಮಡಿಸಿಂಗನು, ನಗರವನ್ನು ಶತ್ರುಗಳಿಗೆ ಬಿಟ್ಟು, ಮೇಲಿನ ದುರ್ಗದ ರಕ್ಷಣೆಗೆ ಧಾವಿಸಿದನು.

ಅಷ್ಟರಲ್ಲಿ ಅಲ್ಲಾವುದ್ದೀನನು ದೇವಗಿರಿಯನ್ನು ವಶಪಡಿಸಿಕೊಂಡು ಅರಮನೆಯ ಮೇಲೆ ದಾಳಿ ಇಟ್ಟಿದ್ದನು. ಅಲ್ಲಿ ರಾಮದೇವರಾಯನಾಗಲೀ, ಅಂತಃಪುರದ ಸ್ತ್ರೀಯರಾಗಲೀ ಕೈಗೆ ಸಿಕ್ಕದೆ ತಪ್ಪಿಸಿಕೊಂಡಿದ್ದರು. ಇದನ್ನು ಅರಿತು, ಅವನು ಕೂಡಲೇ ಮೇಲು ದುರ್ಗಕ್ಕೆ ಲಗ್ಗೆ ಹಾಕಲು ಸೈನಿಕರಿಗೆ ಆಜ್ಞೆ

ಯಿತ್ತಿದ್ದನು. ಇದನ್ನು ನೋಡಿ, ಮುಮ್ಮಡಿಸಿಂಗನು ಅಳಿದುಳಿದ ಸೈನ್ಯ ದೊಡನೆ ಮೇಲು ದುರ್ಗದ ರಕ್ಷಣೆಗೆ ಹೊರಟನು.

ಎರಡು ಸೈನ್ಯಗಳಿಗೂ ಭೀಕರ ಹೋರಾಟ ನಡೆಯಿತು. ಶತ್ರುಗಳ ಕೈಜೋರಾಗಲೂ, ವಿಜೇತರಾದ ಶತ್ರುಗಳ ಮುಂದೆ ನಿಂತು ಯುದ್ಧ ಮಾಡಿ, ವೃಥಾ ಮರಣ ಹೊಂದಲು ಇಚ್ಛಿಸದೆ, ಮುಮ್ಮಡಿಸಿಂಗನು ತನ್ನ ಅಳಿದುಳಿದ ಬಲದೊಂದಿಗೆ ಮೇಲುಕೋಟೆಯನ್ನು ಸೇರಿಕೊಂಡನು. ಅಷ್ಟರಲ್ಲಿ ರಾತ್ರಿಯಾ ದುದರಿಂದ ಯವನ ಸೈನಿಕರು ಹೋರಾಟವನ್ನು ಮುಕ್ತಾಯಗೊಳಿಸಿ ತಮ್ಮ ಶಿಬಿರಗಳಿಗೆ ತೆರಳಿದರು.

ಅವರಿಗೆ ನಗರದಲ್ಲಿ ಯಥೇಚ್ಛವಾಗಿ ಧಾನ್ಯವೂ, ಶಸ್ತ್ರಾಸ್ತ್ರಗಳೂ, ಮದ್ದು ಗುಂಡುಗಳೂ ವಶವಾಗಿದ್ದವು. ಆದರೆ ನಗರದಲ್ಲಿ ಒಂದು ಮಗುವಾಗಲೀ, ಸ್ತ್ರೀಯಾಗಲೀ ಅವರಿಗೆ ದೊರೆಯದೆಹೋಗಿದ್ದರು. ಬೆಲೆಬಾಳುವ ಯಾವ ವಸ್ತುವೂ ದೊರೆಯದೆಹೋಗಿತ್ತು. ಇದರಿಂದ ಅಲ್ಲಾವುದ್ದೀನನಿಗೆ ನಿರಾಶೆ ಯಾದರೂ ತನಗೆ ದೊರೆತ ವಿಜಯದಿಂದ ಹಿಗ್ಗದೆ ಇರಲಿಲ್ಲ. ಅವನ ಪ್ರಧಾನ ಸಮಸ್ಯೆಗಳು ಪರಿಹಾರವಾಗಿದ್ದವು. ಮಳೆಗಾಲದಲ್ಲಿ ದೇವಗಿರಿಯು ಆಶ್ರಯ ಕೊಟ್ಟಿತ್ತು ಮಾತ್ರವಲ್ಲ – ರಾಮದೇವರಾಯನು ಕಷ್ಟಪಟ್ಟು ಸಂಗ್ರಹಿಸಿದ್ದ ಧಾನ್ಯದ ಉಗ್ರಾಣ, ಶಸ್ತ್ರಾಸ್ತ್ರಗಳೂ ಅವರ ಆಹಾರದ ಕೊರತೆ ಹಾಗೂ ಶಸ್ತ್ರ ಗಳ ಕೊರತೆಯನ್ನು ನಿವಾರಿಸಿದ್ದವು. ರಾಜಧಾನಿ ತಮ್ಮದಾದರೆ ಇಂದಲ್ಲ ನಾಳೆ ಮೇಲುದುರ್ಗ ತಮ್ಮ ವಶವಾಗುವುದು ಖಂಡಿತ ! ರಾಮದೇವರಾಯನು ಎಷ್ಟು ದಿನ ತಾನೇ ಬೆಟ್ಟದ ಮೇಲೆ ಆಶ್ರಯ ಪಡೆಯಬಲ್ಲ ? ಇಂದಲ್ಲ ನಾಳೆ ಕೆಳಗಿಳಿದು ಬರಲೇ ಬೇಕು ! ಆಗ ತನ್ನ ಶರತ್ತುಗಳಿಗೆ ಅವನು ಮಣಿಯಲೇ ಬೇಕು ಎಂದುಕೊಂಡು, ಯುದ್ಧವನ್ನು ಮುಂದೊತ್ತದೆ ನಗರವನ್ನು ಆಕ್ರಮಿಸಿ, ರಾಮದೇವರಾಯನ ಅರಮನೆಯಲ್ಲಿ ಬೀಡು ಬಿಟ್ಟನು.

ಅಲ್ಲಾವುದ್ದೀನನ ಸೈನಿಕರು ರಕ್ಷಕರಿಲ್ಲದ ನಗರವನ್ನು ಲೂಟಿ ಮಾಡಿ ಕೈಗೆ ಸಿಕ್ಕಿದುದನ್ನು ದೋಚಿದರು, ಪ್ರತಿಭಟಿಸಿದವರನ್ನು ಕೊಂದರು. ಮನೆ ಗಳಿಗೆ ಬೆಂಕಿ ಇಟ್ಟರು. ದೇವಾಲಯಗಳನ್ನು ಹಾಳುಗೆಡಹಿದರು. ಧರ್ಮ ಗ್ರಂಥಗಳನ್ನು ಸುಟ್ಟರು. ಗೋವಧೆ ಮಾಡಿದರು. ಹೀಗೆ ಒಂದು ತಿಂಗಳು ಪೈಶಾಚಿಕ ಪ್ರಭುತ್ವವನ್ನು ನಡೆಸಿದರು.

ಆದರೂ ಅಲ್ಲಾವುದ್ದೀನನು ಯಾವ ಉದ್ದಿಶ್ಯ ಸಾಧನೆಗಾಗಿ ದೇವಗಿರಿಯ ಮೇಲೆ ದಂಡೆತ್ತಿ ಬಂದಿದ್ದನೋ ಅದು ಸಾಧಿಸಿರಲಿಲ್ಲ. ರಾಮದೇವರಾಯನು ಮುನ್ನೆಚ್ಚರಿಕೆ ತೆಗೆದುಕೊಂಡಿದ್ದುದರಿಂದ ಅವನ ಭಂಡಾರದ ಬೆಲೆ ಬಾಳುವ ವಸ್ತುಗಳೂ, ರಾಜ ಕುಟುಂಬದವರೂ, ರಾಜಧಾನಿಯ ಸ್ತ್ರೀಯರೂ ಯುವನರ ಕೈಗೆ ಸಿಕ್ಕದೆ ಮೇಲುದುರ್ಗದಲ್ಲಿ ಸುರಕ್ಷಿತವಾಗಿ ಇದ್ದರು. ತನ್ನ ಕೈಗೆ ಸಿಕ್ಕದೆ ತಲೆ ತಪ್ಪಿಸಿಕೊಂಡ ರಾಮದೇವರಾಯನ ಬಗ್ಗೆ ಅಲ್ಲಾವುದ್ದೀನನಿಗೆ ಕೋಪ ಬಂದರೂ. ಮೇಲುದುರ್ಗದಲ್ಲಿ ಯಥೇಚ್ಛವಾಗಿ ನೀರಿನ ವಸತಿಯೂ, ಆಹಾರಸಾಮಗ್ರಿಗಳೂ, ದುರ್ಗದ ರಕ್ಷಣೆ ಸಾಕಷ್ಟು ಸಂಖ್ಯೆಯಲ್ಲಿ ಸೈನಿಕರೂ, ತೋಪುಗಳೂ ಇದ್ದುದರಿಂದ ಅದನ್ನು ವಶಪಡಿಸಿಕೊಳ್ಳುವ ಸಾಹಸಕ್ಕೆ ಅವನು ಹೋಗಲಿಲ್ಲ. ಅಲ್ಲದೆ ಮೇಲುದುರ್ಗವು ಕಡಿದಾದ ಬೆಟ್ಟದ ಮೇಲಿದ್ದುದರಿಂದ ಅದನ್ನು ವಶಪಡಿಸಿಕೊಳ್ಳುವುದು ಕಷ್ಟವಾಗಿತ್ತು. ಒಳಗಿನ ಆಹಾರವಸ್ತುಗಳು ಕಡಿಮೆ ಬಿದ್ದರೆ, ಬೇರೆ ದಾರಿ ಇಲ್ಲದೆ ರಾಮದೇವರಾಯನೇ ತನಗೆ ಶರಣು ಬರುವನೆಂದು ಊಹಿಸಿ ಅಲ್ಲಾವುದ್ದೀನನು ಕೆಳಕೋಟೆಯಲ್ಲಿ ಬೀಡುಬಿಟ್ಟನು.

ಅವನ ನಿರೀಕ್ಷೆ ವ್ಯರ್ಥವಾಗಲಿಲ್ಲ. ಮೇಲಿನ ಕೋಟೆಯಲ್ಲಿದ್ದ ಆಹಾರ ಧಾನ್ಯಗಳು ಸಾಕಷ್ಟು ಪ್ರಮಾಣದಲ್ಲಿ ಇದ್ದರೂ, ಅವನ್ನು ಅನಿರ್ದಿಷ್ಟ ಕಾಲದ ವರೆಗೆ ನಂಬಿಕೊಂಡು ಕುಳಿತಿರಲು ಸಾಧ್ಯವಿರಲಿಲ್ಲ – ದಿನಕಳೆದಂತೆ ಹಿಂದಣ ಸಂಗ್ರಹವೆಲ್ಲ ಬರಿದಾಗುತ್ತ ಬಂದಿತ್ತು. ಮುಟ್ಟಗೋಲು ಹಾಕಿಕೊಂಡು ಹೊಸದಾಗಿ ಸೇರಿಸಿದ್ದ ಒಂದು ಸಾವಿರ ಮೂಟೆ ಗೋಧಿ, ಜೋಳ, ಅಕ್ಕಿಗಳಷ್ಟೇ ಉಳಿದವು. ಅವನ್ನು ಉಪಯೋಗಿಸಬೇಕೆಂದು ಹೊರಟಾಗ – ಅದೇನು ಆಶ್ಚರ್ಯ ? ಅವುಗಳು ಅಕ್ಕಿ, ಜೋಳ, ಗೋಧಿ ಮೂಟೆಗಳು ಆಗಿರದೆ, ಕೇವಲ ಉಪ್ಪಿನ ಮೂಟೆಗಳಾಗಿದ್ದವು. ಅಲ್ಲಾವುದ್ದೀನನ ಕಡೆಯವರು ಬೇಕೆಂದೇ ಈ ಸಂಚುಮಾಡಿ ರಾಮದೇವರಾಯನನ್ನು ವಂಚಿಸಿದ್ದರು. ಅವುಗಳನ್ನು ಸರಿಯಾಗಿ ಪರೀಕ್ಷೆ ಮಾಡದೆ ಬೆಟ್ಟದ ಮೇಲಕ್ಕೆ ತಂದುದು ತುಂಬಾ ಅನರ್ಥಕ್ಕೆ ಕಾರಣವಾಗಿತ್ತು.

ಈ ಸುದ್ದಿ ತಿಳಿದಾಗ ರಾಮದೇವರಾಯನು ಹೌಹಾರಿದನು. ಅವನು ದಾಸ್ತಾನು ಇದ್ದ ಎಲ್ಲ ಮೂಟೆಗಳನ್ನು ಪರೀಕ್ಷಿಸಲು ಆಜ್ಞೆ ಮಾಡಿದನು. ಅವನ ದುರದೃಷ್ಟಕ್ಕೆ ಮೂಟೆಗಳನ್ನು ಪರೀಕ್ಷಿಸಿದಾಗ – ಕೇವಲ ನೂರು ಇನ್ನೂರು

ಮೂಟೆಗಳಷ್ಟೇ ಆಹಾರಧಾನ್ಯಗಳು ಇದ್ದವು. ಉಳಿದ ಒಂದು ಸಾವಿರ ಮೂಟೆಗಳು ಉಪ್ಪಿನ ಮೂಟೆಗಳೇ ಆಗಿದ್ದವು. ಈ ಸುದ್ದಿ ಕೇಳಿ ರಾಮದೇವ ರಾಯನಿಗೆ ಎದೆಯೊಡೆಯಿತು.

ಅತ್ತ ಶಂಕರದೇವನು ಹಿಂತಿರುಗಿಬರುವುದರೊಳಗಾಗಿ ರಾಜಧಾನಿಯು ಕೈ ಬಿಟ್ಟು ಹೋಗಿ ಶತ್ರುಗಳ ವಶವಾಗಿತ್ತು. ಅವನು ಬರುವತನಕ ಬದುಕಿ ಉಳಿಯಲು ಮೇಲು ಕೋಟೆಯಲ್ಲಿ ಆಹಾರ ಸಾಮುಗ್ರಿಗಳು ಇರಲಿಲ್ಲ-ಅಲ್ಲಿದ್ದ ಐದುಸಾವಿರ ಮಂದಿ ಸ್ತ್ರೀ ಪುರುಷರಿಗೆ ಇದ್ದ ಧಾನ್ಯ ಸಂಗ್ರಹವು ಒಂದು ವಾರಕ್ಕೂ ಬರುತ್ತಿರಲಿಲ್ಲ. ಈ ಪರಿಸ್ಥಿತಿಯಲ್ಲಿ ತಾನು ಏನು ಮಾಡಬೇಕು?

ತಾನು ಮುಮ್ಮಡಿಸಿಂಗನ ಮಾತು ಕೇಳಿ ಈ ಉಪ್ಪಿನ ಮೂಟೆಗಳನ್ನು ಧಾನ್ಯದ ಮೂಟೆಗಳೆಂದು ಭ್ರಮಿಸಿ, ಮೇಲು ಕೋಟೆಗೆ ಕಳುಹಿಸಿದುದು ತಪ್ಪಾಯಿತು. ಅವನ ಮಾತು ಕೇಳಿ ಶತ್ರುಗಳನ್ನು ಎದುರಿಸುವುದನ್ನು ಬಿಟ್ಟು ಜೀವಗಳ್ಳನಂತೆ ಮೇಲುದುರ್ಗದಲ್ಲಿ ಆಶ್ರಯ ಪಡೆದುದು ಅದಕ್ಕೂ ದೊಡ್ಡ ತಪ್ಪಾಯಿತು....ಎಂದು ಕೊಂಡು ಮುಮ್ಮಡಿಸಿಂಗನ ಮೇಲೆ ಅವನಿಗೆ ಭಯಂಕರ ಸಿಟ್ಟು ಬಂತು. ಇದಕ್ಕೆಲ್ಲಾ ಅವನೇ ಕಾರಣವೆಂದು ಬಗೆದು ಮುಮ್ಮಡಿಸಿಂಗನಿಗೆ ಹೇಳಿಕಳುಹಿಸಿದನು.

ಮುಮ್ಮಡಿಸಿಂಗನು ಆತುರದ ಕರೆಯನ್ನು ಕೇಳಿ ಓಡಿ ಬಂದನು. ರಾಮದೇವರಾಯನ ಮುಖ ಕಂಡ ಕೂಡಲೇ ಗಾಬರಿ ಗೊಂಡನು. ಅವನಿಗೆ ಇದೆಲ್ಲಾ ಏನೆಂದು ತಿಳಿಯಾದೆ ದಿಙ್ಮೂಢನಾಗಿ ನಿಂತನು.

ಅವನನ್ನು ನೋಡುತ್ತಲೇ ರಾಮದೇವರಾಯನು ಮುಖ ಗಂಟಿಕ್ಕಿ ಕ್ರೋಧದಿಂದ ಗುಡುಗಿದನು :

" ಮುಮ್ಮಡಿಸಿಂಗರೇ, ನಾನು ನಿಮ್ಮನ್ನು ನನ್ನ ಒಡಹುಟ್ಟಿದವರಂತೆ ಬಗೆದಿದ್ದರೂ, ಕಡೆಗೂ ನೀವು ನನಗೆ ಈ ಬಗೆಯ ದ್ರೋಹವೆಸಗಬಹುದೆ? "

" ಅಂತಹ ಅಪಚಾರವೇನಾಯಿತು ಪ್ರಭು ? "

" ಇನ್ನೇನಾಗಬೇಕು ? ನೀವು ಕಳುಹಿಸಿ ಕೊಟ್ಟಿರುವ ಧಾನ್ಯದ ಮೂಟೆಗಳೆಲ್ಲ ಉಪ್ಪಿನ ಚೀಲಗಳು. ನಾನು ನಿಮ್ಮನ್ನು ನಂಬಿ ಕೆಟ್ಟೆ"

" ಪ್ರಭು, ನನಗೆ ಇದೊಂದೂ ತಿಳಿಯದು ! "

"ನಿಮಗೆ ಹೇಗೆ ತಿಳಿದೀತು? ನೀವು ಆ ವ್ಯಾಪಾರಿಯಿಂದ ಮಟ್ಟ ಗೋಲು ಹಾಕಿ ಕೊಂಡ ಮೂಟೆಗಳೆಲ್ಲಾ ಉಪ್ಪಿನ ಚೀಲಗಳು. ಅವುಗಳನ್ನು ಇಲ್ಲಿಗೆ ಕಳುಹಿಸುವ ಮುನ್ನ ಒಮ್ಮೆಯಾದರೂ ಪರೀಕ್ಷಿಸಿದಿರಾ?"

"ಇಲ್ಲ ಪ್ರಭು, ತಿಳಿಯದೆ ನನ್ನಿಂದ ಅಪಚಾರವಾಯಿತು. ಈ ಕೆಲಸ ವನ್ನು ಬೇರೊಬ್ಬರಿಗೆ ವಹಿಸಿದ್ದೆ! ಅವನು ಮಾಡಿದ ಅಚಾತುರ್ಯದಿಂದ ನಾವು ಪರಿತಪಿಸಬೇಕಾಗಿ ಬಂದಿದೆ!"

"ನಾವು ಮಾತ್ರನೇ ಆಗಿದ್ದರೆ ನನಗೆ ಇಷ್ಟು ವ್ಯಥೆ ಇರಲಿಲ್ಲ-ನಮ್ಮನ್ನು ನಂಬಿ ಕುಳಿತಿರುವ ಐದು ಸಾವಿರ ಸ್ತ್ರೀಪುರುಷರಿಗೆ ದ್ರೋಹವಾಗಿದೆ! ಈಗಿರುವ ಧಾನ್ಯ ಸಂಗ್ರಹ ಇಲ್ಲಿರುವವರಿಗೆ ಒಂದು ವಾರಕ್ಕೂ ಸಾಲುವುದಿಲ್ಲ! ಅನಂತರ?"

ಈ ಮಾತಿಗೆ ಮುಮ್ಮಡಿಸಿಂಗನು ಉತ್ತರ ಕೊಡಲಿಲ್ಲ. ಅನಂತರ,

"ಪ್ರಭು ನಾವು ಧೈರ್ಯಗೆಟ್ಟು ಕುಳಿತರೆ, ಉಳಿದವರಿಗೆ ಧೈರ್ಯ ಹೇಳುವವರು ಯಾರು? ಈ ಬಗ್ಗೆ ನೀವು ಚಿಂತಿಸುವ ಕಾರಣವಿಲ್ಲ. ಅಷ್ಟರೊಳ ಗಾಗಿ ಕುಮಾರ ಶಂಕರದೇವರ ಸೈನ್ಯ ನಮ್ಮ ನೆರವಿಗೆ ಬರಬಹುದು. ಒಂದು ವೇಳೆ ನಮಗೆ ನೆರವು ಬರದೆ ಇದ್ದರೆ- ನನ್ನನ್ನು ಬಲಿಕೊಟ್ಟಾದರೂ ಸರಿ. ಇಲ್ಲಿನ ಜನರಿಗೆ ಅಗತ್ಯವಾದ ಆಹಾರಧಾನ್ಯವನ್ನು ಒದಗಿಸುತ್ತೇನೆ!"

"ಹೇಗೆ ಒದಗಿಸುತ್ತೀರಿ? ರಾಜಧಾನಿಯಲ್ಲಿ ಶತ್ರುಗಳು ಬೀಡು ಬಿಟ್ಟಿರು ವಾಗ, ನಾವು ಕೆಳಗೆ ಹೋಗುವುದಾದರೂ ಹೇಗೆ?"

"ಆ ಕೆಲಸ ನನಗೆ ಇರಲಿ! ನನ್ನಿಂದಾಗಿರುವ ಅಚಾತುರ್ಯಕ್ಕೆ ತಲೆ ಯನ್ನು ದಂಡವಾಗಿ ಕೊಟ್ಟಾದರೂ – ಆಹಾರಧಾನ್ಯಗಳನ್ನು ಶತ್ರು ಶಿಬಿರದಿಂದ ಸಾಗಿಸಿಕೊಂಡು ಬರುತ್ತೇನೆ. ಈ ಕಾರ್ಯದಲ್ಲಿ ಈ ದೇಹ ಬಿದ್ದುಹೋದರೂ ಸರಿ! ಈ ಸಂಕಲ್ಪದಿಂದ ಹಿಮ್ಮೆಟ್ಟುವುದಿಲ್ಲ!"

"ಈಗ ದುಡುಕಿ ಒಂದು ಅಚಾತುರ್ಯವಾಯಿತು! ಇನ್ನೊಮ್ಮೆ ದುಡುಕಿ ದರೆ ನಮ್ಮ ಸರ್ವ ನಾಶವಾಗಬಹುದು! ಎಂತಹ ಪ್ರಸಂಗವೇ ಬರಲಿ ನಾನು ಈ ಕೋಟೆಯಿಂದ ಒಂದು ನರಹುಳವನ್ನು ಕೆಳಕ್ಕೆ ಕಳುಹಿಸಿಕೊಡಲಾರೆ! ಒಂದು ವೇಳೆ ಉಪವಾಸದಿಂದ ಸಾಯುವುದಿದ್ದರೆ- ನಾನು ಮೊದಲು ಸಾಯು ತ್ತೇನೆ. ಶತ್ರುಗಳಿಗೆ ಶರಣಾಗುವುದಿಲ್ಲ! ನಮಗೆ ದೇವರ ಕೃಪೆಯಿಂದ ನೆರವು

ಬಂದರೆ ಒಳ್ಳೆಯದು! ಇಲ್ಲದಿದ್ದರೆ – ನಾನು ಇಲ್ಲೆ ಪ್ರಾಯೋಪವೇಶ ಮಾಡು ವೆನೇ ಹೊರತು ಶತ್ರುಗಳಿಗೆ ಕೈಸೆರೆ ಸಿಕ್ಕುವುದಿಲ್ಲ!"

ಎಂದು ವೀರೋಜಿತವಾಗಿ ಪ್ರತಿಜ್ಞೆ ಮಾಡಿದನು.

"ಪ್ರಭು, ಅಂತಹ ಸಮಯ ಬಂದರೆ ಈ ಮುಮ್ಮಡಿಸಿಂಗನು ಸಾಯಲು ಹಿಂಜರಿಯುವುದಿಲ್ಲ – ಆ ನೀಚರು ನಮ್ಮ ದೇಹಗಳ ಮೇಲೆ ನಡೆದುಕೊಂಡು ಬಂದು, ಈ ದುರ್ಗವನ್ನು ಆಕ್ರಮಿಸಿಕೊಳ್ಳಬೇಕು! ನಾವು ಬದುಕಿರುವವರೆಗೆ ನಮ್ಮ ದೇಹವಾಗಲೀ, ನಮ್ಮ ಮಾನವಾಗಲೀ, ನಮ್ಮನ್ನು ನಂಬಿರುವ ಸ್ತ್ರೀ ಪುರುಷರ ಶೀಲಹರಣವಾಗಲೀ, ನಾವು ಸಹಿಸುವುದಿಲ್ಲ! ಈ ಮಾತು ಕಂಪಿಲ ನಾಥನ ಆಣೆಗೂ ಸತ್ಯ!"

ಎಂದು ಮುಮ್ಮಡಿಸಿಂಗನೂ ವೀರಪ್ರತಿಜ್ಞೆ ಮಾಡಿದನು.

## ೯

ಅಲ್ಲಾವುದ್ದೀನನ ನಿರೀಕ್ಷೆ ಸುಳ್ಳಾಗಲಿಲ್ಲ. ಮೇಲು ಕೋಟೆಯಲ್ಲಿ ಇದ್ದ ಆಹಾರಸಂಗ್ರಹವು ಕರಗುತ್ತಾ ಬಂದಂತೆ ರಾಮದೇವರಾಯನ ಚಿಂತೆ ಹೆಚ್ಚುತ್ತಾ ಹೋಗಿತ್ತು. ಅವನು ಇಂದು ತನ್ನ ಮಗ ಶಂಕರ ದೇವನು ತನಗೆ ನೆರವು ನೀಡಲು ಬರಬಹುದು, ನಾಳೆ ಬರಬಹುದು ಎಂದು ಅವನ ದಾರಿ ಕಾಯುವುದರಲ್ಲೇ ತನ್ನ ಸಮಯವನ್ನು ಕಳೆದಿದ್ದನು. ಹೊರಗಿನಿಂದ ಸಹಾಯ ಬಾರದ ಹೊರತು ರಾಮದೇವರಾಯನು ಮೇಲುಕೋಟೆಯನ್ನು ಬಿಟ್ಟು ಕೆಳಗಿಳಿಯುವಂತೆ ಇರಲಿಲ್ಲ. ಕೆಳಗೆ ಇಳಿಯದ ಹೊರತು ಆಹಾರಧಾನ್ಯಗಳು ದೊರಕುವಂತೆ ಇರಲಿಲ್ಲ. ಹೀಗಾಗಿ ದಿನದಿನಕ್ಕೂ ಕರ್ಪೂರದಂತೆ ಕರಗಿಹೋಗುತ್ತಿದ್ದ ಧಾನ್ಯದ ರಾಶಿ ಯನ್ನು ನೋಡಿಕೊಂಡು ಕೊರಗುವುದೇ ಅವನ ಕಥೆಯಾಯಿತು.

ಒಂದು ದಿನವಾಯಿತು........

ಮೂರು ದಿನವಾಯಿತು........

ಒಂದು ವಾರವೂ ಕಳೆಯಿತು........

ಬರಬೇಕಾಗಿದ್ದ ನೆರವು ಬರಲಿಲ್ಲ. ಉಗ್ರಾಣದಲ್ಲಿ ಇದ್ದ ಆಹಾರದಲ್ಲಿ ಬಹುಪಾಲು ವೆಚ್ಚವಾಗಿತ್ತು. ಈಗಾಗಲೇ ಮೇಲಿದ್ದ ಜನರಿಗೆಲ್ಲ ಅರೆಹೊಟ್ಟೆಯ ಗ್ರಾಸ ಕೊಡುತ್ತಾ ಬಂದಿದ್ದುದರಿಂದ ಇಷ್ಟು ದಿನ ತಳ್ಳಿತ್ತು. ಇದೇ ಪ್ರಮಾಣ ದಲ್ಲಿ ಹೆಚ್ಚು ದಿನ ಮುಂದುವರೆಯುವಂತೆ ಇರಲಿಲ್ಲ. ಹೆಂಗಸರು ಮಕ್ಕಳು ಹಸಿವಿನಿಂದ ಕಂಗೆಟ್ಟಿದ್ದರು. ಮಕ್ಕಳ ಪಾಲಿಗೆ ಅರೆ ಹೊಟ್ಟೆಯ ಗಂಜಿ ದೊರಕಿದರೆ ತಾವು ಹೇಗಾದರೂ ಕಾಲ ಕಳೆಯಬಹುದೆಂದು ದೊಡ್ಡವರು ಯೋಚಿಸಿದ್ದರು. ಆದರೆ ಹೊಟ್ಟೆ ಕೇಳಬೇಕಲ್ಲ? ಎಲ್ಲೆಲ್ಲಿ ನೋಡಿದರೂ ಹಸಿವಿನಿಂದ ಹಾಹಾ ಕಾರಕ್ಕೆ ಆರಂಭವಾಗಿತ್ತು! ಯಾರ ಮುಖದಲ್ಲೂ ಕಳೆಯಿಲ್ಲ – ಯಾರ ದೇಹದಲ್ಲೂ ಶಕ್ತಿಯಿಲ್ಲ. ಈ ಸ್ಥಿತಿಯಲ್ಲಿ ಹೆಚ್ಚು ದಿನ ದುರ್ಗವನ್ನು ಶತ್ರು ಗಳಿಂದ ರಕ್ಷಿಸಿಕೊಳ್ಳುವುದು ಸಾಧ್ಯವಿರಲಿಲ್ಲ. ಪರಿಸ್ಥಿತಿ ಹೀಗೆಯೇ ಮುಂದು ವರೆದರೆ ದುರ್ಗವು ಯವನರಿಗೆ ವಶವಾಗುವ ದಿನ ದೂರವಿರಲಿಲ್ಲ.

ಇದೇ ಸಮಯದಲ್ಲಿ ದುರ್ಗದಲ್ಲಿದ್ದ ನಾಲ್ಕಾರು ಬಾವಿಗಳು ಬತ್ತಿ ಹೋದವೆಂಬ ವರದಿ ಬಂತು. ಇದು ರಾಮದೇವರಾಯನನ್ನು ಸಿಡಿಲಿನಂತೆ ಬಡಿಯಿತು. ಇದುವರೆಗೆ ಯಥೇಚ್ಛವಾಗಿ ಕುಡಿಯಲು ನೀರಾದರೂ ದೊರಕು ತ್ತಿತ್ತು. ಈಗ ಅದಕ್ಕೂ ಕೊರತೆಯುಂಟಾಯಿತು. ಭಾವಿಗಳು ಬಾಯಿ ತೆರೆದುಕೊಂಡು ತಳ ಕಾಣಿಸಿದವು. ಜನ ಅನೇಕ ದಿನಗಳವರೆಗೆ ಸ್ನಾನವಿಲ್ಲದೆ ಮಲಿನವಸ್ತ್ರಗಳನ್ನೆ ತೊಟ್ಟರು ಹಾಲು ಹೈನುಗಳು ಔಷಧಿಗೂ ದುರ್ಲಭವಾದವು. ದುರ್ಗದಲ್ಲಿ ಬೆಳ್ಳಿ ಬಂಗಾರದ ಒಡವೆಗಳೂ, ಇನ್ನಿತರ ಬೆಲೆಬಾಳುವ ವಸ್ತುಗಳೂ ಹೇರಳವಾಗಿದ್ದವು. ಆದರೆ ಹಿಡಿಕೂಳು ದೊರಕುವುದು ದುರ್ಲಭವಾಗಿತ್ತು– ಅಕ್ಕಿಕಾಳಿಗೆ ಮುತ್ತಿನ ಬೆಲೆ ಬಂದಿತ್ತು. ಜನ ಊಟವಿಲ್ಲದೆ ಒಣಗಿದ ಕಾಷ್ಠ ವಾದರು. ನಿಶ್ಶಕ್ತಿ, ಹಲವಾರು ರೋಗಗಳಿಗೆ ದಾರಿಮಾಡಿಕೊಟ್ಟಿತು. ಇದ ನ್ನೆಲ್ಲಾ ನೋಡಿ ತಾನು ವಿಚಾರ ಮಾಡದೆ ಮುಮ್ಮಡಿಸಿಂಗನ ಮಾತು ಕೇಳಿ ಕೊಂಡು ಮೂರ್ಖ ಕೆಲಸ ಮಾಡಿದೆ ಎಂದು ರಾಮದೇವರಾಯನು ಪರಿತಪಿ ಸಿದನು.

ಈಗ ದಿನ ಕಳೆಯುವುದು ಒಂದು ಗಂಡಾಂತರವಾಗಿತ್ತು. ಆದರೆ ಬರ ಬೇಕಾಗಿದ್ದ ಸಹಾಯ ಬಂದಿರಲಿಲ್ಲ – ರಾಮದೇವರಾಯನು ಹತಾಶನಾದನು.

ಕಣ್ಣೆದುರಿಗೆ ಆಕ್ರಂದನ ಮಾಡುವ ಮಕ್ಕಳನ್ನೂ, ಕಂಗೆಟ್ಟಿರುವ ತಾಯಂದಿರನ್ನೂ, ನೋಡಿ ಹೃದಯ ಕಿತ್ತು ಬರುತ್ತಿತ್ತು. ಜನ ಹಸಿವಿನಿಂದ ಹುಳಗಳಂತೆ ಸಾಯುವುದನ್ನು ನೋಡಿಕೊಂಡು ಸುಮ್ಮನಿರಲು ಅವನಿಂದ ಸಾಧ್ಯವಿರಲಿಲ್ಲ. ಕಡೆಗೆ ಈ ನರಮೇಧವನ್ನು ನೋಡಲಾರದೆ ಶತ್ರುಗಳ ಜತೆಯಲ್ಲಿ ಹಿಡಿ ಕೂಳಿಗಾಗಿ ಸಂಧಾನ ನಡೆಸಲು ನಿಶ್ಚಯಿಸಿದನು. ಈಗ ಹಸಿವಿನ ಮುಂದೆ ಆತ್ಮಗೌರವ, ಸ್ವದೇಶ ಪ್ರೇಮ, ಸ್ವಧರ್ಮಗಳ ರಕ್ಷಣೆಗಳು ಅರ್ಥರಹಿತವಾಗಿ ಕಂಡಿದ್ದವು.

ಈ ನಿರ್ಧಾರವನ್ನು ಕೇಳಿ ಮುಮ್ಮಡಿಸಿಂಗನು ಗಾಬರಿಯಿಂದ ಓಡಿ ಬಂದನು.

"ಪ್ರಭು, ತಾವು ಸಂಧಾನಾಕಾಂಕ್ಷಿಗಳಾಗಿದ್ದೀರೆಂದು ಕೇಳಿದೆ ನಿಜವೆ?" ಎಂದು ಉದ್ವೇಗದಿಂದ ಕೇಳಿದನು.

"ಹೌದು, ಜನತೆಯ ಆಕ್ರಂದನವನ್ನು ಕೇಳಿ ಕಿವುಡನಂತೆ ಕುಳಿತುಕೊಳ್ಳುವುದು ನನ್ನಿಂದ ಸಾಧ್ಯವಾಗಲಿಲ್ಲ, ದಂಡನಾಯಕರೇ, ಜನತೆಯ ಹಿತಾಸಕ್ತಿಯ ಸಲುವಾಗಿ ನನ್ನ ಸ್ವಾತಂತ್ರ್ಯವನ್ನು ಬಲಿಗೊಡಬೇಕೆಂದಿದ್ದೇನೆ!"

"ಏನು, ಶತ್ರುಗಳ ಜತೆಯಲ್ಲಿ ಸಂಧಾನವೆ?"

"ಹೌದು! ನನಗೆ ಆತ್ಮಗೌರವದ ಪ್ರಶ್ನೆಗಿಂತ ನಿರಪರಾಧಿಗಳ ಈ ಕೊಲೆ ತಪ್ಪಿಸುವುದು ಮುಖ್ಯವಾಗಿದೆ!"

"ಹಾಗಾದರೆ, ನಾವು ಯಾವ ಉದ್ದಿಶ್ಯ ಸಾಧನೆಗಾಗಿ ಇದುವರೆಗೆ ಹೋರಾಡಿದೆವೋ ಅವುಗಳಿಗೆ ತಿಲಾಂಜಲಿ ಕೊಡಲು ನಿಶ್ಚಯಿಸಿದ್ದೀರಾ?"

"ಹೌದು. ನನ್ನ ಹೆಠಮಾರಿತನಕ್ಕೆ ನಿರಪರಾಧಿಯಾದ ಪ್ರಜೆಗಳನ್ನು ಬಲಿಗೊಡುವುದಕ್ಕಿಂತ ಪ್ರಜಾಕಲ್ಯಾಣಕ್ಕಾಗಿ ನನ್ನ ಸರ್ವಸ್ವವನ್ನು ಬಲಿಗೊಡಲು ನಿಶ್ಚಯಿಸಿದ್ದೇನೆ!"

"ಪ್ರಭು, ತಮ್ಮ ಆತ್ಮಾರ್ಪಣೆಯಿಂದ ಪ್ರಜೆಗಳಿಗೆ ಒಳ್ಳೆಯದಾಗುತ್ತದೆಯೇ? ನೀವು ಇಂದು ಹಿಡಿಕೂಳಿಗಾಗಿ ಶತ್ರುಗಳೊಡನೆ ಸಂಧಾನ ಮಾಡಿಕೊಂಡರೆ ನೀವಾಗಿ ನೀವು ಸ್ವತಂತ್ರವಾಗಿದ್ದ ದೇವಗಿರಿಯನ್ನು ಪಾರತಂತ್ರ್ಯಕ್ಕೆ ನೂಕಿದಂತೆ ಆಗದೆ? ಯವನರಿಂದ ನಮ್ಮ ಪವಿತ್ರವಾದ ಧರ್ಮಕ್ಕೆ ಗಂಡಾಂತರವಿಲ್ಲವೆ? ಇದನ್ನು ತಿಳಿದೂ ನೀವು ಯವನರೊಡನೆ ಸಂಧಾನ ಮಾಡಿಕೊಳ್ಳಬೇಕೆನ್ನುವಿರಾ?"

"ಮುಮ್ಮಡಿಸಿಂಗರೇ, ಇದನ್ನೆಲ್ಲಾ ನಾನೂ ಯೋಚಿಸಿಯೇ ಈ ನಿರ್ಧಾರ ಕೈಕೊಂಡಿದ್ದೇನೆ. ಯವನರೊಡನೆ ಸಂಧಾನವೆಂದರೆ ನಮ್ಮ ಸ್ವಾತಂತ್ರ್ಯದ ಹರಣವಾದಂತೆ. ಆದರೆ ಈ ಸಮಯಲ್ಲಿ ನಮಗೆ ಬೇರೆ ದಾರಿ ಉಳಿದಿಲ್ಲ. ನಾವು ಸ್ವಾಭಿಮಾನದಿಂದ ಇಲ್ಲಿ ಇದ್ದರೆ ಹಸಿವು ಬಾಯಾರಿಕೆಗಳಿಂದ ಸಾಯ ಬೇಕಾದೀತು ! ಆಗಲಾದರೂ ನಮ್ಮ ಸ್ವಾತಂತ್ರ್ಯ ಹರಣವಾಗುವುದು ದಿಟ ! ಆದುದರಿಂದ ಕಾರ್ಯ ಮಿಂಚಿಹೋಗುವ ಮೊದಲೇ, ಶತ್ರುಗಳೊಡನೆ ಸಂಧಾನ ಮಾಡಿಕೊಂಡು ಯೋಗ್ಯವಾದ ಒಪ್ಪಂದ ಮಾಡಿಕೊಳ್ಳಬೇಕೆಂದಿದ್ದೇನೆ. ಇದರಿಂದ ಸ್ವಾತಂತ್ರ್ಯಹರಣವಾದರೇನಂತೆ. ನಾವು ಪ್ರಾಣದಿಂದ ಉಳಿದು ಕೊಳ್ಳಬಹುದು !"

"ಪ್ರಭೂ ತಾವು ಇದುವರೆಗೂ ಜೀವವನ್ನು ಬಿಗಿ ಹಿಡಿದು ಕಾದಿದ್ದೀರಿ ! ಇದುವರೆಗೆ ಕಾದಿದ್ದವರು ಇನ್ನು ಎರಡುಮೂರು ದಿನಗಳು ಕಾದಿರಲಾರಿರಾ ? ಅಷ್ಟರಲ್ಲಿ ಶಂಕರದೇವರ ಸೈನ್ಯ ನಮ್ಮ ನೆರವಿಗೆ ಬರಬಹುದು !"

"ಸಾಧ್ಯವಿಲ್ಲ, ದಿನವೊಂದು ಯುಗವಾಗಿದೆ. ಇಲ್ಲಿ ಜನ ಹಸಿವೆಯಿಂದ ಹುಳಹುಪ್ಪಟೆಗಳಂತೆ ಸಾಯುತ್ತಿದ್ದಾರೆ. ಸೈನಿಕರಲ್ಲಿ ಹಾಹಾಕಾರವೆದ್ದಿದೆ. ನಾನು ಸುಮ್ಮನೆ ಕುಳಿತರೆ ಅವರು ದಂಗೆ ಏಳುವುದು ದಿಟ. ಪರಿಸ್ಥಿತಿ ಕೈಮೀರುವ ಮೊದಲೇ ಕಾರ್ಯೋನ್ಮುಖನಾಗುವುದು ವಿವೇಕ ! ಇದುವರೆಗೆ ತಡೆದಂತೆ ಇನ್ನು ತಡೆಯಲು ಸಾಧ್ಯವಿಲ್ಲ."

"ಪ್ರಭು, ಇದು ದುಡುಕುವ ವಿಷಯವಲ್ಲ–ಆ ನೀಚರೊಡನೆ ಸಂಧಾನಕ್ಕೆ ಎಳೆಸುವುದಕ್ಕಿಂತ ಆತ್ಮಹತ್ಯೆ ಒಳ್ಳೆಯದು. ಈ ಕಾರ್ಯ ಕೈಗೊಳ್ಳುವುದಕ್ಕಿಂತ ಮತ್ತೊಮ್ಮೆ ಆಲೋಚಿಸಿ ನೋಡಿ !"

"ನಾನು ಚನ್ನಾಗಿಯೇ ಆಲೋಚಿಸಿದ್ದೇನೆ."

"ಇದೇ ನಿಮ್ಮ ಕಡೆಯ ನಿರ್ಧಾರವೇ ?"

"ಹೌದು !"

"ಹಾಗಾದರೆ ಯಾರೇನೂ ಮಾಡುವಂತೆ ಇಲ್ಲ – ದೈವಚಿತ್ತದಲ್ಲಿ ಇದ್ದಂತೆ ನಡೆಯಲಿ !" ಎಂದು ಹೇಳಿ ಅಲ್ಲಿಂದ ಬೀಳ್ಕೊಂಡನ ಮುಮ್ಮಡಿಸಿಂಗ.

ಕಡೆಗೂ ಯಾವುದು ನಡೆಯಬಾರದೆಂದು ಅವನು ಆಶಿಸಿದ್ದನೋ ಅದೇ ನಡೆದಿತ್ತು. ಸ್ವಾಭಿಮಾನಿಯೂ, ಸ್ವಾತಂತ್ರಪ್ರೇಮಿಯೂ ಆಗಿದ್ದ ರಾಮದೇವ

ರಾಯನನ್ನು ಪರಿಸ್ಥಿತಿಯು ಒತ್ತಡ ಹಣ್ಣುಮಾಡಿತ್ತು. ಅವನು ಸಾಮಾನ್ಯ ಜನರಂತೆ, ಪ್ರಾಣರಕ್ಷಣೆಯು ಸಲುವಾಗಿ ಯವನರೊಡನೆ ಸಂಧಾನಕ್ಕೆ ಎಳೆಸಿದ್ದನು.

ರಾಮದೇವರಾಯನ ಇಚ್ಛೆಯನ್ನು ಹೊತ್ತು ಒಬ್ಬ ದೂತನು ಅಲ್ಲಾವುದ್ದೀನನ ಶಿಬಿರದಲ್ಲಿ ಕಾಣಿಸಿಕೊಂಡಾಗ ಅಲ್ಲಾವುದ್ದೀನನಿಗೆ ತನ್ನ ಕಣ್ಣನ್ನು ನಂಬಲಾಗಲಿಲ್ಲ. ಹೀಗೆ ಆಗಬಹುದೆಂದು ಅವನು ನಿರೀಕ್ಷಿಸಿದ್ದರೂ-ಇಷ್ಟು ಅಲ್ಪ ಕಾಲದಲ್ಲಿ ರಾಮದೇವರಾಯನು, ಯಾವುದೇ ಯುದ್ಧವಿಲ್ಲದೆ ತನಗೆ ಶರಣುಬರುವನೆಂದಾಗಲೀ ಸಂಧಾನಕ್ಕೆ ಒಡಂಬಡುವನೆಂದಾಗಲೀ ಅವನು ತಿಳಿದಿರಲಿಲ್ಲ. ವಾಸ್ತವವಾಗಿ ಮೇಲು ದುರ್ಗದಲ್ಲಿ ಅಹಾರ ಸಂಗ್ರಹವು ಇದ್ದು ಈ ಮುತ್ತಿಗೆ ದೀರ್ಘಕಾಲ ನಡೆಯುವುದಾಗಿ ಅವನು ಊಹಿಸಿದ್ದನು. ಮುತ್ತಿಗೆ ದೀರ್ಘವಾಗುತ್ತಾ ನಡೆದುದನ್ನು ನೋಡಿ ಅವನ ಸೈನಿಕರು ಈಗಾಗಲೇ ಅಸಮಾಧಾನ ವ್ಯಕ್ತಪಡಿಸುತ್ತಿದ್ದರು. ಅಲ್ಲಾವುದ್ದೀನನು ತನ್ನ ಸೈನಿಕರಿಗೆ ದೇವಗಿರಿಯಲ್ಲಿ ಅಪಾರ ಸಂಪತ್ತು ಸೂರೆಸಿಕ್ಕುವುದೆಂದೂ, ಬೇಕಾದಷ್ಟು ಸ್ತ್ರೀಯರೂ, ಮದ್ಯಮಾಂಸಗಳೂ ದೊರೆಯುವುದೆಂದೂ ಆಸೆ ಇಟ್ಟು ಅವರನ್ನು ದೇವಗಿರಿಯ ಮೇಲೆ ಹುರಿದುಂಬಿಸಿದ್ದನು. ಆದರೆ ದೇವಗಿರಿ ಅವರ ವಶವಾದ ಮೇಲೆ ಅಲ್ಲಿ ಮುದುಕರೂ, ಮುಪ್ಪರೂ, ಹೆಳವರೂ, ಪರದೇಶಿಗಳೂ ತುಂಬಿದ್ದರು. ಮನೆಗಳು ಬರಿದಾಗಿದ್ದವು. ಒಂದು ಬೆಳ್ಳಿಯ ನಾಣ್ಯ ಅವರಿಗೆ ದೊರೆಯದೆಹೋಗಿತ್ತು.

ಹೆಂಗಸರು ಮಕ್ಕಳ ಹೆಸರೇ ಇರಲಿಲ್ಲ. ಆಹಾರವಸ್ತುಗಳೂ, ಮದ್ಯಮಾಂಸಗಳು ಹೇರಳವಾಗಿದ್ದರೂ ಹೆಣ್ಣು ಹೊನ್ನುಗಳ ಆಸೆಯಿಂದ ಬಂದಿದ್ದ ಅವರಿಗೆ ನಿರಾಶೆಯೇ ಆಗಿತ್ತು. ಅವರು ಅಲ್ಲಾವುದ್ದೀನನ ಮೇಲೆ ತಿರುಗಿ ಬೀಳುವ ಸ್ಥಿತಿಯಲ್ಲಿದ್ದರು. ಈ ಸ್ಥಿತಿಯಲ್ಲಿ ರಾಮದೇವರಾಯನು ತಾನಾಗಿ ಸಂಧಾನಕ್ಕೆ ದೂತರನ್ನು ಕಳುಹಿಸಿಕೊಟ್ಟಿದ್ದನು.

ರಾಮದೇವರಾಯನ ದೂತರನ್ನು ಅಲ್ಲಾವುದ್ದೀನನು ವಿಶ್ವಾಸದಿಂದಲೇ ಬರಮಾಡಿಕೊಂಡನು. ಅವನಿಗೂ ಸದ್ಯದ ಪರಿಸ್ಥಿತಿಯಲ್ಲಿ ಸಂಧಾನ ಪ್ರಿಯವಾಗಿತ್ತು. ಅವನು ರಾಮದೇವರಾಯನ ಸ್ವಾತಂತ್ರ್ಯಹರಣಕ್ಕಾಗಿ ಬಂದಿರಲಿಲ್ಲ-ಹೊನ್ನಿನ ಸಲುವಾಗಿ ಬಂದಿದ್ದನು. ಅಂತಲೇ ಅವನು ಸಂಧಿಗೆ

ಒಪ್ಪಿದನು. ರಾಮದೇವರಾಯನು ತನ್ನ ಸೈನ್ಯದ ವೆಚ್ಚಕ್ಕೆ ಮೂರು ಲಕ್ಷ ಚಿನ್ನದ ವರಹಗಳನ್ನು ಕೊಡಬೇಕು. ಐವತ್ತು ಮಣ ಬಂಗಾರವನ್ನೂ, ಇನ್ನಿತರ ಬೆಲೆಬಾಳುವ ವಸ್ತುಗಳನ್ನೂ ತನಗೆ ಕಾಣಿಕೆಯಾಗಿ ಕೊಡಬೇಕು, ರಾಮದೇವರಾಯನು ವರ್ಷಂಪ್ರತಿ ತನಗೆ ಒಂದು ಲಕ್ಷ ವರಹಗಳನ್ನು ಪೊಗದಿಯಾಗಿ ಕೊಡತಕ್ಕದ್ದು—ಎಂಬ ಶರತ್ತುಗಳನ್ನು ವಿಧಿಸಿದನು.

ಈ ಶರತ್ತುಗಳನ್ನು ನೋಡಿ ರಾಮದೇವರಾಯನು ಭೂಮಿಗೆ ಇಳಿದು ಹೋದನು. ಆದರೆ ಈ ಸಮಯದಲ್ಲಿ ವಿಜಯೋನ್ಮತ್ತ ಶತ್ರುವು ವಿಧಿಸುವ ಶರತ್ತಿನಂತೆ ನಡೆಯದೆ ಬೇರೆ ದಾರಿ ಇರಲಿಲ್ಲ. ಬೇರೆ ದಾರಿಕಾಣದೆ ಅವನು ಇದಕ್ಕೆ ಒಡಂಬಟ್ಟನು.

ರಾಮದೇವರಾಯನು ಇನ್ನೇನು ಅಲ್ಲಾವುದ್ದೀನನ ಶರತ್ತುಗಳಂತೆ ನಡೆದು ಕೊಳ್ಳಬೇಕೆಂದಿರುವಾಗ ಒಂದು ಘಟನೆ ನಡೆಯಿತು.

ಉತ್ತರದ ಕೋಟೆಯ ಬಾಗಿಲನ್ನು ಕಾಯುತ್ತಿದ್ದ ಒಬ್ಬ ಪಹರೆ ಸೈನಿಕನ ಕೈಗೆ ಒಂದು ಪಾರಿವಾಳವು ಸಿಕ್ಕಿತ್ತು. ಅವನು ಅದನ್ನು ಪರೀಕ್ಷಿಸಿದಾಗ ಅದರ ಕಾಲಿಗೆ ಒಂದು ಪತ್ರ ಕಟ್ಟಿತ್ತು. ಅದನ್ನು ಕುತೂಹಲದಿಂದ ನೋಡಿದಾಗ–ಅದು ದೇವಗಿರಿಯ ರಕ್ಷಣೆಗೆ ಹಿಂದಿರುಗಿಬರುತ್ತಿದ್ದ ಶಂಕರದೇವರಾಯನು ಬರೆದಿದ್ದ ಪತ್ರವಾಗಿತ್ತು. ಈ ಪತ್ರವನ್ನು ಅವನು ಕೂಡಲೇ ಮುಮ್ಮಡಿ ಸಿಂಗನಿಗೆ ತಲುಪಿಸಿದನು. ಮುಮ್ಮಡಿಸಿಂಗನು ಅದನ್ನು ರಾಮದೇವರಾಯನಿಗೆ ಕೊಟ್ಟನು.

ರಾಮದೇವರಾಯನು ಲಗುಬಗೆಯಿಂದ ಅದನ್ನು ಓದಿಕೊಂಡನು. ಅದರಲ್ಲಿ ಶಂಕರದೇವರಾಯನು ಹೀಗೆ ಬರೆದಿದ್ದನು.

“ತೀರ್ಥರೂಪ ತಂದೆಯವರ ದಿವ್ಯ ಚರಣಗಳಿಗೆ—ಬಾಲಕ ಶಂಕರ ದೇವನು ಮಾಡುವ ನಮಸ್ಕಾರಗಳು. ತಾವು ಬರೆದ ಪತ್ರ ಕರಗತವಾಯಿತು. ಮನಸ್ಸಿಗೆ ತುಂಬಾ ಖೇದವಾಯಿತು. ನಾನು ಸೈನ್ಯಸಮೇತ ರಾಜಧಾನಿಯಿಂದ ಹೊರಗೆ ಇರುವಾಗಲೇ ಈ ಘಟನೆ ಸಂಭವಿಸಬೇಕೆ? ಮುಖ್ಯ ನಮ್ಮನ್ನು ದೇವರು ಪರೀಕ್ಷಿಸಿ ನೋಡುತ್ತಿದ್ದಾನೆ. ನಾನು ಇಂದೇ ನನ್ನ ಸೈನಿಕರಿಗೆ ದೇವಗಿರಿಗೆ ಹಿಂದಿರುಗಲು ಆಜ್ಞೆಮಾಡಿದ್ದೇನೆ. ನಾನು ಎಷ್ಟೇ ಶೀಘ್ರವಾಗಿ ದೇವಗಿರಿಗೆ ಬಂದರೂ ದೇವಗಿರಿಯನ್ನು ತಲುಪಲು ಒಂದೆರಡು ವಾರಗಳು ಆಗಬಹುದು.

ಅಷ್ಟರೊಳಗಾಗಿ ತಾವು ಹೇಗಾದರೂ ಮಾಡಿ ದೇವಗಿರಿಯನ್ನು ಶತ್ರುಗಳ ಕೈಯಿಂದ ಉಳಿಸಿಕೊಳ್ಳಬೇಕು. ತಾವು ಯಾವ ಪ್ರಸಂಗದಲ್ಲೇ ಆಗಲೀ, ಶತ್ರುಗಳಿಗೆ ಶರಣಾಗತರಾಗಬಾರದು! ಎಷ್ಟೇ ಕಷ್ಟವಾದರೂ ಅವರೊಡನೆ ಸಂಧಿ ಮಾಡಿಕೊಳ್ಳಬಾರದು. ತಿಳಿದವರಿಗೆ ಹೆಚ್ಚು ಹೇಳಲಾರೆ. ತಮ್ಮ ಬಳಿ ಮುಮ್ಮಡಿಸಿಂಗರು ಇರುವವರೆಗೆ ನಮಗೆ ಶತ್ರುಗಳ ಭೀತಿ ಇಲ್ಲ. ದೇವರು ಈ ಕಷ್ಟದ ಸಮಯದಲ್ಲಿ ನಮಗೆ ಧೈರ್ಯ, ಸ್ಥೈರ್ಯಗಳನ್ನು ದಯಪಾಲಿಸಲಿ.

ಇಂತು ನಿಮ್ಮ ಪ್ರೀತಿಯ ಪುತ್ರ
ಶಂಕರದೇವ.

ಈ ಪತ್ರವನ್ನು ನೋಡಿ, ಕಡೆಯ ವಾಕ್ಯವನ್ನು ಓದಿ ರಾಮದೇವರಾಯನಿಗೆ ಏಕೋ ಕಣ್ಣಿನಲ್ಲಿ ನೀರು ಕಾಣಿಸಿಕೊಂಡಿತು. ಅವನ ಬಾಯಿಂದ ಭಾರವಾದ ನಿಟ್ಟುಸಿರು ಹೊರಬಿತ್ತು. ಎಂತಹ ಸಮಯದಲ್ಲಿ ಈ ಪತ್ರ ಕೈಸೇರಿದೆ. ಈಗ ಈ ಪತ್ರದಂತೆ ನಡೆಯಬೇಕೆ? ಶತ್ರುಗಳ ಶರತ್ತಿನಂತೆ ಒಪ್ಪಂದ ಮಾಡಿಕೊಳ್ಳಬೇಕೆ? ಯಾವುದೂ ತಿಳಿಯದೆಹೋಯಿತು. ಶಂಕರದೇವನೇನೋ ಯಾವ ಪ್ರಸಂಗದಲ್ಲೂ, ಎಷ್ಟೇ ಕಷ್ಟವಾದರೂ ಶತ್ರುಗಳ ಜತೆಯಲ್ಲಿ ಸಂಧಾನ ಮಾಡಿಕೊಳ್ಳಬಾರದೆಂದು ಸ್ಪಷ್ಟವಾಗಿ ಬರೆದಿದ್ದನು. ಈಗ ಇಲ್ಲಿನ ಪರಿಸ್ಥಿತಿ ತೀರಾ ಹದಗೆಟ್ಟಿತ್ತು – ಶತ್ರುಗಳೊಡನೆ ಸಂಧಾನದ ಹೊರತು–ಬದುಕಲು ದಾರಿ ಇರಲಿಲ್ಲ. ಈಗ ಏನು ಮಾಡಬೇಕು? ಎಂದು ರಾಮದೇವರಾಯನು ದಿಙ್ಮೂಢನಾಗಿ ಕುಳಿತನು.

"ಮುಮ್ಮಡಿಸಿಂಗರೇ, ಈಗ ನಾವು ಏನು ಮಾಡಬೇಕೆಂದು ನಿಮ್ಮ ಇಚ್ಛೆ?"

"ಪ್ರಭು, ಕುಮಾರರ ಆಶಯದಂತೆ ನಡೆಯುವುದೇ ಒಳ್ಳೆಯದೆಂದು ನನ್ನ ಮನಸ್ಸಿಗೆ ತೋರುತ್ತಿದೆ!"

"ನಾವು ಮೇಲೆ ಬಿದ್ದು ಸಂಧಾನಕ್ಕೆ ಎಳೆಸಿ, ಈಗ ಅದನ್ನೂ ನಾವೇ ಮುರಿದರೆ ಇದರಿಂದ ಶತ್ರು ನಮ್ಮ ಮೇಲೆ ಆಕ್ರೋಶಗೊಳ್ಳುವುದಿಲ್ಲವೆ?"

"ಆಕ್ರೋಶಗೊಂಡು ನಮ್ಮನ್ನೇನು ತಾನೇ ಮಾಡಬಲ್ಲ ಪ್ರಭು? ನಾವು ಸಂಧಾನ ಮುರಿದೆವೆಂದು ತೋರಿಸಿಕೊಳ್ಳುವುದು ಬೇಡ. ಇಂದು ನಾಳೆ ಎಂದು

ಕಾಲಹರಣ ಮಾಡೋಣ. ಅಷ್ಟರಲ್ಲಿ ಕುಮಾರರು ಸೈನ್ಯಸಮೇತ ನಮ್ಮ ರಕ್ಷಣೆಗೆ ಬರಬಹುದು!"

"ಅಧೈರ್ಯ ನನಗೆ ಇಲ್ಲ-ಆದರೂ ನಿಮ್ಮ ಹಾಗೂ ಕುಮಾರನ ಆಶಯವನ್ನು ತಿರಸ್ಕರಿಸಲಾರೆ! ಇನ್ನು ಒಂದು ವಾರ ನಾನು ಕಾಯುತ್ತೇನೆ. ಅಷ್ಟರಲ್ಲಿ ಕುಮಾರನು ಬರದಿದ್ದರೆ-ನಾನು ಶತ್ರುಗಳೊಡನೆ ಸಂಧಿ ಮಾಡಿಕೊಳ್ಳುತ್ತೇನೆ"

ಎಂದು ತನ್ನ ಅಂತಿಮ ನಿರ್ಧಾರ ತಿಳಿಸಿದ ರಾಮದೇವರಾಯ ಈ ಅವಧಿಯಲ್ಲಿ ದೈವಕೃಪೆ ಇದ್ದರೆ ಪರಿಸ್ಥಿತಿ ತಮಗೆ ಅನುಕೂಲವಾಗಿ ಮಾರ್ಪಡಬಹುದು ಎಂದುಕೊಂಡು ಮುಮ್ಮಡಿಸಿಂಗನು ಸಮಾಧಾನದ ನಿಟ್ಟುಸಿರು ಬಿಟ್ಟನು.

ಈ ಬಾರಿ ದೇವರು ಆವನ ಕೈಬಿಡಲಿಲ್ಲ. ಮುಮ್ಮಡಿಸಿಂಗನು ಊಹಿಸಿದ್ದಂತೆ ಮೂರು ನಾಲ್ಕು ದಿನಗಳಲ್ಲೇ ಶಂಕರದೇವನು ತನ್ನ ಸೈನ್ಯದೊಡನೆ ಬಂದು ದೇವಗಿರಿಯ ಬಳಿ ಬೀಡುಬಿಟ್ಟನು.

ಅವನಿಗೆ ದೇವಗಿಯು ಶತ್ರುಗಳಿಗೆ ವಶವಾದ ಸಂಗತಿ ತಿಳಿದಿರಲಿಲ್ಲ-ಅದು ತಿಳಿದಾಗ ಅವನಿಗಾದ ಆಶ್ಚರ್ಯ ಅಷ್ಟಿಷ್ಟಲ್ಲ. ಇಷ್ಟು ಸುಲಭವಾಗಿ ದೇವಗಿರಿಯ ಯಾದವ ಸೈನ್ಯ ಹೇಗೆ ಸೋತುಹೋಯಿತು? ಸಂಪದ್ಭರಿತವಾದ ದೇವಗಿರಿಯು ಹೇಗೆ ಯವನ ಸೈನ್ಯಕ್ಕೆ ವಶವಾಯಿತು-ಎಂದು ಯೋಚಿಸಿದರೂ ಅವನಿಗೆ ಬಗೆಹರಿಯಲಿಲ್ಲ. ಅವನು ಅಲ್ಲಿಗೆ ಬಂದ ಮೇಲೆ ಅಲ್ಲಿದ್ದವರಿಂದ ನಡೆದ ಎಲ್ಲ ಸಂಗತಿ ತಿಳಿಯಿತು. ಅಲ್ಲಾವುದ್ದೀನನು ಮೋಸದಿಂದ ದೇವಗಿರಿಯನ್ನು ವಶಪಡಿಸಿಕೊಂಡನೆಂಬುದನ್ನು ಕೇಳಿ ತುಂಬಾ ವ್ಯಥೆಯಾಯಿತು. ರಾಮದೇವರಾಯನು ರಾಜಧಾನಿಯ ಸ್ತ್ರೀಯರಿಗೂ ಮಕ್ಕಳಿಗೂ ಬೆಲೆಬಾಳುವ ವಸ್ತುಗಳಿಗೂ ಮೇಲುದುರ್ಗದಲ್ಲಿ ರಕ್ಷಣೆ ನೀಡಿದ್ದಾನೆ ಎಂದು ತಿಳಿದು ವಿಷಾದ ಮಿಶ್ರಿತ ಸಂತೋಷವಾಯಿತು. ಆದರೆ ದುರ್ಗದ ಮೇಲೆ ಸಾಕಷ್ಟು ಆಹಾರವಿಲ್ಲದೆ ಅವರು ತೊಂದರೆಗೀಡಾಗಿರುವರೆಂದು ತಿಳಿದಾಗ ಕರುಳು ಕತ್ತರಿಸಿದಂತೆ ನೋವಾಯಿತು.

ತಾನು ಬರುವುದನ್ನೇ ಚಾತಕಪಕ್ಷಿಯಂತೆ ನಿರೀಕ್ಷಿಸುತ್ತಾ ಕಾದು ಕುಳಿತಿರುವ ತಂದೆಯ ಅಸಾಹಾಯಸ್ಥಿತಿಯನ್ನು ನೆನೆದು ಮರುಗಿದನು.

ಕೂಡಲೇ ತನ್ನ ಗೂಢಚಾರರಿಂದ ಉಪಾಯವಾಗಿ ರಾಮದೇವರಾಯನಿಗೆ ತಾನು ಸೈನ್ಯಸಮೇತ ಬಂದಿರುವ ಸಂಗತಿಯನ್ನು ತಿಳಿಸಿ, ಇನ್ನು ಹೆದರುವ

ಕಾರಣವಿಲ್ಲವೆಂದೂ, ದೈವ ತಮಗೆ ನೆರವಾಗುವುದೆಂದೂ ಭರವಸೆ ಇತ್ತ-ಮೇಲುದುರ್ಗದವರು ಬಂಧಮುಕ್ತರಾಗುವ ದಿನ ದೂರವಿಲ್ಲವೆಂದು ಧೈರ್ಯ ತಳೆದರು.

ಆದರೆ ಆವನೊಂದು ನೆನೆದರೆ ದೈವವೊಂದು ನೆನೆಯಿತು. ಶಂಕರ ದೇವನು ಅಲ್ಲಾವುದ್ದೀನನ ಶಕ್ತಿಯನ್ನೂ ಯುಕ್ತಿಯನ್ನೂ ಅರಿಯದೆ ಹೋರಾಟಕ್ಕೆ ಎಳೆಸಿದನು. ಅವನು ತಂದೆಯ ಹಾಗೂ ರಾಜಧಾನಿಯ ಜನತೆಯ ಸಂಕಷ್ಟಗಳನ್ನು ನಿವಾರಿಸುವ ಹುರುಪಿನಲ್ಲಿ ಶತ್ರುಗಳ ಬಲಾಬಲಗಳನ್ನು ತಿಳಿಯದೆ ದುಡುಕಿದನು.

ಅವನು ದೇವಗಿರಿಯ ಮೇಲೆ ತನ್ನ ಸಣ್ಣ ದಳದೊಂದಿಗೆ ಬಿದ್ದಾಗ ಯವನರು ದೇವಗಿರಿಯನ್ನು ರಕ್ಷಿಸಲು ಹೋರಾಡುವ ಬದಲು ಅದನ್ನು ಶಂಕರ ದೇವನ ಪಾಲುಮಾಡಿ ಓಡಿಹೋದರು. ಇದನ್ನು ನೋಡಿ ಶಂಕರದೇವನು ಯವನರು ಹೇಡಿಗಳೆಂದೂ ತನಗೆ ಯುದ್ಧ ಕೊಡದೆ ಓಡಿದರೆಂದೂ ಬಗೆದನು. ಅವನು ತನಗೆ ದೊರೆತ ರಕ್ತರಹಿತ ಜಯದಿಂದ ಹಿಗ್ಗಿ ಸಂತೋಷದ ಸುದ್ದಿಯನ್ನು ತಂದೆಗೆ ತಿಳಿಸಲು ತಾನೇ ಹೋದನು.

ರಾಮದೇವರಾಯನಿಗೆ ಈ ವಾರ್ತೆ ಕೇಳಿ ಕಿವಿಯ ಮೇಲೆ ಅಮೃತವರ್ಷವಾದಂತೆ ಆಯಿತು. ಆವನು ತನ್ನ ಕಷ್ಟಗಳಿಗೆ ಕೊನೆಬಂದಿತೆಂದು ತಿಳಿದನು. ಮಗನನ್ನು ತಬ್ಬಿಕೊಂಡು ಸಂತೋಷಭಾಷ್ಪ ಸುರಿಸಿದನು. ಆದರೆ ಮುಮ್ಮಡಿ ಸಿಂಗನು ಮಾತ್ರ ಈ ಘಟನೆಯಿಂದ ಹಿಗ್ಗಲಿಲ್ಲ-ಕುಟಿಲನಾದ ಅಲ್ಲಾವುದ್ದೀನನು ಯುದ್ಧ ಕೊಡದೆ ದೇವಗಿರಿಯಿಂದ ಓಡಿಹೋದನೆಂಬುದರಲ್ಲಿ ಮೋಸವಿದೆ ಎಂದು ಶಂಕಿಸಿದನು. ಅವರ ಭೀತಿ ಬುಡವಿಲ್ಲದ್ದೆಂದು ರಾಮದೇವರಾಯನೂ, ಶಂಕರದೇವರಾಯನೂ ಹಾಸ್ಯಮಾಡಿದರು.

ಮುಮ್ಮಡಿಸಿಂಗನ ಊಹೆ ಸುಳ್ಳಾಗಲಿಲ್ಲ-ಇದಾದ ಮಾರನೆಯ ದಿನವೇ ಅಲ್ಲಾವುದ್ದೀನನು ಹಠಾತ್ತನೆ ದೇವಗಿರಿಯ ಮೇಲೆ ದಾಳಿ ಇಟ್ಟನು. ಕೋಟೆಯ ಗೋಡೆಗಳನ್ನು ಯವನರು ಈ ಮೊದಲೇ ನೆಲಸಮ ಮಾಡಿದ್ದರು. ಈಗ ದೇವಗಿರಿ ರಕ್ಷಕರಿಲ್ಲದ ನಗರ ಆಗಿತ್ತು. ಅದರ ಮೇಲೆ ದಾಳಿ ಇಟ್ಟಾಗ ಅದು ಸುಲಭವಾಗಿ ವಶವಾಯಿತು.

ಅರಮನೆಯಲ್ಲಿ ಮಲಗಿದ್ದ ರಾಮದೇವರಾಯ ಶಂಕರದೇವರಾಯನನ್ನು

ಸುಲಭವಾಗಿ ಕೈಸೆರೆ ಸಿಕ್ಕಿದರು. ಈಗ ಅವರಿಗೆ ಅಲ್ಲಾವುದ್ದೀನನ ತಂತ್ರವೆಂದು ತಿಳಿಯಿತು. ಈ ವೇಳೆಗೆ ಕಾರ್ಯ ಮಿಂಚಿಹೋಗಿತ್ತು. ಈಗ ತಂದೆ ಮಕ್ಕಳು ಶತ್ರುವಿಗೆ ಸೆರೆ ಸಿಕ್ಕಿದ್ದದು ಮಾತ್ರವಲ್ಲ—ಅವರ ಸಮಸ್ತ ರಾಜ ಭಂಡಾರವೂ ಅವರ ವಶವಾಗಿತ್ತು.

ವಿಜಯೋನ್ಮತ್ತರಾದ ಯವನರು ನಗರದ ಸ್ತ್ರೀಪುರುಷರ ಮೇಲೆ ಅಮಾನುಷ ರೀತಿಯಲ್ಲಿ ಅತ್ಯಾಚಾರ ಮಾಡಿದರು. ಕೈಗೆ ಸಿಕ್ಕಿದುದನ್ನು ದೋಚಿ, ಮನೆಗಳಿಗೆ ಬೆಂಕಿ ಇಟ್ಟರು. ಈ ನರಮೇಧವನ್ನು ನೋಡಲಾರದೆ, ರಾಮದೇವರಾಯನು ಮತ್ತೊಮ್ಮೆ ಅಲ್ಲಾವುದ್ದೀನನೊಡನೆ ಸಂಧಾನಕ್ಕೆ ಎಳೆಸಿದನು.

ಆದರೆ ವಿಜಯೋನ್ಮತ್ತನಾಗಿದ್ದ ಅಲ್ಲಾವುದ್ದೀನನು ಸಂಧಾನಕ್ಕೆ ಒಪ್ಪಲಿಲ್ಲ. ಎಲ್ಲವೂ ತನ್ನದೇ ಆಗಿರುವಾಗ ಸಂಧಾನದ ಅವಶ್ಯಕತೆಯಾದರೂ ಏನು? ಎಂದು ರಾಮದೇವರಾಯನ ದೂತನನ್ನು ತಿರಸ್ಕರಿಸಿದನು. ಕಡೆಗೆ ರಾಮದೇವರಾಯನು ದೈನ್ಯದಿಂದ ಪ್ರಾರ್ಥಿಸಿದಾಗ ಅಲ್ಲಾವುದ್ದೀನನು ಔದಾರ್ಯವನ್ನು ತೋರಿಸುವಂತೆ ಸಂಧಿಗೆ ಒಪ್ಪಿದನು.

ಈ ಸಂಧಿಯ ಶರತ್ತುಗಳಂತೆ ಅಲ್ಲಾವುದ್ದೀನನು ರಾಮದೇವರಾಯನನ್ನು ಸೆರೆಯಿಂದ ಬಿಡುಗಡೆಮಾಡಲು ಒಪ್ಪಿದನು. ಅವರ ರಾಜ್ಯವನ್ನು ತಾನು ಆಕ್ರಮಿಸಿಕೊಳ್ಳದೆ, ಅವರಿಂದ ವರ್ಷಕ್ಕೆ ಮೂರು ಲಕ್ಷ ವರಹಗಳ ಪೊಗದಿಯನ್ನು ಸ್ವೀಕರಿಸಲು ಒಪ್ಪಿದನು. ರಾಮದೇವರಾಯನು ಸ್ವಾತಂತ್ರ್ಯವನ್ನು ಕಳೆದುಕೊಂಡು ದಿಲ್ಲೀಶ್ವರನ ಸಾಮಂತ ದೊರೆಯಾದನು. ಯುದ್ಧದ ವೆಚ್ಚಕ್ಕೆಂದೂ, ಸೈನಿಕರಿಗೆ ಸಂಭಾವನೆಯೆಂದೂ, ತನಗೆ ಕಾಣಿಕೆ ಎಂದೂ ರಾಮದೇವರಾಯನ ಭಂಡಾರದಲ್ಲಿದ್ದ ಆರುನೂರು ಮಣ ಬಂಗಾರವನ್ನೂ, ಎರಡು ಮಣ ಮುತ್ತುರತ್ನಗಳನ್ನೂ, ಒಂದು ಸಾವಿರ ಮಣ ಬೆಳ್ಳಿಯನ್ನೂ, ನಾಲ್ಕು ಸಾವಿರ ರೇಷ್ಮೆವಸ್ತ್ರಗಳನ್ನೂ ಇನ್ನಿತರ ವಸ್ತುಗಳನ್ನೂ ಬಲವಂತವಾಗಿ ಕಿತ್ತುಕೊಂಡನು.

ಇದರಿಂದ ರಾಮದೇವರಾಯನ ಭಂಡಾರ ಬರಿದಾದರೂ, ಬೇರೆ ದಾರಿ ಇಲ್ಲದೆ ಅವನು ಒಪ್ಪಬೇಕಾಯಿತು. ಅಲ್ಲಾವುದ್ದೀನನು ಯಾವ ಉದ್ದಿಶ್ಯ ಸಾಧನೆಗಾಗಿ ದೇವಗಿರಿಯ ಮೇಲೆ ದಂಡೆತ್ತಿ ಬಂದಿದ್ದನೋ ಅದು ನೆರವೇರಿತ್ತು.

ಅವನು ತನಗೆ ದೊರೆತ ಸೂರೆಯಲ್ಲಿ ಕೊಂಚ ಭಾಗವನ್ನು ಸೈನಿಕರಿಗೆ ಹಂಚಿ ಅವರನ್ನು ತೃಪ್ತಿಗೊಳಿಸಿ, ದೇವಗಿರಿಯನ್ನು ದಿಲ್ಲೀಶ್ವರನಿಗೆ ಅಧೀನಪಡಿಸಿ, ತನಗೆ ದೊರೆತ ವಿಪುಲವಾದ ಸೂರೆಯೊಡನೆ ಅಲ್ಲಿಂದ ಕಾಲ್ತೆಗೆದನು.

## ೧೦

ಅಲ್ಲಾವುದ್ದೀನನಿಗೆ ಬೇಕಾಗಿದ್ದುದು ದೇವಗಿರಿಯ ಸೂರೆಯೇ ಹೊರತು ಅದರ ದುರಾಕ್ರಮಣವಲ್ಲ. ಅವನಿಗೆ ದೇವಗಿರಿಯ ಸಂಪತ್ತು ಬೇಕಾಗಿತ್ತೇ ಹೊರತು ರಾಮದೇವರಾಯನನ್ನು ಪದಚ್ಯುತನನ್ನಾಗಿ ಮಾಡುವುದಲ್ಲ. ಅವನು ಕಾರಾಕ್ಕೆ ಬಂದ ದಿನದಿಂದಲೂ ಪ್ರವಾಸಿಗರ ಬಾಯಲ್ಲೂ, ವ್ಯಾಪಾರಿಗಳ ಬಾಯಲ್ಲೂ ಯಾದವರ ವೈಭವ, ಅವರ ಸಂಪತ್ತುಗಳ ಬಗ್ಗೆ ವಿಪುಲವಾಗಿ ಕೇಳಿದ್ದನು. ಸಾಳ್ವ ತಿಕ್ಕಮನು ಹೊಯ್ಸಳರ ಮೇಲೆ ದಂಡೆತ್ತಿಹೋಗಿ ದ್ವಾರ ಸಮುದ್ರದಿಂದ ಹೇರಳವಾದ ಸಂಪತ್ತನ್ನು ದೇವಗಿರಿಗೆ ತೆಗೆದುಕೊಂಡು ಹೋಗಿದ್ದನು. ಇದು ಜನಜನಿತವಾಗಿ ಅಲ್ಲಾವುದ್ದೀನನ ಕಿವಿಗೂ ಬಿದ್ದಿತ್ತು. ಅಲ್ಲದೆ ದೇವಗಿರಿಯ ಯಾದವರು ಹಿಂದಿನಿಂದಲೂ ತಮ್ಮ ರಾಜಭಂಡಾರದಲ್ಲಿ ವಿಪುಲವಾದ ಧನಕನಕ ವಸ್ತುಗಳನ್ನು ಶೇಖರಿಸುತ್ತಾ ಬಂದಿದ್ದರು. ಹೀಗಾಗಿ ರಾಮದೇವರಾಯನ ರಾಜಭಂಡಾರದಲ್ಲಿ ಅಪರಿಮಿತವಾದ ಬೆಳ್ಳಿ ಬಂಗಾರಗಳೂ, ಮುತ್ತುರತ್ನಗಳೂ ಸೇರಿದ್ದವು. ಇವುಗಳ ಆಸೆಯಿಂದ ಅಲ್ಲಾವುದ್ದೀನನು ದೇವಗಿರಿಯ ಮೇಲೆ ಎರಗಿದ್ದನು – ಬೆಣ್ಣೆಯ ಮೇಲೆ ಹದ್ದು ಎರಗುವಂತೆ. ರಾಮದೇವರಾಯನ ಅಪೂರ್ವ ನಿಧಿಯು ಬಹುಪಾಲು ವಶವಾಗುತ್ತಲೂ ತಾನು ಬಂದ ಕೆಲಸ ಮುಗಿಯಿತೆಂದು ದೇವಗಿರಿಯಿಂದ ನಿರ್ಗಮಿಸಿದ್ದನು.

ಅಲ್ಲಾವುದ್ದೀನನು ದೇವಗಿರಿಯಿಂದ ನೂರಾರು ಹೇರೆತ್ತುಗಳ ಮೇಲೂ, ಒಂಟೆಗಳ ಮೇಲೂ ದೇವಗಿರಿಯಲ್ಲಿ ದೊರೆತ ಬೆಲೆಬಾಳುವ ವಸ್ತುಗಳನ್ನು ಸಾಗಿಸಿಕೊಂಡು ಹೊರಟ ಮೇಲೆ ಬರಿದಾದ ರಾಜಭಂಡಾರವನ್ನು ನೋಡಿ

ರಾಮದೇವರಾಯನ ಹೃದಯ ಬರಿದಾದಂತೆ ಭಾಸವಾಯಿತು. ಅವನ ಪೂರ್ವಿಕರು ಆಪದ್ಧನವಾಗಿ ಇಟ್ಟಿದ್ದ ನಿಧಿಯನ್ನು ರಕ್ತ ಹರಿಸಿ ಸಂಪಾದಿಸಿದ್ದ ಸಂಪತ್ತನ್ನು, ತಾವು ಹೇಡಿಗಳಂತೆ ಜೀವ ಉಳಿಸಿಕೊಳ್ಳಲು ಯವನರಿಗೆ ಕೊಡ ಬೇಕಾಗಿ ಬಂದುದಕ್ಕೆ ತುಂಬಾ ವಿಷಾದಿಸಿದನು. ಅವನಿಗೆ ತನ್ನ ಅಧಿಕಾರ, ಸಂಪತ್ತು. ಸೌಭಾಗ್ಯಗಳನ್ನು ಕಳೆದುಕೊಂಡ ಮೇಲೆ ಬಾಳೇ ಬರಿದಾದಂತೆ ಭಾಸ ವಾಗಿತ್ತು, ಇಂತಹ ಹೇಡಿ ಬಾಳ್ವೆಗಿಂತ ಸಾವೇ ಸುಖಕರವಾಗಿ ಕಂಡಿತ್ತು. ಅವನಿಗೆ ತನ್ನ ಮೇಲೇ ತಿರಸ್ಕಾರ ಹುಟ್ಟಿತ್ತು. ತನ್ನವರೆಲ್ಲರ ಮೇಲೆಯೂ ಜಿಗುಪ್ಸೆ ಉಂಟಾಗಿತ್ತು. ತಾನು ಬುದ್ಧಿವಂತನಾಗಿ ಅಲ್ಲಾವುದ್ದೀನನೊಂದಿಗೆ ಮೊದಲೇ ಗೌರವ ಪೂರ್ಣವಾದ ಒಪ್ಪಂದ ಮಾಡಿಕೊಂಡಿದ್ದರೆ ಕೇವಲ ಐವತ್ತು ಮಣ ಬಂಗಾರದಲ್ಲಿ ಎಲ್ಲವೂ ತೀರ್ಮಾನವಾಗುತ್ತಿತ್ತು. ಆದರೆ ಶಂಕರ ದೇವ ಹಾಗೂ ಮುಮ್ಮಡಿಸಿಂಗರ ಮಾತು ಕೇಳಿಕೊಂಡು ತಾನು ದುಡುಕಿ, ಒಪ್ಪಂದ ವನ್ನು ಮುರಿದುದರ ಪ್ರತ್ಯಕ್ಷ ಪರಿಣಾಮವಾಗಿ ತನ್ನ ಸಂಪತ್ತನ್ನೂ-ತನ್ನ ಸ್ವಾತಂತ್ರ್ಯವನ್ನೂ ಯವನರಿಗೆ ಸೂರೆ ಕೊಟ್ಟಿದ್ದನು. ಇಂತಹ ಹೇಯ ಬಾಳಿ ಗಿಂತ ಸಾವು ಸುಖಕರವಾಗಿತ್ತು. ಅಂತಲೇ ಅವನು ಘೋರವಾದ ಅಪರಾದ ವನ್ನು ಮಾಡಿದವನಂತೆ ಅಸಮಾದಿತನಾಗಿ ತನ್ನ ಅಂತಃಪುರವನ್ನು ಸೇರಿದವನು ಬಹು ಕಾಲವಾದರೂ ಹೊರಗೆ ಬರಲಿಲ್ಲ.

ಸದಾ ಏನನ್ನೋ ಕುರಿತು ಧ್ಯಾನಿಸುವನು. ಏನೋ ಹಗಲುಗನ ಸುಕಾಣುತ್ತಾ ಕುಳಿತುಕೊಳ್ಳುವನು. ತನ್ನ ಮೇಲೆ ಏನನ್ನೋ ಗೊಣಗುಟ್ಟು ವನು. ಯಾರ ಜತೆಯಲ್ಲೂ ಸಂಭಾಷಿಸುವನು-ಹೀಗೆ ಅವನು ಭ್ರಮಿಷ್ಟನಂತೆ ನಡೆದುಕೊಳ್ಳುತ್ತಿದ್ದನು ಅವನಿಗೆ ಊಟ ತಿಂಡಿಗಳಲ್ಲಾಗಲೀ ರಾಜ ಕೀಯದ ಲ್ಲಾಗಲೀ, ರಾಜ್ಯಭಾರದಲ್ಲಾಗಲೀ ಗೃಹಕೃತ್ಯದಲ್ಲಾಗಲಿ ಮನೋರಂಜನೆಗಳ ಲ್ಲಾಗಲೀ-ಕಡೆಗೆ ಆಪ್ತರೊಡನೆ ಸಂದರ್ಶನ-ಮಾತು ಕತೆಗಳಲ್ಲಾಗಲೀ ಆಸಕ್ತಿ ಯಿರಲಿಲ್ಲ. ಅವನು ಸದಾ ಚಿಂತಾಮೂರ್ತಿಯಾಗಿ ಕುಳಿತುಕೊಂಡು ಇರುತ್ತಿದ್ದನು ಇದನ್ನು ನೋಡಿ ಮಹಾರಾಣಿ ಎಂಗಲದೇವಿಗೂ ಯುವರಾಜ ಕುಮಾರ ಶಂಕರ ದೇವನಿಗೂ ಗಾಬರಿಯಾಯಿತು. ಅವರು ರಾಮದೇವರಾಯನನ್ನು ಸಮಾದಾನ ಗೊಳಿಸಲು ಪ್ರಯತ್ನಿಸಿ ವಿಫಲರಾದರು. ಕಡೆಗೆ ಈ ಸ್ಥಿತಿಯಲ್ಲಿ ರಾಮದೇವ ರಾಯನನ್ನು ಹೆಚ್ಚು ಬಿಟ್ಟಿರುವುದು ಅಪಾಯವೆಂದು ದೊರೆಯನ್ನು ಸಮಾಧಾನ

ಗೊಳಿಸಿ, ಜೀವನದಲ್ಲಿ ಅಸಕ್ತಿ ವಹಿಸುವಂತೆ ಮಾಡಲು ಮುಮ್ಮಡಿಸಿಂಗನನ್ನು ಮೊರೆಹೊಕ್ಕರು.

ಅವರ ಕೋರಿಕೆಯಂತೆ ಮುಮ್ಮಡಿಸಿಂಗನು ದೊರೆ ರಾಮದೇವರಾಯನನ್ನು ಸಂತೈಸಲು ಅರಮನೆಗೆ ಬಂದನು.

ಅವನನ್ನು ನೋಡುತ್ತಲೇ ರಾಮದೇವರಾಯನು ಮೌನವದನದಲ್ಲೇ ನಿರುತ್ಸಾಹದ ಧ್ವನಿಯಲ್ಲೇ ಅವನನ್ನು ಬರಮಾಡಿಕೊಂಡು–ಕುಳಿತುಕೊಳ್ಳಲು ಆಸನವನ್ನು ತೋರಿಸಿದನು. ಆದರೆ ಮಾತನಾಡಲಿಲ್ಲ. ಅವನಲ್ಲಿ ಮೊದಲಿನ ಹುರುಪಾಗಲೀ, ಆಸಕ್ತಿಯಾಗಲೀ ಇರಲಿಲ್ಲ ಇದನ್ನು ಮುಮ್ಮಡಿಸಿಂಗನು ಅರಿಯದೆ ಇರಲಿಲ್ಲ.

"ಪ್ರಭು, ಆಗಿ ಹೋದುದನ್ನೇ ಚಿಂತಿಸುತ್ತಾ ಕೊರಗುತ್ತಾ ಕುಳಿತರೆ ಬರುವ ಭಾಗ್ಯವೇನು? ನಮ್ಮ ಹಣೆಯಲ್ಲಿ ದೇವರು ಹೇಗೆ ಬರೆದಿದ್ದಾನೋ ಹಾಗೇ ನಡೆಯಿತು. ಇದನ್ನು ನಾವು ತಪ್ಪಿಸಬಲ್ಲವೇ?"

ಎಂದು ಶಾಂತ ಧ್ವನಿಯಲ್ಲಿ ಹೇಳಿದನು.

"ಮುಮ್ಮಡಿಸಿಂಗರೇ, ಇಂದು ನೀವು ಇದೆಲ್ಲ ದೈವೇಚ್ಛೆ ಎಂದು ಹೇಳುತ್ತೀರಿ. ಆದರೆ ಆ ದಿನ ನೀವು ನನಗೆ ಹೀಗೆ ಧರ್ಮೋಪದೇಶಮಾಡದೆ, ಅಡ್ಡದಾರಿ ತಿಳಿಸಿದಿರಿ! ನಾನು ನಿಮ್ಮ ಮಾತು ಕೇಳಿಕೊಂಡು ನಡೆದುದರಿಂದಲೇ ಇಷ್ಟೆಲ್ಲ ಅನರ್ಥ ಉಂಟಾಯಿತು. ನಾನು ನಿಮ್ಮನ್ನು ನಂಬಿಕೆಟ್ಟೆ."

"ಪ್ರಭು, ಏನು ನಿಮ್ಮ ಮಾತು? ತಾವು ನನ್ನನ್ನು ನಂಬಿಕೆಟ್ಟಿರಾ?"

"ಹೌದು. ಆ ದಿನ ನೀವು ಶಂಕರ ದೇವನ ಮಾತು ಕೇಳಿಕೊಂಡು ನನ್ನನ್ನು ಯವನರೊಡನೆ ಮಾಡಿಕೊಳ್ಳಬೇಕೆಂದಿದ್ದ ಒಪ್ಪಂದ ಮುರಿಯಲು ಪ್ರೇರೇಪಿಸಿದಿರಿ. ನಿಮ್ಮ ಮಾತಿನಂತೆ ನಾನು ನಡೆಯದಿದ್ದರೆ ಈ ದುಷ್ಟ ಯವನರನ್ನು ಕೇವಲ ಐವತ್ತು ಮಣ ಚಿನ್ನದಲ್ಲಿ ಸಾಗಹಾಕುತ್ತಿದ್ದೆ. ಆದರೆ ನಿಮ್ಮ ಸಲಹೆಯನ್ನು ಕೇಳಿದುದಕ್ಕೆ ಆರುನೂರು ಮಣ ಬಂಗಾರ ಮಾತ್ರವಲ್ಲ ನನ್ನ ರಾಜಬಂಡಾರವನ್ನೇ ಯವನರಿಗೆ ಸೂರೆ ಕೊಡಬೇಕಾಯಿತು. ಇದು ನಿಮ್ಮ ಸಲಹೆಯಂತೆ ನಾನು ನಡೆದುದಕ್ಕೆ ನನಗೆ ಆದ ಉಪಕಾರ ಎಂದು ತಿರಸ್ಕಾರದಿಂದ ನಕ್ಕನು.

"ಪ್ರಭು, ದೇವರು ನಮಗೆ ಪ್ರತಿಕೂಲವಾಗಿರುವಾಗ ಯಾರುತಾನೇ ಏನು ಮಾಡಬಲ್ಲರು? ಹೀಗೆ ಆಗ ಬಹುದೆಂದು ಯಾರುತಾನೇ ತಿಳಿದಿದ್ದರು? ಹೀಗಾಗಲೆಂದು ಯಾರುತಾನೇ ಹಾರೈಸಿದ್ದರು? ಎಲ್ಲವೂ ನಮ್ಮ ದುರದೃಷ್ಟ. ನಾವು ಯವನರ ಕುಟಿಲ ನೀತಿಗೆ ಮೋಸ ಹೋದೆವು. ನಮಗೆ ಸಕಾಲದಲ್ಲಿ ಕುಮಾರರ ಸಹಾಯ ಬಂದಿದ್ದರೆ ಈ ದೆಸೆ ಬರುತ್ತಿರಲಿಲ್ಲ. ಹೊಯ್ಸಳರು ನೆರವಾಗಿದ್ದರೆ ಈ ದುರ್ದೆಸೆ ಬರುತ್ತಿರಲಿಲ್ಲ. ಮುಖ್ಯ ನಾವು ದುರ್ದೈವಿಗಳು. ಏನಾಗಬಾರದೆಂದು ಆಶಿಸಿದ್ದೆವೋ ಅದೇ ಸಂಭವಿಸಿತು! ಈಗ ಇದ್ದುದರಲ್ಲೇ ಒಂದು ಸಮಾಧಾನವೆಂದರೆ ಯವನರು ನಮ್ಮ ರಾಜ್ಯವನ್ನು ಆಕ್ರಮಿಸಿಕೊಳ್ಳಲಿಲ್ಲ—ಕೈಸೆರೆ ಸಿಕ್ಕ ನಮ್ಮನ್ನು ಶಿರಚ್ಛೇದ ಮಾಡಲಿಲ್ಲ. ಇದು ನಮ್ಮ ಪುಣ್ಯ. ಇದಕ್ಕಾಗಿ ನಾವು ಸಮಾಧಾನ ಗೊಳ್ಳಬೇಕಾಗಿದೆ!"

ಈ ಮಾತು ಕೇಳಿ ರಾಮದೇವರಾಯನು ತಿರಸ್ಕಾರದಿಂದ ನುಡಿದನು "ಮುಮ್ಮಡಿಸಿಂಗರೇ, ಇಷ್ಟೆಲ್ಲ ಪರಾಭವ, ಅಪಮಾನಗಳು ಆದ ಮೇಲೆ ನಾವು ಏಕೆತಾನೇ ಬದುಕಿರಬೇಕಾಗಿತ್ತು? ಇಂತಹ ಹೇಡಿ ಬಾಳ್ವೆಗಿಂತ ಸಾವು ಲೇಸು. ಸಮಸ್ತವನ್ನು ಕಳೆದುಕೊಂಡ ದರಿದ್ರರಂತೆ ಇರುವುದಕ್ಕಿಂತಲೂ ಮರಣ ಹೊಂದಿದ್ದರೆ ಒಳಿತಾಗುತ್ತಿತ್ತು. ಎಲ್ಲವನ್ನೂ ಯವನರಿಗೆ ಸೂರೆಗೊಟ್ಟು ಈ ದೇಹಧರಿಸಿದ್ದರೆ ಬಂದ ಲಾಭವೇನು? ನಾವು ನಿರ್ಲಜ್ಜರಾಗಿರುವುದರಿಂದ ಬದುಕಿದ್ದೇವೆ, ಅಷ್ಟೇ!"

"ಹಾಗೆಂದುಕೊಂಡು ನಾವು ಆತ್ಮಹತ್ಯ ಮಾಡಿಕೊಳ್ಳಲು ಸಾಧ್ಯವೆ ಪ್ರಭು? ಒಂದೊಂದನ್ನು ಧೈರ್ಯವಾಗಿ ಎದುರಿಸಬೇಕು—ಇದೇ ಬದುಕುವ ಸ್ವರೂಪ ಜೀವನವೆನ್ನುವುದು ಹೋರಾಟವೇ ಹೊರತು—ಎಲ್ಲವೂ ನಮ್ಮ ಇಚ್ಛೆಯಂತೆ ನಡೆಯುವುದಿಲ್ಲ—ಪ್ರಜ್ಞರಾದ ತಮಗೆ ಇದನ್ನೆಲ್ಲಾ ತಿಳಿಸಿಕೊಡಬೇಕೆ?"

"ಇದಕ್ಕೆಲ್ಲ ನೀವೇ ಕಾರಣರು. ನಿಮ್ಮಿಂದಲೇ ಇಷ್ಟೆಲ್ಲಾ ಅನರ್ಥ ಪರಂಪರೆಗಳಾದುದು. ಈಗ ಸಮಾಧಾನ ಮಾಡಲು ಬರುತ್ತಿದ್ದೀರಲ್ಲಾ?"

"ಪ್ರಭು? ನಾನು ಎಂದೂ ತಮಗೆ ದ್ರೋಹ ಬಗೆಯಲಿಲ್ಲ—ನನ್ನಿಂದ ದ್ರೋಹವಾಗಿದ್ದರೆ ಈ ಖಡ್ಗದಿಂದ ಈಗಲೇ ಸೀಳಿಬಿಡಿ—ಬೇಡವೆನ್ನುವುದಿಲ್ಲ" ಎಂದು ಹೇಳಿ ಸೊಂಟದಲ್ಲಿದ್ದ ಖಡ್ಗವನ್ನು ದೊರೆ ರಾಮದೇವರಾಯನ ಮುಂದೆ ನೀಡಿದನು.

"ನೀವು ನಮಗೆ ದ್ರೋಹ ಬಗೆಯಲಿಲ್ಲ. ಆದರೆ ನಿಮ್ಮ ಸಲಹೆಯಂತೆ ನಡೆದುದರಿಂದಲೇ ಇಷ್ಟೆಲ್ಲ ಹಗರಣ ಉಂಟಾದುದು. ನಿಮ್ಮ ಸಲಹೆಯಂತೆ ಸಾವಿರ ಉಪ್ಪಿನ ಮೂಟೆಗಳನ್ನು ಧಾನ್ಯದ ಮೂಟೆಗಳೆಂದು ಭಾವಿಸಿ, ಮೇಲು ಕೋಟೆಯ ಉಗ್ರಾಣಕ್ಕೆ ಸೇರಿಸಿದೆವು. ನಿಮ್ಮ ಮಾತು ಕೇಳಿಕೊಂಡು ಶತ್ರುಗಳನ್ನು ಧೈರ್ಯವಾಗಿ ಎದುರಿಸಿ ಹೋರಾಡಿ, ಮಡಿಯುವುದು ಬಿಟ್ಟು ಜೀವಗಳ್ಳನಂತೆ ಮೇಲು ದುರ್ಗದಲ್ಲಿ ತಲೆ ಮರೆಸಿಕೊಂಡೆ. ನಿಮ್ಮ ಸಲಹೆಯಂತೆ ನಡೆದುದರಿಂದಲೇ ಕೇವಲ ಐವತ್ತು ಮಣ ಬಂಗಾರ ಪಡೆದು ಹಿಂದಿರುಗಲಿದ್ದ ಯವನರ ಮೇಲೆ ಕಾಲ್ಕೆರೆದು ಯುದ್ಧ ಹೂಡಿ ನನ್ನ ರಾಜ್ಯಕೋಶಗಳನ್ನು ಅವರಿಗೆ ಸೂರೆ ಕೊಟ್ಟೆವು. ಈಗ ಪ್ರಾಣ ಉಳಿಯಿತೆಂದು ಹರ್ಷಿಸಬೇಕೆಂದು ಸೂಸಿ ಹೇಳಲುಬರುತ್ತಿದ್ದಿರಾ ?"

"ಪ್ರಭು, ಹೀಗೆ ಆಗುವುದೆಂದು ಯಾರು ನಿರೀಕ್ಷಿಸಿದ್ದರು ? ಇದರಲ್ಲಿ ನನ್ನ ಯಾವುದೇ ತಪ್ಪು ಇಲ್ಲ. ಧಾನ್ಯದ ಮೂಟೆಯನ್ನು ಪರೀಕ್ಷಿಸಿ ಉಗ್ರಾಣಕ್ಕೆ ತೆಗೆದು ಕೊಳ್ಳಬೇಕಾಗಿತ್ತು, ದಿಟ. ಈ ಕೆಲಸವನ್ನು ಯುದ್ಧ ಕಾಲದಲ್ಲಿ ನಾನೇ ನಿಂತು ಮಾಡಲಾಗದೆ ಅನ್ಯರಿಗೆ ವಹಿಸಿದೆ. ಇದೇ ನನ್ನ ಅಪರಾಧ. ಉಳಿದ ಅಪರಾಧಗಳೂ ಇಂತಹವೇ. ನನ ಸಲಹೆಯನ್ನು ಸ್ವೀಕರಿಸುವುದೂ ಬಿಡುವುದೂ ತಮ್ಮ ಚಿತ್ತಕ್ಕೆ ಸೇರಿತ್ತು. ನಿಮಗೆ ನನ್ನ ಸಲಹೆ ಅಸೂಕ್ತವಾಗಿದ್ದರೆ ಆಗಲೇ ತಿರಸ್ಕರಿಸ ಬಹುದಿತ್ತು ಇದರಲ್ಲಿ ಕಡ್ಡಾಯವಿರಲಿಲ್ಲ. ಆದರೆ ಎಲ್ಲ ಆದ ಮೇಲೆ ಈ ಬಗ್ಗೆ ನನ್ನನ್ನು ಹೊಣೆಗಾರನನ್ನಾಗಿ ಮಾಡಿದರೆ ಆತ್ಮವೂ ಒಪ್ಪುವುದಿಲ್ಲ—ದೇವರೂ ಒಪ್ಪುವುದಿಲ್ಲ."

ಎಂದು ನಿಷ್ಠುರವಾಗಿಯೇ ಹೇಳಿದ ಮುಮ್ಮಡಿಸಿಂಗ. "ಮುಮ್ಮಡಿಸಿಂಗರೇ, ನಿಮ್ಮಿಂದ ಇಂತಹ ಮಾತನ್ನು ಕೇಳಬೇಕಾದುದಕ್ಕೆ ವಿಷಾದಿಸುತ್ತೇನೆ. ದಿಕ್ಕಿಲ್ಲದೇ ಅಲೆಯುತ್ತಿದ್ದ ನಿಮಗೆ ನಾನು ಸಹಾಯ ಮಾಡಿದೆ. ಆಶ್ರಯ ನೀಡಿದೆ ಆದರೆ ನೀವು ನನ್ನನ್ನು ಈ ರೀತಿಯಲ್ಲಿ ಆತ್ಮ ಗೌರವಕ್ಕೆ ಪೆಟ್ಟು ಕೊಡುವ ರೀತಿಯಲ್ಲಿ ಧಿಕ್ಕರಿಸಿ ಮಾತನಾಡುವಿರೆಂದು ನಾನು ತಿಳಿದಿರಲಿಲ್ಲ ! ನಿಮ್ಮ ವಿಷಯದಲ್ಲಿ ನನಗೆ ಸೋದರ ವಾತ್ಯಲ್ಯವಿತ್ತು—ನಿಮ್ಮನ್ನು ನನ್ನ ಒಡಹುಟ್ಟಿದವನೆಂದು ಬಗೆದೆ. ನಿಮ್ಮ ಸಲುವಾಗಿ ಇತರ ಸಾಮಂತರ ದ್ವೇಷವನ್ನು ಕಟ್ಟಿಕೊಂಡೆ—ಹೀಗಿದ್ದ ನೀವು ನನ್ನ ಅಸಹಾಯ ಸ್ಥಿತಿಯನ್ನು ನೆನೆದು ಅಪಮಾನ ಮಾಡುವಿರೆಂದು ನಂಬಿರಲಿಲ್ಲ. ನಾನು ತಮ್ಮನ್ನು ನಂಬಿ

ದುದಕ್ಕೆ ದೇವರು ನನಗೆ ಸರಿಯಾದ ಶಿಕ್ಷೆ ವಿಧಿಸಿದ! ಇದುವರೆಗೆ ತಮ್ಮಿಂದ ಆದ ಉಪಕಾರ ಸಾಕು. ತಾವು ಇನ್ನು ದಯಮಾಡಿಸಬಹುದು!" ಎಂದು ಹೇಳಿ ಅಲ್ಲಿಂದ ಎದ್ದು ಹೊರಟುಹೋದ.

ರಾಮದೇವರಾಯನ ಈ ವರ್ತನೆಯಿಂದ ಸ್ವಾಭಿಮಾನಿಯಾದ ಮುಮ್ಮಡಿ ಸಿಂಗನಿಗೆ ಮರ್ಮಘಾತವಾಯಿತು. ಅವನ ಮಾತು ತಿರಸ್ಕಾರ ತುಂಬಿದ ನಡವಳಿಕೆ ಅವನ ಆತ್ಮಗೌರವಕ್ಕೆ ಬರೆ ಇಟ್ಟುವು. ಇದುವರೆಗೇ ರಾಮದೇವರಾಯನನ್ನು ತನ್ನನ್ನು ಉದ್ಧಾರ ಮಾಡಿದ ದೈವವೆಂದು ಮುಮ್ಮಡಿಸಿಂಗನು ತಿಳಿದಿದ್ದನು. ಅದರಂತೆಯೇ ಅವನನ್ನು ತ್ರಿಕರಣ ಪೂರ್ವಕವಾಗಿ ಸೇವಿಸಿದ್ದನು. ಇಷ್ಟು ದೀರ್ಘ ಕಾಲ ಅನನ್ಯ ಭಕ್ತಿ ಗೌರವಗಳಿಂದ ಸೇವಿಸಿದ ದೊರೆಯಿಂದ ಕಡೆಗೆ ಇಂತಹ ಮಾತುಗಳನ್ನು ಕೇಳಬೇಕಾದುದಕ್ಕೆ ಅವನಿಗೆ ತುಂಬಾ ವ್ಯಥೆಯಾಯಿತು.

ಎಷ್ಟೇ ಆಗಲಿ, ರಾಮದೇವರಾಯನು ದಣಿ ತನಗೆ ದೊರೆ. ಅವನನ್ನು ಪ್ರತಿಭಟಿಸಿ ಮಾತನಾಡುವಂತೆ ಇಲ್ಲ. ತನಗೆ ಅನ್ಯಾಯವಾದರೂ ಸರಿ, ತನ್ನ ಆತ್ಮ ಗೌರವಕ್ಕೆ ಅವಮಾನವಾದರೂ ಸರಿ, ತಾನು ಅವನನ್ನು ಅದೇ ಧಾಟಿಯಲ್ಲಿ ಪ್ರತೀಕಾರ ಬಗೆಯ ಬಾರದೆಂಬ ವಿವೇಕ ಅವನಲ್ಲೂ ಮರೆಯಾಗಲಿಲ್ಲ. ಅವನು ತನ್ನ ಅಪಮಾನವನ್ನು ನುಂಗಿಕೊಂಡನು. ಸಖ್ಯಾ ಸೆಡವುಗಳನ್ನು ಸ್ಥೈರಣೆಯಿಂದ ತಡೆದುಕೊಂಡನು, ತನ್ನ ನಿವಾಸಕ್ಕೆ ಬಂದು, ತನ್ನ ಪ್ರಿಯ ಪತ್ನಿಯಾದ ಮಂಚಲೆಯನ್ನು ಕರೆದು ಹೀಗೆ ಹೇಳಿದನು.

"ಮಂಚಲೆ, ಇಂದಿಗೆ ಪ್ರಭುಗಳ ಅನ್ನದಋಣ ತೀರಿತು" ಇದನ್ನು ಕೇಳಿ ಚಕಿತಳಾದ ಮಂಚಲೆ ಆಶ್ಚರ್ಯದಿಂದ ಕೇಳಿದಳು.

"ಅಂತಹ ಘಟನೆ ಏನಾಯಿತು ಸ್ವಾಮಿ!"

"ಅದುದೇ? ಇದನ್ನು ಯಾವ ನಾಲಿಗೆಯಲ್ಲಿ ಹೇಳಲಿ! ಬೇಡ. ಪ್ರಭುಗಳನ್ನು ನಿಂದಿಸಿ, ಅನ್ನ ವಿಟ್ಟದಣಿಗೆ ದ್ರೋಹ ಬಗೆಯುವುದು ಬೇಡ. ನಮಗೆ ಪ್ರಭುಗಳ ಋಣ ಇಂದಿಗೆ ತೀರಿತು. ಪ್ರಭುಗಳ ಸೇವೆಯ ಭಾಗ್ಯ ಇಂದಿಗೆ ಹರಿಯಿತು. ನಾಳೆ ಬೆಳಗಾಗುವುದರೊಳಗಾಗಿ ನಾವು ರಾಜಧಾನಿಯನ್ನು ಬಿಡಬೇಕೆಂದು ಮನಸ್ಸು ಚಡಪಡಿಸುತ್ತಿದೆ. ಆದರೆ ನಾವು ಇದುವರೆಗೆ ಪ್ರಭುಗಳ ಉಪ್ಪುಂಡುದಕ್ಕೆ ಪ್ರತಿಯಾಗಿ ಅವರಿಗೆ ನಮ್ಮ ಅಂತ್ಯ ಸೇವೆ ಸಲ್ಲಿಸದೆ ಹೋಗಬಾರದೆಂದು ನಿಶ್ಚಯಿಸಿದ್ದೇನೆ. ಒಂದು ವಿಷಯ ಸ್ಪಷ್ಟ. ನಮಗೂ ದೇವಗಿರಿಯ

ನೀರಿಗೂ ಋಣ ಕಡಿದಿದೆ. ನಾವು ಯಾವ ಗಳಿಗೆಯಲ್ಲಾದರೂ ದೇವಗಿರಿಯ ಯನ್ನು ಬಿಟ್ಟು ಹೊರಡಬೇಕಾಗುತ್ತದೆ. ನಮ್ಮ ದೂರವಾಡಿಯನ್ನು ಬಿಟ್ಟು ಹೋಗಬೇಕಾಗಿದೆ. ಆದುದರಿಂದ ನೀನು ಇಂದಿನಿಂದಲೇ ಪ್ರಯಾಣಕ್ಕೆ-ಕಷ್ಟ ಕಾರ್ಪಣ್ಯಗಳ ಬದುಕಿಗೆ ಸಿದ್ಧಳಾಗು. ನಾನು ಇಂದೇ ದೂರವಾಡಿಗೆ ಹೋಗಿಬರುತ್ತೇನೆ.

"ತಾವು ಈ ಅಪರಾತ್ರಿಯಲ್ಲಿ ದೂರವಾಡಿಗೆ ಪ್ರಯಾಣ ಬೆಳೆಸುತ್ತೀರಾ? ಕಾರ್ಯಗೌರವ ಅಂತಹದೆ?"

"ಹೌದು. ನಾಳೆ ಸಂಜೆಯ ಒಳಗೆ ನಾನು ದೂರವಾಡಿಯಿಂದ ಹಿಂದಿರುಗಿ ಬರಬೇಕಾಗಿದೆ. ಈಗಲೇ ಹೊರಡಬೇಕಾಗಿದೆ!"

"ಇಷ್ಟು ಆತುರದ ಪ್ರಯಾಣಕ್ಕೆ ಕಾರಣ ತಿಳಿಯಬಹುದೆ? ನನ್ನದು ಅಧಿಕ ಪ್ರಸಂಗತನವಾದರೆ ಪ್ರಭುಗಳು ಕ್ಷಮಿಸಬೇಕು!"

"ಮಂಚಲೇ, ನನ್ನ ಕಷ್ಟ ಸುಖಗಳೆಲ್ಲದರಲ್ಲೂ ಸಮಭಾಗಿನಿಯಾದ ನಿನ್ನಲ್ಲಿ ಮರೆಮಾಚುವುದೇನು? ನಾನು ಇಂದು ದೂರ ವಾಡಿಗೆ ಹೋಗುತ್ತಿರುವುದು ಅಲ್ಲಿ ನಾನು ಗೋಪ್ಯವಾಗಿ ಇರಿಸಿರುವ ನಿಧಿಯನ್ನು ತಂದು ಪ್ರಭುಗಳಿಗೆ ಒಪ್ಪಿಸಲು. ಅವರು ಮಾಡಿರುವ ಉಪಕಾರಕ್ಕೆ ಪ್ರತ್ಯುಪಕಾರವನ್ನು ಹೀಗೆ ಸ್ಮರಿಸಬೇಕೆಂದಿದ್ದೇನೆ. ಈಗ ತಮ್ಮ ಭಂಡಾರ ಬರಿದಾಗಿರುವುದರಿಂದ ದೊರೆಗಳು ಕಂಗೆಟ್ಟಿದ್ದಾರೆ. ಅವರು ಅನ್ನ ನೀರುಗಳನ್ನು ಬಿಟ್ಟು ಇದೇ ಕೊರಗಿನಿಂದ ಚಿಂತಿಸುತ್ತಿದ್ದಾರೆ. ನನ್ನ ಮಾತು ಕೇಳಿಕೊಂಡು ಅವರು ಇಷ್ಟೆಲ್ಲ ವಿಪತ್ಪರಂಪರೆಯನ್ನು ಅನುಭವಿಸಬೇಕಾಯಿತಂತೆ. ಎಂದಮೇಲೆ ನಾನು ಈ ಸಮಯದಲ್ಲಿ ನನ್ನಿಂದ ಪ್ರಭುಗಳಿಗೆ ಆಗಿರುವ ನಷ್ಟವನ್ನು ತುಂಬಿಕೊಡುವುದು ನನ್ನ ಆದ್ಯ ಕರ್ತವ್ಯವಾಗಿದೆ, ಮಾತ್ರವಲ್ಲ ಧರ್ಮವೂ ಆಗಿದೆ. ಏಕೆಂದರೆ, ಅವರ ರಾಜ್ಯದಲ್ಲಿ ದೊರೆತ ನಿಧಿಗೆ ಅವರೇ ಒಡೆಯರು. ಈಗ ಅವರ ನಿಧಿಯನ್ನು ಅವರಿಗೆ ಹಿಂದಿರುಗಿಸುತ್ತಿದ್ದೇನೆ ಅಷ್ಟೇ! ಇನ್ನಾದರೂ ಅವರಿಗೆ ಮುಮ್ಮಡಿಸಿಂಗನು ದ್ರೋಹಿಯಲ್ಲ ಎಂಬುದು ವೇದ್ಯವಾಗಲಿ!".

"ಏನು ಆಪದ್ಧನವಾಗಿ ಇರಿಸಿರುವ ಕೊಪ್ಪರಿಗೆ ಹಣವನ್ನು ದೊರೆಗಳಿಗೆ ನೀವಾಗಿ ನೀವು ತಂದೊಪ್ಪಿಸಬೇಕೆಂದಿದ್ದೀರಾ?"

"ಹೌದು!"

" ಈ ಬಗ್ಗೆ ಚನ್ನಾಗಿ ಆಲೋಚಿಸಿದ್ದೀರಾ ?"

" ಚನ್ನಾಗಿಯೇ ಆಲೋಚಿಸಿ, ಈ ನಿರ್ಧಾರ ಕೈಗೊಂಡಿದ್ದೇನೆ !"

" ನಮಗಿರುವ ಸಂಪತ್ತನ್ನು ದೊರೆಗಳಿಗೆ ಒಪ್ಪಿಸಿ, ದೇಶಾಂತರ ಹೊರಟರೆ, ನಮಗೆ ಯಾರು ದಿಕ್ಕು ?"

" ಇದುವರೆಗೆ ಯಾರು ದಿಕ್ಕಾಗಿದ್ದ ಆ ಕಂಪಿಲನಾಥನೇ ದಿಕ್ಕು. ಈ ಬಗ್ಗೆ ನೀನು ಏಕೆ ಚಿಂತಿ: ?? ಅವನು ನಂಬಿದವರನ್ನು ಎಂದಿಗೂ ಕೈಬಿಡುವುದಿಲ್ಲ "

" ನನ್ನ ಚಿಂತೆ ಅದಲ್ಲ—ನಾವು ಇದುವರೆಗೆ ರಾಜ್ಯಕೋಶಗಳನ್ನು ಪಡೆಯುದೆ ಇದ್ದರೂ-ಯಾವ ದೊರೆಗಳಿಗೂ ಕಡಿಮೆ ಇಲ್ಲದಂತೆ ಬಾಳಿದೆವು. ಇನ್ನೊಬ್ಬರ ಬಳಿ ದೇಹಿ ಎಂದು ಕೇಳದಂತೆ ನಾವು ಬಾಳಿ ಬದುಕಿದೆವು. ಇನ್ನು ಮೇಲೆ ನಾವು ಬರಿಗೈಯಲ್ಲಿ ಯಾರನ್ನು ಕೇಳೋಣ ? ಯಾರನ್ನು ಬೇಡೋಣ ! ನಾವು ಇಲ್ಲಿಂದ ಹೊರಟರೆ-ಮತ್ತೆ ಮೊದಲಿನ ದೇಸಿಗತನವೇ ನಮ್ಮದಾಗುತ್ತದೆ. ನಾವು ತೋರಣಕ್ಕೆ ಹಿಂತಿರುಗಿ ಅದನ್ನು ಮಾರಸಿಂಗನಿಂದ ಪಡೆಯುವಂತೆ ಇಲ್ಲ-ಏಕೆಂದರೆ ನೀವಾಗಿ ನೀವು ಅದನ್ನು ಕಾಣಿಕೆಯಾಗಿ ಕೊಟ್ಟಿದ್ದೀರಿ ! ಈಗ ನಾವು ಇರುವ ಸ್ಥಿತಿಯಲ್ಲಿ ಅವನ ಮುಂದೆ ಯಾಚಕನಂತೆ ನಿಲ್ಲುವುದು ಸ್ವಾಭಿಮಾನಕ್ಕೆ ಒಪ್ಪುವುದಿಲ್ಲ-ಅಲ್ಲದೆ ಅರಸುಕುವರನಂತೆ ಕಷ್ಟದ ಸೋಂಕು ಇಲ್ಲದೆ ಬೆಳೆದಿರುವ ಹಾಲುಗಲ್ಲದ ಹಸುಳೆ ಕಂಪಿಲನಿಗೆ ಹತ್ತು ವರ್ಷ ಕೂಡ ತುಂಬಿಲ್ಲ. ಈಗಲೇ ಆ ಮಗುವಿನ ಪಾಲಿಗೆ ಜಗತ್ತಿನ ಕಷ್ಟ ಕಾರ್ಪಣ್ಯಗಳ ಬವಣೆಯೆ ?"

" ಮಂಚಲೆ, ನೀನು ಹೇಳುವುದೆಲ್ಲವೂ ಯಥಾರ್ಥವಾಗಿದೆ. ಆದರೆ, ಈ ಸಮಯದಲ್ಲಿ ಈ ದಾರಿ ಹೊರತು ಬೇರೆ ಮಾರ್ಗ ನಮಗೆ ಇಲ್ಲ. ಏಕೆಂದರೆ, ಪ್ರಭುಗಳ ಬಾಯಲ್ಲಿ ಇಂದು ಬಂದ ಮಾತುಗಳನ್ನು ಕೇಳಿಕೊಂಡು ಇನ್ನು ಅವರ ಸೇವೆಯಲ್ಲಿ ಇರುವುದಕ್ಕಿಂತಲೂ ಸಾವು ಲೇಸು ! ಮುಮ್ಮಡಿ ಸಿಂಗನು ಪ್ರಾಣ ಹೋದರೂ ಆತ್ಮಗೌರವವನ್ನು ಮಾರಿಕೊಂಡು ಬದುಕಲಾರ ! ಇನ್ನು ನಾವು ತೋರಣಕ್ಕೂ ಹೋಗುವಂತೆ ಇಲ್ಲ-ಅಥವ ಹೊಯ್ಸಳ ಇಲ್ಲವೇ ಪಾಂಡ್ಯರ ಬಳಿಗೂ ಹೋಗುವ ಆಸೆ ಇಲ್ಲ-ಸಾಧ್ಯವಾದರೆ, ಈ ಬಾಹು ಬಲದಿಂದ ಹೊಸದೊಂದು ರಾಜ್ಯವನ್ನು ನಿರ್ಮಿಸಬೇಕೆಂದಿದ್ದೇನೆ. ದೈವ ಸಂಕಲ್ಪಿಸಿದರೆ—ಆ ಕಂಪಿಲನಾಥನ ಇಚ್ಛೆ ಇದ್ದರೆ ಇದು ಯಾವ ಮಹಾಸಾಧನೆ ? ಈಗ

ನಾವು ದೊರೆಯ ಕಷ್ಟವನ್ನು ನೋಡಿಯೂ, ಅವರದೇ ಆಗಿರುವ ನಿಧಿ ನಿಕ್ಷೇಪ ಗಳನ್ನು ಅವರಿಗೆ ಒಪ್ಪಿಸದೆ, ಇಲ್ಲಿಂದ ಹಿಂತಿರುಗಿದರೆ, ವಿತ್ತಾಪಹಾರದ ದೋಷ ತಟ್ಟುತ್ತದೆ. ಆದುದರಿಂದ ಪ್ರಭುಗಳ ಸೇವೆಯಲ್ಲಿ ದೊರತದ್ದನ್ನೆಲ್ಲಾ ಅವರಿಗೆ ಒಪ್ಪಿಸಿ ಒಳ್ಳೆಯ ಕೀರ್ತಿಯನ್ನು ಮಾತ್ರ ಹೊತ್ತು ಇಲ್ಲಿಂದ ಹೊರಡೋಣ! ನಮಗೆ ಅದೃಷ್ಟವಿದ್ದರೆ—ನಾಳೆ ಇದಕ್ಕೂ ಹೆಚ್ಚಿನ ನಿಧಿ ಕಾಲ್ತೊಡಕಾಗಿ ಸಿಕ್ಕ ಬಹುದು. ಕುಮಾರ ಕಂಪಿಲನ ಯೋಚನೆಯಿಂದ ನಾವು ಪ್ರಲೋಭಕ್ಕೆ ಬೀಳಬಾರದು. ಆ ಮಗುವಿಗೆ ನಮ್ಮ ಆದರವು ಬಾಳಿನ ಬೆಳಕಾಗಲಿ! ಹಂಗಿನ ಔತಣಕ್ಕಿಂತಲೂ, ಸ್ವಾತಂತ್ರ್ಯದ ಗಂಜಿ ಲೇಸೆಂಬುದನ್ನು ಅವನು ಕಲಿಯಲಿ! ಇಂದಿನಿಂದಲೇ ಅವನು ಕಷ್ಟ ಕಾರ್ಪಣ್ಯಗಳ ಮೂಸೆಯಲ್ಲಿ ಬೆಂದು, ನಾಳಿನ ಮಹತ್ಕಾರ್ಯಕ್ಕೆ ದೇಹ ಮನಸ್ಸುಗಳನ್ನು ಇಂದಿನಿಂದಲೇ ಸಿದ್ಧಗೊಳಿಸಲಿ! ನೀನು ಈ ಬಗ್ಗೆ ಚಿಂತಿಸಬೇಡ! ಇದುವರೆಗೆ ದಾರಿ ತೋರಿದ ಕಂಪಿಲನಾಥನೇ ಮುಂದೆಯೂ ದಾರಿ ತೋರುತ್ತಾನೆ!'' ಎಂದು ಸಮಾಧಾನ ಮಾಡಿದನು.

ಮುಮ್ಮಡಿಸಿಂಗನು ಹೇಳಿದ್ದಂತೆ ಅಂದೇ ದೂರ ವಾಡಿಗೆ ಪ್ರಯಾಣ ಬೆಳೆ ಸಿದನು. ಅವನು ತನ್ನೊಡನೆ ನಂಬುಗೆಯ ಮಿತಪರಿವಾರವನ್ನು ತೆಗೆದುಕೊಂಡು ಹೋಗಿ, ದೂರ ವಾಡಿಯ ದುರ್ಗದಲ್ಲಿ ತಾನು ಆಪದ್ಧನವಾಗಿ ಕಾಯ್ದಿರಿಸಿದ್ದ, ಹಣವನ್ನೆಲ್ಲಾ ಒಂಟೆಗಳ ಮೇಲೆ ಹೇರಿಸಿಕೊಂಡು ಬಂದು ದೊರೆ ರಾಮದೇವ ನಿಗೆ ಒಪ್ಪಿಸಿದನು.

ಈ ವೃತ್ತಾಂತವನ್ನೆಲ್ಲಾ ಕೇಳಿ ರಾಮದೇವರಾಯನು ಚಕಿತನಾದನು. "ಮುಮ್ಮಡಿಸಿಂಗರೇ, ಇದೆಲ್ಲಾ ಏನು?" ಎಂದು ಉದ್ಗಾರ ತೆಗೆದನು.

"ಪ್ರಭು, ಇದು ಸೇವಕನ ಅಲ್ಪ ಕಾಣಿಕೆ. ಇಲ್ಲಿ ನೂರು ಹೇರುಗಳಷ್ಟು ಚಿನ್ನದ ನಾಣ್ಯಗಳು ಇವೆ. ಅವನ್ನು ತಾವು ಪರೀಕ್ಷಿಸಿ ರಾಜಭಂಡಾರಕ್ಕೆ ಸೇರಿ ಸಿಕೊಳ್ಳುವ ಕೃಪೆಮಾಡಬೇಕು!"

"ಇದೆಲ್ಲಾ ಏಕೆ?"

"ಪ್ರಭು, ತಾವು ನನ್ನ ಮಾತು ಕೇಳಿಕೊಂಡು ಯವನರಿಗೆ ನಿಮ್ಮ ರಾಜ ಭಂಡಾರವನ್ನೆಲ್ಲಾ ಸೂರೆ ಕೊಟ್ಟಿದ್ದೀರಿ. ಅದಕ್ಕೆ ಪರಿಹಾರವಾಗಿ ಈ ಚಿನ್ನ ವನ್ನು ಸ್ವೀಕರಿಸಬೇಕು.?

"ಇಷ್ಟೊಂದು ಹಣ ತಮಗೆ ಎಲ್ಲಿತ್ತು?"

"ಇದು ತಮ್ಮದೇ ಆದ ಹಣ ಪ್ರಭು! ತಮ್ಮ ರಾಜ್ಯದ ಮೇಲೆ ಯಾದವರಲ್ಲಿ ನನಗೆ ದೊರೆತ ನಿಧಿ. ಇದುವರೆಗೆ ಇದನ್ನು ತಮ್ಮ ಪರ ಕಾಯ್ದಿರಿಸಿದ್ದೆ. ಇಂದು ತಮ್ಮ ಕಷ್ಟಕಾಲದಲ್ಲಿ, ತಮಗೆ ತಂದೊಪ್ಪಿಸುತ್ತಿದ್ದೇನೆ. ಇದನ್ನು ತಾವು ಸಂತೋಷದಿಂದ ಸ್ವೀಕರಿಸಬೇಕು! ಇದು ಅಲ್ಪವಾದ ಕಾಣಿಕೆ ನಾಬಲ್ಲೆ! ಇದೇ ಪಾಮರನ ಕಡೆಯ ಸೇವೆ!"

"ಅಂದರೆ?"

"ನಾನು ನಾಳೆ ಮುಂಜಾನೆ ದೇವಗಿರಿಯಿಂದ ಪತ್ನೀಪುತ್ರರೊಡನೆ ಹೊರಡಬೇಕೆಂದು ನಿಶ್ಚಯಿಸಿದ್ದೇನೆ!"

"ಎಲ್ಲಿಗೆ?"

"ವಿಧಿ ಸೆಳೆದತ್ತ!"

"ಏಕೆ? ನನ್ನಿಂದ ತಮಗೆ ಏನಾದರೂ ಅಪಚಾರವಾಯಿತೆ? ಆಗಿದ್ದರೆ ಕ್ಷಮಿಸಿ!"

"ಪ್ರಭು, ಅನ್ನವಿಟ್ಟು ಕಾಪಾಡಿದ ತಮ್ಮಿಂದ ಅಪಚಾರವೆ? ಎಂದಿಗೂ ಇಲ್ಲ. ತಾವು ದೀನನಾಗಿ ಬಂದ ನನ್ನನ್ನು ಉದ್ಧರಿಸಿದಿರಿ! ನಿಲ್ಲಲು ನೆಲೆ ತೋರಿದಿರಿ! ತಮ್ಮ ಉಪಕಾರವನ್ನು ನನ್ನ ಜನ್ಮದಲ್ಲಿ ನಾನು ಮರೆಯುವಂತೆ ಇಲ್ಲ—"

"ಹಾಗಾದರೆ ನೀವು ಹೊರಡುವ ಮಾತನ್ನು ಏಕೆ ತೆಗೆಯುತ್ತೀರಿ?"

"ಪ್ರಭು, ನನ್ನಿಂದ ಅಪರಾಧವಾಗಿದ್ದರೆ ಕ್ಷಮಿಸಬೇಕು! ನನ್ನ ದೇವಗಿರಿಯ ನೀರಿನ ಋಣ ತೀರಿತು ಪ್ರಭು, ಅಂತಲೇ ಇಲ್ಲಿಂದ ಕಾಲ್ತೆಗೆಯಬೇಕೆಂದಿದ್ದೇನೆ?"

"ನಿಮ್ಮ ಮಾತು ನನಗೆ ಅರ್ಥವಾಗುತ್ತಿಲ್ಲ!"

"ಪ್ರಭು, ನಾನು ಇದುವರೆಗೆ ತಮ್ಮ ಪಾದಸೇವೆಯನ್ನು ನಿಷ್ಠೆಯಿಂದ ಮಾಡಿದೆ! ಈಗಲೂ ತಮಗೆ ನಿಷ್ಠೆಯಿಂದ ಇರುವೆ!"

"ನಿಮ್ಮ ನಿಷ್ಠೆ ಎಂತಹದೆಂಬುದಕ್ಕೆ ನಿಮ್ಮ ಈ ಸಹಾಯವೇ ಸಾಕ್ಷಿ"

"ಅಂತಲೇ ನಾನು ಇಲ್ಲಿಂದ ಹೊರಬೀಳಬೇಕೆಂದಿದ್ದೇನೆ. ನನ್ನ ವಿಷಯದಲ್ಲಿ ಈ ಭಾವನೆ ಇರುವಾಗಲೇ ಇಲ್ಲಿಂದ ಹೊರಡುವುದರಲ್ಲಿ ನನ್ನ ಆತ್ಮ ಕಲ್ಯಾಣವಿದೆ!"

"ಮುಮ್ಮಡಿಸಿಂಗರೇ, ಆ ದಿನ ನಾನು ನಿಮ್ಮ ವಿಷಯದಲ್ಲಿ ಏನು ಹೇಳಿದೆನೋ ತಿಳಿಯದು! ದುಃಖದ ಭರದಲ್ಲಿ—ನಾನು ದುಡುಕಿ ನಿಮ್ಮ ಬಗ್ಗೆ ಹಗುರವಾಗಿ ಮಾತನಾಡಿದ್ದರೆ ಕ್ಷಮಿಸಬೇಕು! ನಿಮ್ಮನ್ನು ಅಪಮಾನಗೊಳಿಸಬೇಕೆಂದಾಗಲೀ, ತಮ್ಮ ವಿಷಯದಲ್ಲಿ ಶಂಕೆಯಿಂದಾಗಲೀ, ಆ ಮಾತುಗಳನ್ನು ಹೇಳಿಲ್ಲ—ನನ್ನ ಮಾತನ್ನು ನಂಬಿ. ನನ್ನಿಂದ ತಿಳಿಯದೆ ಆಗಿರುವ ಅಪಚಾರಕ್ಕೆ ಕ್ಷಮಿಸಿ!"

"ತಮ್ಮ ಅಭಿಮಾನಕ್ಕೆ ನಾನು ಹೇಗೆ ಋಣಿಯಾಗಿರಬೇಕೋ ತಿಳಿಯದಾಗಿದೆ. ಸದ್ಯದ ಪ್ರಸಂಗದಲ್ಲಿ ನಾನು ತಮಗೆ ನಿರಾಶೆಯುಂಟುಮಾಡುತ್ತಿದ್ದರೆ ಕ್ಷಮಿಸಿ. ನಾನು ಇಲ್ಲಿಂದ ಹೊರಡಲು ನಿಶ್ಚಯಿಸಿದ್ದೇನೆ! ಈ ಬಗ್ಗೆ ಸಿದ್ಧತೆಗಳನ್ನು ಮಾಡಿಕೊಂಡೂ ಇದ್ದೇನೆ. ನಾನು ಇಲ್ಲಿಗೆ ಹೇಗೆ ಬಂದೆನೋ ಹಾಗೇ ಇಲ್ಲಿಂದ ಹೋಗುತ್ತಿದ್ದೇನೆ. ಮುಮ್ಮಡಿಸಿಂಗನು ನಂಬಿದ ದೊರೆಗೆ ದ್ರೋಹ ಬಗೆಯಲಿಲ್ಲ ಎಂಬ ಕೀರ್ತಿಯನ್ನು ಜತೆಯಲ್ಲಿ ತೆಗೆದುಕೊಂಡುಹೋಗುತ್ತಿದ್ದೇನೆ. ತಮ್ಮ ಸೇವೆಯ ಚಿರಸ್ಮರಣೆಗಳನ್ನು ಜತೆಯಲ್ಲಿ ತೆಗೆದುಕೊಂಡುಹೋಗುತ್ತಿದ್ದೇನೆ ನನಗೆ ಇಷ್ಟೇ ಸಾಕು!"

ಈ ಮಾತು ಹೇಳುತ್ತಿರುವಂತೆ ಧ್ವನಿ ಗದ್ಗದಿಸಿತು.

ಇದನ್ನು ಕೇಳಿ ರಾಮದೇವರಾಯನ ಕಣ್ಣಿನಲ್ಲಿ ನೀರು ಊರಿತು. ಅವನು ಬಿಕ್ಕಳಿಸುತ್ತಾ ಹೇಳಿದ.

"ಮುಮ್ಮಡಿಸಿಂಗರೇ, ನೀವು ಕಷ್ಟಸುಖದಲ್ಲಿ ಒಂದಾಗಿ-ಬೆರೆತಿದ್ದು ಈ ಸಮಯದಲ್ಲಿ-ತಮ್ಮ ಸೇವೆ ಇನ್ನೂ ಹೆಚ್ಚಾಗಿ ಅಗತ್ಯವಾಗಿರುವಾಗ ನಮ್ಮನ್ನು ಕೈಬಿಡುತ್ತೀರಾ?" ಎಂದನು.

"ಪ್ರಭು, ಈ ಮುಮ್ಮಡಿಸಿಂಗನು ಎಲ್ಲೇ ಇರಲಿ, ಹೇಗೇ ಇರಲಿ ತಮ್ಮ ಕಷ್ಟವನ್ನು ತನ್ನ ಕಷ್ಟವೆಂದು ತಿಳಿದು ತಮಗೆ ನೆರವು ನೀಡಲು ಬರುತ್ತಾನೆ. ತಾವು ಈ ಬಗ್ಗೆ ಚಿಂತಿಸಬಾರದು. ಆದರೆ ಈ ಸಮಯದಲ್ಲಿ ನನ್ನನ್ನು ತಾವು ಇಲ್ಲಿರಲು ಒತ್ತಾಯ ಮಾಡಬಾರದು!"

"ಏಕೆ?"

"ನನ್ನ ಆತ್ಮ ಒಪ್ಪದ ಕೆಲಸವನ್ನು ಮಾಡಿ ಆತ್ಮದ್ರೋಹಿಯಾಗಲಾರೆ!"

"ನಿಮ್ಮ ಆತ್ಮ ಒಪ್ಪದ ಕಾರ್ಯಕ್ಕೆ ನಿಮ್ಮನ್ನು ಪ್ರೇರೇಪಿಸಿ, ನಿಮ್ಮನ್ನು ಧರ್ಮಸಂಕಟಕ್ಕೀಡು ಮಾಡುವುದಿಲ್ಲ. ಆದರೆ ಒಂದು ಮಾತು ಮಾತ್ರ ನಿಜ. ನೀವು ನಮಗೆ ಮಾಡಿರುವ ಸೇವೆ ಅಮೋಘವಾದುದು. ನಿಮ್ಮಂತಹ ನಿಷ್ಠಾವಂತ ಸ್ವಾಮಿನಿಷ್ಠರನ್ನು ಪಡೆಯುವ ಭಾಗ್ಯ ನಮಗೆ ಇಲ್ಲವಾಯಿತು. ತಮಗೆ ಎಲ್ಲಿಗೆ ಹೋಗಬೇಕೆಂದು ಆಸೆ ಇದೆಯೋ ಅಲ್ಲಿಗೆ ಹೋಗಿ. ನಿಮಗೆ ನನ್ನಿಂದ ಯಾವ ಸಹಾಯ ಬೇಕಾದರೂ ನಿಸ್ಸಂಕೋಚದಿಂದ ಪಡೆಯುವ ವಚನ ಕೊಡಬೇಕು. ಮುಂದೆಯೂ ನೀವು ಇಲ್ಲಿಗೆ ಬರಬೇಕೆನಿಸಿದರೆ, ನಿಮ್ಮ ಇಂದಿನ ಪದವಿಯೇ ನಿಮ್ಮನ್ನು ಸ್ವಾಗತಿಸಲು ಕಾದಿರುತ್ತದೆ.

"ಒಂದು ವಿಷಯವನ್ನು ಮಾತ್ರ ಹೇಳಲೇಬೇಕು—ನೀವು ಇಲ್ಲಿ ಇದ್ದಾಗ ನಿಮ್ಮ ನಿಜವಾದ ಯೋಗ್ಯತೆ ತಿಳಿಯದೆಹೋದೆ. ನನ್ನಿಂದ ತಮಗೆ ಆಗಿರುವ ಯಾವುದೇ ಅಪಚಾರವನ್ನು ತಾವು ಉದಾರವಾಗಿ ಕ್ಷಮಿಸಬೇಕು! ಈ ರಾಮದೇವರಾಯನು ಇಂದು ತನ್ನ ಒಬ್ಬ ಆಪ್ತ ಸೇವಕ ಮಾತ್ರವಲ್ಲ–ಒಬ್ಬ ಬಂಧು, ಗೆಳೆಯ, ಹಿತೈಷಿ–ಒಬ್ಬ ಸಹೋದರನನ್ನು ಕಳೆದುಕೊಳ್ಳುತ್ತಿದ್ದಾನೆ–" ಎಂದು ಹೇಳಿ ಕಂಬನಿ ತುಂಬಿದ ಕಣ್ಣೀರನ್ನು ಒರಸಿಕೊಂಡು, ಮುಮ್ಮಡಿಸಿಂಗನನ್ನು ಆಲಿಂಗಿಸಿ, ಅವನನ್ನು ರಾಜೋಚಿತವಾಗಿ ಮರ್ಯಾದೆಯಲ್ಲಿ ಬೀಳ್ಕೊಂಡನು. ಅಲ್ಲಿಂದ ಹೊರಡುವಾಗ ಮುಮ್ಮಡಿಸಿಂಗನ ಕರುಳು ಕಿತ್ತು ಬಂದಂತೆ ಆಗಿತ್ತಾದರೂ–ಅವನು ತನ್ನ ದೃಢ ನಿರ್ಧಾರವನ್ನು ಬಿಡದಷ್ಟು ಕಠೋರವಾಗಿದ್ದನು.

ಅವನು ದೇವಗಿರಿಯನ್ನು ಬಿಡುವ ಸಮಯ ಬಂದಾಗ, ದೊರೆ ರಾಮದೇವರಾಯನು ಕೊಟ್ಟಿದ್ದ ಗಜತುರಗ ವಾಹನಗಳನ್ನೂ, ಇನ್ನಿತರ ಬೆಲೆಬಾಳುವ ವಸ್ತುಗಳನ್ನೂ ಅಲ್ಲೇ ಉಳಿಸಿದನು.

"ಮುಂದೆ ಅವಕಾಶ ದೊರೆತಾಗ, ತೆಗೆದುಕೊಳ್ಳುತ್ತೇನೆ" ಎಂದು ಹೇಳಿ ಪತ್ನೀಪುತ್ರರೊಡನೆ ತಾನು ಹಿಂದೆ ಅಲ್ಲಿಗೆ ಹೇಗೆ ಬಂದಿದ್ದನೋ ಅದೇ ಸ್ಥಿತಿಯಲ್ಲಿ ಅಲ್ಲಿಂದ ಹೊರಟನು.

ಮುಮ್ಮಡಿಸಿಂಗನು ದೇವಗಿರಿಯಿಂದ ಹೊರಬಿದ್ದಾಗ ಜನತೆ ಕಂಬನಿ ದುಂಬಿ ಬೀಳ್ಕೊಟ್ಟರು. ಕೆಲವರು ಇಂತಹ ಸ್ವಾಮಿನಿಷ್ಠ ಸೇವಕನನ್ನು ಕಳೆದು

ಕೊಂಡ ದೊರೆಯನ್ನು ಜರೆದರು. ಮತ್ತೆ ಕೆಲವರು-ದೇವಗಿರಿಯ ಸೌಭಾಗ್ಯ ಲಕ್ಷ್ಮಿಯೇ ಹೋದಮೇಲೆ ಇನ್ನು ಏನು ಉಳಿದಿದೆ ಎಂದುಕೊಂಡರು.

ಮುಮ್ಮಡಿಸಿಂಗನು ದೇವಗಿರಿಯಿಂದ ಹೊರಟವನೇ ನೇರ ರಾಮ ದುರ್ಗಕ್ಕೆ ಬಂದನು. ಅಲ್ಲಿನ ಮಲ್ಲದೇವ ಅರಸನು ಮುಮ್ಮಡಿಸಿಂಗನ ಅತ್ಯಂತ ಪ್ರಿಯ ಸ್ನೇಹಿತನಾಗಿದ್ದನು. ಅವನನ್ನು ನೋಡಿಕೊಂಡು ಮುಂದೆ ಹೋಗ ಬೇಕೆಂದು ರಾಮದುರ್ಗಕ್ಕೆ ಬಂದಿದ್ದನು.

ಅವನು ತನ್ನ ಗೆಳೆಯನ ಬಾಯಿಂದ ನಡೆದ ವೃತ್ತಾಂತವನ್ನೆಲ್ಲಾ ಕೇಳಿ ತಿಳಿದ ಮೇಲೆ ಮುಮ್ಮಡಿಸಿಂಗನಿಗಾಗಿ ಮರುಗಿದನು.

"ಮುಮ್ಮಡಿಸಿಂಗರೇ, ತಾವು ಅಂತಹ ದೊರೆಯ ಆಶ್ರಯವನ್ನು ತಿರಸ್ಕ ರಿಸಿ ಬಂದಿದ್ದೀರಿ ತಮಗೆ ಸಹಾಯ ಮಾಡುವ ಸ್ಥಿತಿಯಲ್ಲಿ ನಾವು ಇಲ್ಲ. ಆದರೂ ನಿಮ್ಮನ್ನು ನೋಡಿದ ಮೇಲೆ, ನಿಮ್ಮ ಪರಿಸ್ಥಿತಿಯನ್ನು ಕೇಳಿದ ಮೇಲೆ ತಮಗೆ ನಮ್ಮಿಂದಾಗುವ ಸಹಾಯ ಮಾಡದೆಹೋದರೇ, ದೇವರು ಒಪ್ಪುವುದಿಲ್ಲ- ಇದನ್ನು ತಾವು ಅನ್ಯಥಾ ಭಾವಿಸಬಾರದು. ಇದು ಕೇವಲ ವಿಶ್ವಾಸದಿಂದ ಕೊಡುತ್ತಿರುವ ಕಾಣಿಕೆ ಎಂದು ತಾವು ಭಾವಿಸಬಾರದು. ತಾವು ಬೇರೆಯಲ್ಲ- ನನ್ನ ಸಹೋದರರು ಬೇರೆಯಲ್ಲ-ನನ್ನ ಸಹೋದರರಿಗೇ ಈ ಸ್ಥಿತಿ ಬಂದಿದ್ದರೆ ನಾನು ಹೇಗೆ ವರ್ತಿಸುತ್ತಿದ್ದೆನೋ ಆ ದೃಷ್ಟಿಯಲ್ಲಿ ನಾನು ನನ್ನ ಕರ್ತವ್ಯ ಪಾಲಿಸುತ್ತಿದ್ದೇನೆ. ನಿಮಗೆ ಆಶ್ರಯ ನೀಡಲು ನಾನು ಅಂತಹ ದೊಡ್ಡ ದೊರೆ ಯಲ್ಲ. ಆದರೆ ನಾನು ತಮ್ಮ ಗೆಳೆಯನೆಂಬುದನ್ನು ಮರೆಯಬಾರದು. ಸ್ನೇಹ ಧರ್ಮದಿಂದ ಈ ಮಾತು ಹೇಳುತ್ತಿದ್ದೇನೆ. ತಾವು ಇಲ್ಲಿಯೇ ಇರಲು ಇಚ್ಛಿಸು ವುದಾದರೆ ತುಂಬಾ ಸಂತೋಷ. ಹಾಗಿಲ್ಲವಾದರೆ ನನ್ನ ರಾಜ್ಯದಲ್ಲಿ ತಾವು ಎಲ್ಲಾದರೂ ಸ್ವತಂತ್ರರಾಗಿ ಇರಬಹುದು. ತಮಗೆ ಎಲ್ಲಿಯಾದರೂ ಸರಿ. ಇಪ್ಪತ್ತು ಗ್ರಾಮಗಳನ್ನು ಕೊಡುತ್ತೇನೆ. ಅವುಗಳನ್ನು ಆಳಿಕೊಂಡು ನೀವು ಸ್ವತಂತ್ರ ದೊರೆಯಾಗಿ ಇರಲು ನನ್ನ ಆಕ್ಷೇಪವಿಲ್ಲ.

"ಮಲ್ಲದೇವ ಅರಸರೇ, ತಮ್ಮ ಮಾತಿಗೆ ಹೇಗೆ ಉತ್ತರ ಹೇಳಬೇಕೋ ತಿಳಿಯದಾಗಿದೆ. ನಿರ್ಗತಿಕನಾಗಿ ಬಂದ ನನಗೆ ತಾವು ದೊಡ್ಡದೊಂದು ಭಾಗ್ಯದ ಬೀಗಮುದ್ರೆಯನ್ನು ಕೊಡುತ್ತಿದ್ದೀರಿ. ನನ್ನಿಂದ ತಮಗೆ ತೊಂದರೆ ಯಾಗದೆ ಇದ್ದರ ನನಗೆ ಹತ್ತು ಗ್ರಾಮಗಳೇ ಸಾಕು! ನಿಮ್ಮ ಉಪಕಾರವನ್ನು

ಸ್ಮರಿಸಿಕೊಂಡು ವೃದ್ಧಾಪ್ಯವನ್ನು ಕಳೆಯುತ್ತೇನೆ. ತಮ್ಮಂತಹ ಗೆಳೆಯರನ್ನು ಪಡೆದುದು ನನ್ನ ಭಾಗ್ಯ'' ಎಂದನು ಮುಮ್ಮಡಿಸಿಂಗ.

ಆದರೂ ಮಲ್ಲದೇವರಸನು ಹನೆಯದುರ್ಗದ ಸುತ್ತಮುತ್ತಿನ ಇಪ್ಪತ್ತು ಗ್ರಾಮಗಳನ್ನು ಮುಮ್ಮಡಿಸಿಂಗನಿಗೆ ಉಂಬಳಿಯಾಗಿ ಕೊಟ್ಟನು. ಅದನ್ನು ಸಂತೋಷದಿಂದ ಸ್ವೀಕರಿಸಿ, ಹನೆಯದುರ್ಗವನ್ನು (ಇಂದಿನ ಬ್ರಹ್ಮಗಿರಿ) ರಾಜಧಾನಿಯಾಗಿ ಮಾಡಿಕೊಂಡು ಮುಮ್ಮಡಿಸಿಂಗನು ನಿಂತನು.

ಮುಮ್ಮಡಿಸಿಂಗನ ಮಾತು ಸುಳ್ಳಾಗಲಿಲ್ಲ—ದೈವ ಕಣ್ಣುಬಿಟ್ಟು ನೋಡಿದಾಗ, ಬಡವ ಶ್ರೀಮಂತನೂ, ಶ್ರೀಮಂತನೂ ನಿರ್ಗತಿಕನೂ ಆಗುವುದು ಎಷ್ಟು ಹೊತ್ತು ?

ಹನಯದುರ್ಗದಲ್ಲಿ ನಿಂತಮೇಲೆ ದಿನದಿನಕ್ಕೂ ಮುಮ್ಮಡಿಸಿಂಗನ ಸ್ಥಿತಿ ಉತ್ತಮಗೊಳ್ಳುತ್ತಾ ಹೋಯಿತು. ಅವನು ಸುತ್ತಮುತ್ತಲಿನ ಪಾಳೆಯಗಾರರನ್ನು ಗೆದ್ದು, ಇಲ್ಲವೇ ಸ್ನೇಹ ಸೌಜನ್ಯಗಳಿಂದ ಒಲಿಸಿಕೊಂಡು, ತನ್ನ ರಾಜ್ಯದ ಸೀಮೆಯನ್ನು ನಾಲ್ದೆಸೆಯಲ್ಲೂ ವಿಸ್ತರಿಸಿದನು. ದಿನದಿನಕ್ಕೂ ಅವನ ಕೀರ್ತಿ ಪ್ರತಿಷ್ಠೆಗಳು ಬೆಳೆಯುತ್ತಾ ಹೋದವು. ಹೀಗೆ ಅವನ ರಾಜ್ಯವು ವಿಸ್ತಾರವಾಗಿ ಬೆಳೆದು-ಕಂಪಿಲರಾಯನು ಪ್ರಾಪ್ತವಯಸ್ಕನಾಗುವ ವೇಳೆಗೆ, ಇಂದಿನ ಚಿತ್ರದುರ್ಗದ ಬಹುಭಾಗವೂ, ಹರಿಹರ, ದಾವಣಗೆರೆ, ಜಗಳೂರು, ಮೊಳಕಾಲ್ಮೂರು, ಬಳ್ಳಾರಿ ಜಿಲ್ಲೆಯ ಕೂಡ್ಲಗಿ, ಸಂಡೂರುಗಳೂ ಹೊಸಪೇಟೆಯೂ ಅವನ ರಾಜ್ಯಕ್ಕೆ ಸೇರಿದ್ದವು. ಅವನ ರಾಜ್ಯಕ್ಕೆ ಪೂರ್ವದಲ್ಲಿ ನೆಲ್ಲೂರು, ಉತ್ತರದಲ್ಲಿ ಕರ್ನೂಲುಗಳು ಮೇರೆಗಳಾಗಿದ್ದವು. ಗುತ್ತಿಯ ಜಗದಾಪಿಗಂಗೇಯನೂ, ಮಲ್ಲದೇವರಸನೂ ಅವನಿಗೆ ಮಿತ್ರರಾಗಿದ್ದರು. ಹೀಗೆ ಮುಮ್ಮಡಿಸಿಂಗನು ತಾನು ಬಿಟ್ಟುಬಂದ ರಾಜ್ಯಕೋಶಗಳನ್ನು ಮತ್ತೆ ಕಂಪಿಲನಾಥನ ದಯದಿಂದ ಪಡೆದನು.

# ೧೧

ಅಲ್ಲಾವುದ್ದೀನನು ಕರಾಳಕ್ಕೆ ಹಿಂತಿರುಗಿದ ಮೇಲೆ, ತಾನು ದೇವಗಿರಿಯಿಂದ ಕೊಳ್ಳೆಹೊಡೆದು ತಂದ ಸಂಪತ್ತನ್ನು ಜಲಾಲುದ್ದೀನನಿಗೆ ಒಪ್ಪಿಸುವ ಗೋಜಿಗೆ ಹೋಗದೆ ಅವನಿಗೆ ಒಂದು ಪತ್ರ ಬರೆದನು. ಸುಲ್ತಾನ ಜಲಾಲುದ್ದೀನನ ಅನುಮತಿಯನ್ನು ಪಡೆದು ದೇವಗಿರಿಯ ಮೇಲೆ ಅವನು ದಂಡೆತ್ತಿ ಹೋಗಿದ್ದುದರಿಂದ ಆ ಬಗ್ಗೆ ಒಂದು ವರದಿಯನ್ನು ಸಲ್ಲಿಸುವುದು ಅನಿವಾರ್ಯವಾಗಿತ್ತು. ಸುಲ್ತಾನನ ನಿರೀಕ್ಷೆಯಂತೆ ಅಲ್ಲಾವುದ್ದೀನನು ದೆಹಲಿಗೆ ಬರೆದ ಪತ್ರವೊಂದನ್ನು ಕಳುಹಿಸಿಕೊಟ್ಟಿದ್ದನು. ಹೀಗೆ ಮಾಡುವುದರಲ್ಲಿ ಅವನದೇ ಆದ ಕಾರಾಸ್ಥಾನವಿತ್ತು :

"ತೀರ್ಥರೂಪ ಜಲಾಲುದ್ದೀನ್ ಬಾದಷಹರ ದಿವ್ಯ ಸನ್ನಿಧಿಗೆ, ಪರಿದ ಸೇವಕ ಅಲ್ಲಾವುದ್ದೀನ್ ಮಾಡುವ ಸಲಾಮುಗಳು.

"ತಮ್ಮ ಆಶೀರ್ವಾದದಿಂದ ದೇವಗಿರಿಯ ಮೇಲಣ ದಂಡಯಾತ್ರೆಯನ್ನು ಯಶಸ್ವಿಯಾಗಿ ಮುಕ್ತಾಯಗೊಳಿಸಿ, ತಮಗೆ ಈ ಪತ್ರ ಬರೆಯುತ್ತಿದ್ದೇನೆ.

"ಅಲ್ಲಾನ ದಯೆಯಿಂದ ಕಾಫರರ ಮೇಲೆ ನಡೆದ ಈ ದಂಡಯಾತ್ರೆಯಲ್ಲಿ ನಮಗೇ ಜಯ ವುಂಟಾಯಿತು. ದೇವಗಿರಿಯ ಅರಸನು ದಿಲ್ಲಿಯ ಸುಲ್ತಾನರಿಗೆ ಸಾಮಂತನಾಗಿರಲು ಒಪ್ಪಿಕೊಂಡಿರುವುದಲ್ಲದೆ ತಮಗೆ ವರುಷಂಪ್ರತಿ ಮೂರು ಲಕ್ಷ ವರಹಗಳನ್ನು ಪೊಗದಿಯಾಗಿ ಕೊಡಲು ಒಪ್ಪಿಕೊಂಡಿದ್ದಾನೆ. ನಾವು ದೇವಗಿರಿಯನ್ನು ಮುತ್ತಿದಾಗ ಅಲ್ಲಿ ನಮಗೆ ವಿಶೇಷವಾದ ಸೂರೆ ದೊರೆಯಿತು. ಅದನ್ನೆಲ್ಲಾ ನಾನೇ ತಂದು ತಮ್ಮ ಪಾದಚರಣಗಳಲ್ಲಿ ಒಪ್ಪಿಸಬೇಕೆಂದು ಆಶಿಸಿದ್ದೆ. ಆದರೆ ಖುದಾನ ಇಚ್ಛೆಗೆ ಅದು ಬರಲಿಲ್ಲ. ನಾನು ದೇವಗಿರಿಯಿಂದ ಬಂದವನೇ ಹಾಸಿಗೆ ಹಿಡಿದು ಮಲಗಿದ್ದೇನೆ.

"ಎಂದಿಗೆ ನಿಮ್ಮನ್ನು ನೋಡುವೆನು, ಎಂದಿಗೆ ನಾನು ತಂದ ವಿಪುಲ ಸಂಪತ್ತನ್ನು ತಮಗೆ ಒಪ್ಪಿಸಿ, ತಮಗೆ ಕನಕಾಭಿಷೇಕ ಮಾಡುವೆನು ಎಂದು ನನ್ನ ಮನಸ್ಸು ಕಾತುರಗೊಂಡಿದೆ.

"ತಾವು ನನ್ನ ಮೇಲೆ ಅನುಗ್ರಹಿಸಿ ಇಲ್ಲಿಯುವರೆಗೂ ಪಾದ ಬೆಳೆಸಿ, ನನ್ನ ಸೇವೆಯನ್ನು ಸ್ವೀಕರಿಸುವ ಕೃಪೆ ಮಾಡಿದರೆ ಈ ಜನ್ಮ ಸಾರ್ಥಕವಾಯಿತೆಂದು ತಿಳಿಯುತ್ತೇನೆ. ನನಗೆ ಹಗಲೂ ರಾತ್ರಿ ತಮ್ಮದೇ ಆದ ಚಿಂತೆ ಕಾಡುತ್ತಿದೆ. ತಮ್ಮ ದರ್ಶನಕ್ಕಾಗಿ ಹಾತೊರೆಯುತ್ತಿದೆ ಈ ಜೀವ. ನಾನು ಒಂದು ವೇಳೆ ಈ ಕಾಹಿಲೆಯಿಂದ ಮಡಿದರೂ, ಒಮ್ಮೆ...ಒಂದೇ ಒಂದು ಬಾರಿ ತಮ್ಮನ್ನು ಕಣ್ತುಂಬ ನೋಡಿ ಕಣ್ಮುಚ್ಚಿಕೊಳ್ಳಬೇಕೆಂದು ಇದ್ದೇನೆ. ತಾವು ತಡಮಾಡದೆ ಇಲ್ಲಿಗೆ ಹೊರಟುಬರುವಿರೆಂದು ನಂಬಿರುವ,

ಇಂತು ತಮ್ಮ ಪಾದಸೇವಕ,
ಅಲ್ಲಾವುದ್ದೀನ್."

ಈ ಪತ್ರವನ್ನು ಓದಿಕೊಂಡು ಜಲಾಲುದ್ದೀನನಿಗೆ ಮುಖ ಅರಳಿತು. ತನ್ನ ಸೋದರಳಿಯ ಹಾಗೂ ಮಗಳ ಗಂಡನಾದ ಅಲ್ಲಾವುದ್ದೀನನು ತನ್ನ ಆಜ್ಞೆಯಂತೆ ದೇವಗಿರಿಯ ಕಾಫರ ದೊರೆಯನ್ನು ಸೋಲಿಸಿ ತನ್ನ ಸಾಮಂತ ನನ್ನಾಗಿ ಮಾಡಿದನಲ್ಲಾ ಎಂಬ ಅಭಿಮಾನವೊಂದು ಕಡೆ; ದೇವಗಿರಿಯ ಸಮಸ್ತ ಐಶ್ವರ್ಯವನ್ನು ಸೂರೆಹೊಡೆದು ತನಗೆ ಕನಕಾಭಿಷೇಕ ಮಾಡಲು ಉತ್ಸುಕನಾಗಿರುವ ಸುದ್ದಿ ಒಂದು ಕಡೆ. ಅಲ್ಲಾವುದ್ದೀನನು ತನ್ನ ಅಭಿಮಾನದ ಸಾಕುಪುತ್ರನಾದುದಕ್ಕೆ ಸಾರ್ಥಕವಾಯಿತೆಂದು ಅವನು ಬಗೆದನು. ಕೂಡಲೇ ಅವನು ಈ ಸಂಗತಿಯನ್ನು ತನ್ನ ಪತ್ನಿಯಾದ ಅಖ್ತರ್‌ಬೇಗಂ ಸಾಹೇಬಳಿಗೆ ತಿಳಿಸಲು ಆತುರಗೊಂಡು, ಅವಳ ಅಂತಃಪುರಕ್ಕೆ ಹೋದನು.

ಮೊದಲಿನಿಂದಲೂ ತನ್ನ ಪತ್ನಿಗೂ ಅಲ್ಲಾವುದ್ದೀನನಿಗೂ ಅಂತಹ ವಿಶ್ವಾಸ–ಗೌರವಗಳು ಇರಲಿಲ್ಲವೆಂಬುದು ಅವನಿಗೆ ತಿಳಿದಿತ್ತು. ಬೇಗಂಸಾಹೇಬಳು ಅಲ್ಲಾವುದ್ದೀನನಿಗೆ ತನ್ನ ಮಗಳು ಮಲ್ಲಿಕ್ ಐ ಜಹಾನಳನ್ನು ಮದುವೆ ಮಾಡಿಕೊಟ್ಟು ಅಳಿಯನಾಗಿ ಮಾಡಿಕೊಂಡಿದ್ದರೂ ಅವನ ಮಹತ್ವಾಕಾಂಕ್ಷೆ, ಸಿಕಂದರನಾಗುವ ಕನಸುಗಳನ್ನು ಕಂಡು ಅವನನ್ನು ಅಪಹಾಸ್ಯ ಮಾಡುತ್ತಿದ್ದಳು. ತನ್ನ ಮಗಳ ಜತೆಯಲ್ಲಿ ಅಲ್ಲಾವುದ್ದೀನನ್ನು ಹೀಯಾಳಿಸುತ್ತಿದ್ದುದೂ ಉಂಟು. ಇದನ್ನು ಕೇಳಿ ಅಲ್ಲಾವುದ್ದೀನನು ಒಮ್ಮೊಮ್ಮೆ ವ್ಯಂಗ್ಯವಾಗಿ ಹೇಳುತ್ತಿದ್ದ.

"ಅತ್ತೀ, ನನ್ನನ್ನು ನೀವು ಹಾಸ್ಯ ಮಾಡುತ್ತಿದ್ದೀರಲ್ಲವೆ? ಆಗಲಿ. ಇಂದಲ್ಲ ನಾಳೆ ನೀವು ಇದೇ ಕಣ್ಣುಗಳಿಂದ ನೋಡುತ್ತೀರಿ! ನಿಮ್ಮ ಅಳಿಯ ಸಿಕಂದರನೆಂಬ ಕೀರ್ತಿ ಪಡೆಯದೆ ಇದ್ದರೆ ನನ್ನ ಹೆಸರು ಅಲ್ಲಾವುದ್ದೀನನಲ್ಲ!"

ಈ ಮಾತು ಕೇಳಿ ಬೇಗಂಸಾಹೇಬಳು,

"ಹೋಗೋ ಹುಚ್ಚಪ್ಪ, ಸಿಕಂದರನಂತೆ, ಸಿಕಂದರ! ನಿನ್ನಂತೆ ಹಗಲು ಗನಸು ಕಟ್ಟಿದರೆ ಸಾಮ್ರಾಜ್ಯ ಮೂರು ದಿನಗಳಲ್ಲಿ ಹೆಸರಿಲ್ಲದೆ ಹೋದೀತು! ಇದನ್ನು ಅರಿತೇ ಸುಲ್ತಾನರು ಯಾವುದೇ ಜವಾಬ್ದಾರಿ ಸ್ಥಾನಕ್ಕೆ ಏರಿಸಿಲ್ಲ. ನೆಲ ನೋಡಿಕೊಂಡು ನಡೆಯುವವರೇ ಎಡುವುತ್ತಾರೆ. ಇನ್ನು ನೀನು ಆಕಾಶ ನೋಡಿಕೊಂಡು ನಡೆದರೆ-ಮುಗ್ಗರಿಸಿ ಬೀಳುವುದು ಖಂಡಿತ! ಎಂದಳು.

ಬೇಗಂಸಹೇಬಳು ಹೇಳಿದ್ದಂತೆ ಅಲ್ಲಾವುದ್ದೀನನು ಜವಾಬ್ದಾರಿಯನ್ನು ಹೊರಲು ಪ್ರಾಪ್ತವಯಸ್ಕನಾಗಿದ್ದರೂ-ಅವನ ಆದರ್ಶಗಳೇನೆಂಬುದನ್ನು ಅರಿತಿದ್ದ ಜಲಾಲುದ್ದೀನನು ಅವನಿಗೆ ಯಾವುದೇ ಮಹತ್ತರ ಹೊಣೆಗಾರಿಕೆಯನ್ನು ಕೊಟ್ಟಿರಲಿಲ್ಲ. ಇದರಿಂದ ಅವನಿಗೂ ಅಸಮಾಧಾನವಾಗದೆ ಇರಲಿಲ್ಲ. ಇದರ ಪ್ರತ್ಯಕ್ಷ ಪರಿಣಾಮ ಜಲಾಲುದ್ದೀನನ ವಿರುದ್ಧ ಅವನ ಆಸ್ಥಾನದ ಅಮೀರರು ಕೆಲವರು ನಡೆಸಿದ ಪಿತೂರಿಯಲ್ಲಿ ಅಲ್ಲಾವುದ್ದೀನನು ಮಹತ್ತರ ಪಾತ್ರ ವಹಿಸಿದ್ದನು.

ಆದರೆ ಪರಿಣಾಮ ಘೋರವಾಗದಿದ್ದರೂ, ಅದು ಅಲ್ಲಾವುದ್ದೀನನ ಭಾಗ್ಯದ ಬಾಗಿಲು ತೆರೆಯಿತು. ವಯಸ್ಸಿಗೆ ಬಂದ ಸೋದರಳಿಯನು ಬಳಿಯಲ್ಲಿ ಇದ್ದಾನೆ, ತನಗೆ ಅಪಾಯವೆಂಬುದನ್ನು ಅರಿತು-ದೂರದ ಕಾರಾ ಪ್ರಾಂತ್ಯಕ್ಕೆ ಅವನನ್ನು ಸುಭೇದಾರನಾಗಿ ನೇಮಿಸಿದ್ದನು. ಹೀಗೆ ಜಲಾಲುದ್ದೀನನು ಉಪಾಯವಾಗಿ ಅಪಾಯವನ್ನು ತಪ್ಪಿಸಿ ಕೊಂಡುದುದಲ್ಲದೆ, ಅಲ್ಲಾವುದ್ದೀನನ ಪ್ರೀತಿ ವಿಶ್ವಾಸಗಳನ್ನು ಉಳಿಸಿಕೊಂಡಿದ್ದನು.

ಇಂದು ಅವನು ದೇವಗಿರಿಯ ಯಾದವ ದೊರೆಯನ್ನು ಸೋಲಿಸಿ ಅಪಾರವಾದ ಸೂರೆಯೊಡನೆ ಕಾರಾಕ್ಕೆ ಹಿಂತಿರುಗಿ ಬಂದಿರುವ ಸಂಗತಿಯನ್ನು ಕೇಳಿ ಹಿರಿ ಹಿರಿ ಹಿಗ್ಗಿ ತನ್ನ ಅಳಿಯನ ಬಗ್ಗೆ ತಪ್ಪು ಕಲ್ಪನೆ ಮಾಡಿಕೊಂಡಿದ್ದ ಬೇಗಂ ಸಾಹೇಬಳನ್ನು ಹಂಗಿಸಲು ಅವಳ ಬಳಿಗೆ ಬಂದಿದ್ದನು.

ಜಲಾಲುದ್ದೀನನು ಅಲ್ಲಾವುದ್ದೀನನ ಪತ್ರವನ್ನು ಕೈಲಿ ಹಿಡಿದುಕೊಂಡು ಉದ್ವೇಗದಿಂದ ಹೇಳಿದನು.

"ಪ್ಯಾರಿ, ನೋಡಿದೆಯಾ ?. ನಿನ್ನ ಅಳಿಯನ ಸಾಹಸ ?" ಎಂದು ಹೇಳಿ ಕಾಗದವನ್ನು ಕೊಟ್ಟನು.

"ಏನು ಸಂಗತಿ ಹೇಳಬಾರದೆ !" ಕಾಗದವನ್ನು ತೆಗೆದುಕೊಂಡು ನೋಡ ಲೆಳಸದೆ ಬೇಗಂ ಸಾಹೇಬಳು ಹೇಳಿದಳು"

"ಏನು ಸಂಗತಿ ನೀನೇ ಓದಿನೋಡು !"

"ಏನು ಸುಲ್ತಾನರ ಮಡದಿಯಾಗಿ ಪತ್ರಗಳನ್ನು ನಾನೇ ಓದಬೇಕೆ ?" ಎಂದು ಬಿನ್ನಾಣದಿಂದ ಹೇಳಿದಳು, ಸುಮಾರು ಐವತ್ತು ವರ್ಷ ಸಮೀಪಿ ಸಿದ್ದರೂ – ಇನ್ನೂ ತಾನು ಇಪ್ಪತ್ತರ ಯುವತಿ ಎಂಬಂತೆ ಲಲ್ಲೆಗರೆಯುತ್ತಾ.

"ಹಾಗೋ ಸಂಗತಿ ! ಸರಿ, ನಾನೇ ಓದಿ ಹೇಳುತ್ತೇನೆ, ಕೇಳು" ಎಂದು ಆ ಪತ್ರವನ್ನು ತಾನೇ ಓದಿ ಹೇಳಿದ ಜಲಾಲುದ್ದೀನ್.

ಇದನ್ನು ಕೇಳಿಯೂ ಬೇಗಂ ಸಾಹೇಬಳು ಯಾವುದೇ ಪ್ರತಿಕ್ರಿಯೆ ವ್ಯಕ್ತಪಡಿಸದೆ ನಕ್ಕಳು.

"ಪ್ಯಾರಿ, ನೋಡಿದೆಯಾ ? ನನ್ನ ಮಕ್ಕಳೂ ಇದ್ದಾರೆ – ಏಕೆ ? ಹೆಸರಿಗೆ ನನ್ನ ಮಕ್ಕಳು ! ಅಷ್ಟೇ ನನ್ನ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಿಗೆ ಇಲ್ಲದ ಅಭಿಮಾನ, ಪ್ರೀತಿ ಗೌರವಗಳು ಅಲ್ಲಾವುದ್ದೀನನಿಗೆ ಇದೆ ! ಅವನು ನನಗೆ ಕನಕಾಭಿಷೇಕ ಮಾಡುತ್ತಾನಂತೆ – ಕನಕಾಭಿಷೇಕ ! ಇದನ್ನು ನೋಡಲು ನೀನೂ ಬರುತ್ತಿ ತಾನೆ ?"

"ಎಲ್ಲಿಗೆ ?"

"ಕಾರಾಕ್ಕೆ."

"ಏನು ನೀವು ಕಾರಾಕ್ಕೆ ಹೋಗಬೇಕೆಂದು ನಿಶ್ಚಯಿಸಿದ್ದೀರಾ ?"

"ಹೌದು."

"ನನ್ನನ್ನು ಕೇಳಿದರೆ ನೀವು ಅಲ್ಲಿಗೆ ಹೋಗುವುದು ನನಗೆ ಇಷ್ಟವಿಲ್ಲ."

"ಏಕೆ ?"

"ನಿಮ್ಮನ್ನು ತನ್ನ ಊರಿಗೆ ಆಹ್ವಾನಿಸಿರುವುದರಲ್ಲಿ ಯಾವುದೋ ಮೋಸ ವಿರುವಂತೆ ಕಾಣುತ್ತಿದೆ !"

"ನಿನಗೆ ಅವನನ್ನು ಕಂಡರೆ ಮೊದಲಿನಿಂದಲೂ ಅವಿಶ್ವಾಸ! ಈಗಲೂ ಅವನ ವಿಷಯದಲ್ಲಿ ಪೂರ್ವಾಭಿಪ್ರಾಯದಿಂದ ಸಂದೇಹಗ್ರಸ್ಥಳಾಗಿದ್ದಿ! ಇದು ಎಡವಿಲ್ಲದ ಸಂದೇಹ!"

"ನಿಮ್ಮ ಮಾತೇ ಸರಿಯಾಗಿರಲಿ! ಆದರೆ ಅಲ್ಲಾವುದ್ದೀನನೇಕೆ ತನ್ನ ಸಮಸ್ತ ಸಂಪತ್ತಿನೊಡನೆ ಇಲ್ಲಿಗೆ ಬರಲಿಲ್ಲ?"

"ಅವನು ದಂಡಯಾತ್ರೆಯನ್ನು ಮುಗಿಸಿ ಕಾರಾಕ್ಕೆ ಬಂದಕೂಡಲೇ ಹಾಸಿಗೆ ಹಿಡಿದು ಮಲಗಿದ್ದಾನಂತೆ!"

"ಇದೆಲ್ಲಾ ಕೇವಲ ಸೋಗು. ಆದರೆ ಅವನ ಉದ್ದಿಶ್ಯವೇ ಬೇರೆ ಇದ್ದಂತೆ ಕಾಣುತ್ತದೆ. ಅವನಿಗೆ ಇದರಲ್ಲಿ ಯಾವುದೇ ದುರುದ್ದೇಶವಿಲ್ಲದಿದ್ದರೆ - ಜತೆಯಲ್ಲ ಸಂಪತ್ತನ್ನು ದಳಪತಿಗಳ ಕೈಲಿ, ಸೂಕ್ತ ರಕ್ಷಣೆಯೊಡನೆ ಇಲ್ಲಿನ ರಾಜ ಭಂಡಾರಕ್ಕೆ ಏಕೆ ಕಳುಹಿಸಲಿಲ್ಲ? ಇದೆಲ್ಲವನ್ನೂ ನೋಡಿದರೆ, ಇದರಲ್ಲಿ ಏನೋ ಮೋಸವಿದೆ. ಬೇಕಿದ್ದರೆ ನೀವೇ ಹೋಗಿ. ನಾನು ಅಲ್ಲಿಗೆ ಬರುವುದಿಲ್ಲ."

"ಇದರಲ್ಲಿ ಮೋಸವೂ ಇಲ್ಲ - ಏನೂ ಇಲ್ಲ - ಎಲ್ಲ ನಿನ್ನ ಭ್ರಮೆ! ಅವನಲ್ಲಿ ಅಕಾರಣವಾಗಿ ದೋಷವೆಣಿಸುತ್ತಿದ್ದಿ! ಹಿಂದೆ ಅವನು ನನಗೆ ದ್ರೋಹ ಬಗೆದಿರಬಹುದು! ಆದರೆ ಈಗ ಅವನಿಗೆ ಆ ಬಗ್ಗೆ ಪಶ್ಚಾತ್ತಾಪ ಉಂಟಾಗಿದೆ. ನನ್ನ ವಿಷಯದಲ್ಲಿ ನಿಜವಾದ ಶ್ರದ್ಧಾಭಿಮಾನಗಳು ಉಂಟಾಗಿವೆ. ಆದುದರಿಂದ ನಾವು ಅವನ ಬಗ್ಗೆ ಸಂದೇಹಿಸಬಾರದು! ಇಷ್ಟಕ್ಕೂ ನಾವು ಕಾರಾಕ್ಕೆ ಹೋದರೆ - ನಮಗೆ ಬರುವ ಅಪಾಯವಾದರೂ ಏನು?"

"ಆಗಲಿ! ನಿಮ್ಮ ಇಷ್ಟ. ಆದರೆ ನೀವು ಸೂಕ್ತ ರಕ್ಷಣಾಪಡೆಯೊಂದಿಗೆ ಕಾರಾಕ್ಕೆ ಹೊರಡುವುದು ಕ್ಷೇಮ. ಹಾಗಿದ್ದರೆ ಮಾತ್ರ ನಾನು ನಿಮ್ಮ ಜತೆಯಲ್ಲಿ ಬರುತ್ತೇನೆ!" ಎಂದಳು ಬೇಗಂ ಸಾಹೇಬಳು.

ಇಷ್ಟೆಲ್ಲಾ ಹೇಳಿ ಒಪ್ಪಿಸಬೇಕಾದರೆ ಜಲಾಲುದ್ದೀನನಿಗೆ ಸಾಕಾಯಿತು. ಅವನು ತನ್ನ ಅಳಿಯ ಮಾಡುವ ಕನಕಾಭಿಷೇಕದ ಕಲ್ಪನೆಯಿಂದ ಹಿಗ್ಗುತ್ತಾ, ಹೆಚ್ಚು ಜನ ಸೈನಿಕರೊಡನೆ ಹೊರಟರೆ, ತಾನಾಗಿ ತಾನು ಅಲ್ಲಾವುದ್ದೀನನ ತಲೆಯಲ್ಲಿ ವಿದ್ರೋಹದ ಬೀಜವನ್ನು ಬಿತ್ತಿದಂತೆ ಆಗುವುದೆಂದು ಬಗೆದು - ಅವಶ್ಯಕವಿದ್ದಷ್ಟು ಪರಿವಾರದೊಡನೆ ಹೊರಟು - ಕಾರಾಕ್ಕೆ ಆಗಮಿಸಿದನು.

ಅಲ್ಲಾವುದ್ದೀನನು ಸಮೀಪದ ಹೊಳೆಯ ದಂಡೆಯಲ್ಲಿ ಸುಲ್ತಾನ ಜಲಾಲುದ್ದೀನನಿಗೂ – ಅವನ ಪರಿವಾರದವರಿಗೂ ರಾಜೋಚಿತವಾದ ಬಿಡಾರವನ್ನು ಏರ್ಪಡಿಸಿದ್ದನು–ಅವರನ್ನು ಎದುರುಗೊಳ್ಳಲು ಎಲ್ಲ ಸಿದ್ಧತೆಗಳನ್ನೂ ಪೂರೈಸಿ, ತಾನು ಮಾತ್ರ ಅಸ್ವಸ್ಥತೆಯಿಂದ ಹಾಸಿಗೆ ಹಿಡಿದಿದ್ದನು.

ಇದನ್ನು ಕೇಳಿ. ಅವನ ಕಾಹಿಲೆ ನಿಜವೆಂದೇ ನಂಬಿ, ಜಲಾಲುದ್ದೀನನು ಮೋಸಹೋದನು. ಅವನ ದೇಹಸ್ಥಿತಿಯನ್ನು ತಿಳಿಯಲು ಆತುರದಿಂದ ಅವನ ಅರಮನೆಗೆ ಓಡಿಬಂದನು.

ಅಲ್ಲಾವುದ್ದೀನನು ಯಾವುದೋ ಉಗ್ರವ್ಯಾಧಿಯಿಂದ ಜೀರ್ಣನಾದವನಂತೆ ಹಾಸಿಗೆ ಹಿಡಿದು ಮಲಗಿದ್ದನು. ಅವನ ಸಮೀಪದಲ್ಲಿ ಹಕೀಮರೂ, ಮುಲ್ಲಾಗಳೂ ಕಾತುರರಾಗಿ ನಿಂತಿದ್ದರು. ಸಮೀಪದಲ್ಲಿ ದಾಸಿಯರು ನಿಂತು ತಂಪಾದ ಪರಿಮಳ ದ್ರವ್ಯದಲ್ಲಿ ತೋಯ್ದ ಲಾಮಂಚದ ಹಾಗೂ ನವಿಲುಗರಿಯ ಬೀಸಣಿಕೆಗಳಿಂದ ಬೀಸುತ್ತಿದ್ದರು. ಅವುಗಳಿಂದ ಬರುವ ತಂಗಾಳಿ ಹಿತಕರವಾಗಿತ್ತು. ಒಮ್ಮೊಮ್ಮೆ ಅಲ್ಲಾವುದ್ದೀನನು ಜ್ವರದ ಬಾಧೆಯಿಂದಲೋ ಸಂಕಟದಿಂದಲೋ ಚೀರುತ್ತಿದ್ದನು. ನಿಮಿಷಕ್ಕೆ ಒಂದು ಬಾರಿ ದೇವರ ಹೆಸರು ಜಪಿಸುವನು. ಜಲಾಲುದ್ದೀನರ ಬಗ್ಗೆ ವಿಚಾರಿಸುವನು. ಇನ್ನೊಮ್ಮೆ ಭ್ರಮಿಷ್ಠನಂತೆ ಯಾರೊಂದಿಗೋ ಕನವರಿಕೆಯಲ್ಲಿ ತೊಡಗುವನು. ಅವನ ಸ್ಥಿತಿಯನ್ನು ನೋಡಿದ ಎಂತಹವರಿಗಾದರೂ ಗಾಬರಿಯಾಗುತ್ತಿತ್ತು!

ಜಲಾಲುದ್ದೀನನು ಗಾಬರಿಗೊಂಡನು. ಅಲ್ಲಾವುದ್ದೀನನ ಹಾಸಿಗೆಯ ಬಳಿ ಕುಳಿತು, ಅವನ ಮುಖವನ್ನೇ ದಿಟ್ಟಿಸಿ ನೋಡಿದನು. ಅವನ ದೇಹವನ್ನು ಮುಟ್ಟಿ ನೋಡಿ,

"ಬೇಟಾ ಅಲ್ಲಾವುದ್ದೀನ್, ನೋಡು, ಕಣ್ಣುತೆರೆ. ನಾನು ಜಲಾಲುದ್ದೀನನು ಬಂದಿದ್ದೇನೆ. ನಿನ್ನ ಮಾವ ಜಲಾಲುದ್ದೀನ ಬಂದಿದ್ದಾನೆ. ನೋಡು!" ಎಂದು ಆತಂಕಗೊಂಡು ಮೆಲ್ಲನೆ ಉಸಿರಿಸಿದನು.

ಅಲ್ಲಾವುದ್ದೀನನು ಪ್ರಯಾಸದಿಂದಲೆಂಬಂತೆ ಕಣ್ಣು ತೆರೆದು ನೋಡಿದನು:

"ಯಾರು? ಜಲಾಲುದೀನ ಬಾದಷಹರೇ .... ಯಾವಾಗ ಬಂದಿರಿ? ಗರೀಬನ ಮೇಲೆ ಇಂದಾದರೂ ದಯೆ ಬಂದಿತೆ? ದಾದಾಜಿ, ನಿಮ್ಮ ಗುಲಾಮನ ಮೇಲೆ ಅನುಗ್ರಹವಾಯಿತೆ?" ಎಂದು ಬಡಬಡಿಸಿ, ಏಳಲು ನೋಡಿದನು.

"ಬೇಡ ಮಗು, ಏಳಬೇಡ, ಆಯಾಸವಾಗುತ್ತದೆ – ಮಲಗಿಕೋ! ನಾನು ಹೋಗುವುದಿಲ್ಲ – ಇನ್ನೂ ಇರುತ್ತೇನೆ. ನಿನ್ನನ್ನು ನೋಡಲೆಂದೇ ಬಂದಿದ್ದೇನೆ. ಅಲ್ಲಾನ ದಯೆಯಿಂದ ಕಾಹಿಲೆ ವಾಸಿಯಾಗುತ್ತದೆ. ನೀನು ಹೆದರಬೇಡ!" ಎಂದು ಸಮಾಧಾನ ಮಾಡಿದನು.

"ದಾದಾಜಿ, ನಾನು ತಮ್ಮನ್ನು ನೋಡದೆ ಎಲ್ಲಿ ಸಾಯುತ್ತೇನೋ ಎಂದು ಹೆದರಿದ್ದೆ. ದೇವರು ದೊಡ್ಡವನು. ನೀವು ಉದಾರಚಿತ್ತದಿಂದ, ನನ್ನ ಮೇಲಣ ಪ್ರೀತಿಯಿಂದ ಇಲ್ಲಿಗೆ ದಯಮಾಡಿಸಿದಿರಿ – ನನಗೆ ದರ್ಶನ ಕೊಟ್ಟಿರಿ. ಇನ್ನು ನನಗೆಭಯವಿಲ್ಲ-ಈಗಲೇ ಮಡಿದರೂ ಚಿಂತೆಇಲ್ಲ!" ಎಂದು ಉದ್ಗಾರ ತೆಗೆದನು.

"ಬೇಟಾ, ನೀನು ಹೆದರುವ ಕಾರಣವಿಲ್ಲ – ಎಲ್ಲವೂ ಒಳ್ಳೆಯದಾಗುತ್ತದೆ!" ಎಂದು ಹೇಳಿ, "ಹಕೀಮರೇ, ಷಹಜಾದರ ದೇಹಸ್ಥಿತಿ ಹೇಗಿದೆ? ಎಷ್ಟು ದಿನಗಳಿಂದ ಕಾಹಿಲೆ ಪೀಡಿಸುತ್ತಿದೆ? ಈ ಕಾಹಿಲೆಯ ರಹಸ್ಯವೇನು?" ಎಂದು ಕೇಳಿದನು.

ಈ ಮಾತು ಕೇಳಿದ ಕೂಡಲೇ ತಮ್ಮ ಗುಟ್ಟು ಎಲ್ಲಿ ಬಯಲಾಯಿತೋ ಎಂದು ಹಕೀಮನು ಹೆದರಿದನು.

"ಹುಜೂರ್ .... ಇದರಲ್ಲಿ ಯಾವ ರಹಸ್ಯವೂ ಇಲ್ಲ."

"ನೀವು ಹೆದರುವ ಕಾರಣವಿಲ್ಲ – ನಾನು ಕೇಳಿದುದು ಕುಮಾರನಿಗೆ ಬಂದಿರುವ ಕಾಹಿಲೆಯ ಸ್ವರೂಪ! ಕುಮಾರನ ಕಂಗಾಲ ಸ್ಥಿತಿಯನ್ನು ನೋಡಿದರೆ ಇದು ಅವನ ಜೀವಸತ್ವವನ್ನೇ ಹೀರಿಬಿಟ್ಟಿರುವಂತೆ ಕಾಣುತ್ತಿದೆ." ಇದನ್ನು ಕೇಳಿ ಬದುಕಿದೆ ಎಂದುಕೊಂಡನು.

"ಹುಜೂರ್, ಷಹಜಾದರು ದೇವಗಿರಿಯ ಮೇಲೆ ದಂಡೆತ್ತಿಹೋದವರು ಹಿಂದಿರುಗಿ ಬಂದಕೂಡಲೇ ಹಾಸಿಗೆ ಹಿಡಿದು ಮಲಗಿಬಿಟ್ಟರು. ಮೊದಲು – ದಣಿವು, ಆಲಸ್ಯಗಳಿಂದ ಆರಂಭವಾದ ಕಾಹಿಲೆ – ದಿನಗಳೆದಂತೆ ಜ್ವರ, ತಲೆ ನೋವು – ಹೊಟ್ಟೆಯ ಸಂಕಟಗಳಲ್ಲಿ ಪರ್ಯವಸಾನವಾಗಿದೆ. ಬಹುಶಃ ದಂಡಯಾತ್ರೆಯಲ್ಲಾದ ದಣುವು ಶ್ರಮಗಳೂ – ಹವೆಯ ಬದಲಾವಣೆಯೂ ಇದಕ್ಕೆ ಕಾರಣವಾಗಿರಬೇಕು. ದಿನದಿನಕ್ಕೂ ಜೀರ್ಣವಾಗುತ್ತಿರುವ ಷಹಜಾದರ ದೇಹಸ್ಥಿತಿಯನ್ನು ನೋಡಿದರೆ – ಅವರು ರಾಜಯಕ್ಷ್ಮಕ್ಕೆ ತುತ್ತಾಗಿರುವಂತೆ

ಕಾಣುತ್ತಿದೆ. ಅವರಿಗೆ ದೀರ್ಘಕಾಲದ ವಿಶ್ರಾಂತಿ, ಆರೈಕೆಗಳು ಅವಶ್ಯಕ ವಾಗಿದೆ...."

"ಹಾಗಾದರೆ ನಾನು ಷಹಜಾದರನ್ನು ದೆಹಲಿಗೆ ಕರೆದೊಯ್ಯಬೇಕೆಂದಿದ್ದೆ ನಲ್ಲಾ!"

"ಹುಜೂರ್, ಈ ಸ್ಥಿತಿಯಲ್ಲಿ ಅವರನ್ನು ಎಲ್ಲಿಗೂ ಒಯ್ಯುವುದು ಅಪಾಯಕರ. ಷಹಜಾದರು – ಪ್ರಯಾಣದ ಅಲಸಿಕೆಯನ್ನು ಸಹಿಸಿಕೊಳ್ಳು ವುದು ಹಾಗಿರಲಿ, ದೆಹಲಿಯ ಅತಿ ಉಷ್ಣ ಹಾಗೂ ಶೀತಲ ಹವೆಯನ್ನು ತಡೆಯಲಾರರು – ಅವರು ಇಲ್ಲೇ ಇರುವುದು ಒಳ್ಳೆಯದು. ಹುಜೂರ್, ತಮ್ಮಲ್ಲಿ ಇನ್ನೊಂದು ಕೋರಿಕೆ ....

"ಷಹಜಾದರು ತಮ್ಮನ್ನು ನೋಡುವ ಸಲುವಾಗಿ ಆತಂಕಗೊಂಡಿದ್ದರು. ಈಗ ನೀವು ಇಲ್ಲಿಗೆ ಬಂದಿರುವುದರಿಂದ ಅವರ ಮನಸ್ಸಿಗೆ ಎಷ್ಟೋ ಸಮಾಧಾನ ಉಂಟಾಗಿದೆ. ತಾವು ಈ ಸಮಯದಲ್ಲಿ ಷಹಜಾದರ ಹಾಸಿಗೆ ಬಿಟ್ಟು ಹೋಗ ಬಾರದು! ತಾವು ಇಲ್ಲಿ ಕೆಲವು ದಿನಗಳಾದರೂ ಇದ್ದರೆ – ಷಹಜಾದರ ದೇಹ ಎಷ್ಟೋ ಉತ್ತಮಗೊಳ್ಳುತ್ತದೆ. ತಮ್ಮ ಸ್ಪರ್ಶಮಾತ್ರದಿಂದಲೇ ಕುಮಾರರು ಎಷ್ಟೋ ಗೆಲುವಾಗಿ ಕಾಣುತ್ತಿದ್ದಾರೆ. ದಯಾಮಯನಾದ ಅಲ್ಲಾನೇ ಈ ಸಮಯದಲ್ಲಿ ತಮ್ಮನ್ನು ಇಲ್ಲಿಗೆ ಕರೆಸಿದ್ದಾನೆ!" ಎಂದು ಉದ್ಗಾರ ತೆಗೆದ ಹಕೀಮ – ತನ್ನ ಪಾತ್ರವನ್ನು ಯಶಸ್ವಿಯಾಗಿ ನಿರ್ವಹಿಸುತ್ತಾ.

ಇದರಿಂದ ಸುಪ್ರೀತನಾಗಿ ಜಲಾಲುದ್ದೀನನು ತಾನು ಇನ್ನೂ ಒಂದೆರಡು ವಾರಗಳು ಕಾರಾದಲ್ಲಿಯೇ ಇರುವುದಾಗಿ ಹೇಳಿ ಅಲ್ಲಾವುದ್ದೀನನ್ನು ಸಮಾಧಾನ ಪಡಿಸಿ, ತನ್ನ ಬಿಡಾರಕ್ಕೆ ಹೊರಟನು.

ಅವನು ಅತ್ತ ಹೊರಟಕೂಡಲೇ ಇತ್ತ ಅಲ್ಲಾವುದ್ದೀನನು ತಟ್ಟನೆ ಎದ್ದು ಕುಳಿತು – ಹಕೀಮರ ಕಿವಿಯಲ್ಲಿ ಏನನ್ನೋ ಉಸಿರಿದನು. ಇದನ್ನು ಕೇಳಿ ಹಕೀಮರ ಮುಖ ಕಂದಿತು. ಆದರೂ 'ಆಗಲಿ' ಎಂದು ತಲೆಯಲ್ಲಾಡಿಸಿದರು

ಆ ದಿನ ಜಲಾಲುದ್ದೀನನು ಪ್ರಯಾಣದ ಆಯಾಸವನ್ನು ತೀರಿಸಿಕೊಂಡು, ತನ್ನ ಪತ್ನಿ ಬೇಗಂ ಸಾಹೇಬಳೊಂದಿಗೂ ತನ್ನ ಇತರ ಮಕ್ಕಳೊಂದಿಗೂ ಬಂದು ಅಲ್ಲಾವುದ್ದೀನನ ಬಳಿ ಬಹಳ ಹೊತ್ತು ಇದ್ದು, ಅವನನ್ನು ಸಂತೈಸಿ

ಅಲ್ಲಿಂದ ಬೀಳ್ಕೊಂಡನು. ಅವನು ಹೊರಡುವಾಗ, ಅಲ್ಲಾವುದ್ದೀನನು ತನ್ನ ವಜೀರನನ್ನು ಕರೆದು,

"ದಾದಾ, ತಮಗೆ ತೊಂದರೆ ಕೊಡುತ್ತಿದ್ದರೆ ಕ್ಷಮಿಸಿ. ಇವರ ಜತೆಯಲ್ಲಿ ಹೋಗಿ. ನಾವು ದೇವಗಿರಿಯಲ್ಲಿ ಸೂರೆಮಾಡಿಕೊಂಡು ಬಂದ ಸಂಪತ್ತನ್ನು ತಮಗೆ ತೋರಿಸುತ್ತಾರೆ. ಅದೆಲ್ಲ ತಮ್ಮ ಕೃಪಾಪ್ರಸಾದ."

ಎಂದು ಹೇಳಿ ವಜೀರರನ್ನು ಅವರ ಜತೆಯಲ್ಲಿ ಕಳುಹಿಸಿಕೊಟ್ಟನು.

ವಜೀರನು ಜಲಾಲುದ್ದೀನನನ್ನೂ, ಇತರ ರಾಜಬಂಧುಗಳನ್ನೂ ಜತೆಯಲ್ಲಿ ಕರೆದೊಯ್ದು, ರಾಜಭಂಡಾರದಲ್ಲಿ ರಾಶಿಹಾಕಿದ್ದ ಸಮಸ್ತ ಸಂಪತ್ತನ್ನೂ ಅವರಿಗೆ ತೋರಿಸಿದನು. ಒಂದು ಕಡೆ ಚಿನ್ನದ ನಾಣ್ಯಗಳನ್ನೂ, ಮುತ್ತು ರತ್ನಗಳನ್ನೂ ರಾಶಿಹಾಕಿದ್ದರು. ಇನ್ನೊಂದು ಕಡೆ ಬೆಲೆ ಬಾಳುವ ಒಡವೆಗಳನ್ನು ಪೇರಿಸಿದ್ದರು. ಅವುಗಳನ್ನು ಕೈಗೆ ತೆಗೆದುಕೊಂಡು ನೋಡಿ ಜಲಾಲುದ್ದೀನನೂ, ಬೇಗಂ ಸಾಹೇಬಳೂ ಹಿರಿಹಿರಿ ಹಿಗ್ಗಿದರು. ಇದೆಲ್ಲವೂ ನಾಳೆ ತಮ್ಮದಾಗುತ್ತದೆ ಎಂದು ಸಂತೋಷದಿಂದ ವೈಮರೆತರು.

"ಷಹಜಾದರು, ಇವುಗಳನ್ನೆಲ್ಲಾ ತಮ್ಮ ಪಾದಕಾಣಿಕೆಯಾಗಿ ಒಪ್ಪಿಸಬೇಕೆಂದು ನಿಶ್ಚಯಿಸಿದ್ದಾರೆ. ಒಂದು ಒಳ್ಳೆಯ ದಿನ ತಮಗೆ ಕನಕಾಭಿಷೇಕ ಮಾಡಿ, ತಾವು ತಂದ ಸಮಸ್ತ ಸಂಪತ್ತನ್ನು ತಮ್ಮ ವಶಕ್ಕೆ ಒಪ್ಪಿಸಬೇಕೆಂದು ಇದ್ದಾರೆ!" ಎಂದು ವಜೀರನು ಹೇಳಿದನು. ಇದನ್ನು ಕೇಳಿ ಆ ವೃದ್ಧ ದಂಪತಿಗಳಿಗೆ ಸ್ವರ್ಗ ಮೂರು ಗೇಣು ಉಳಿಯಿತು!

ಆ ಸಂಜೆ ಅತಿಥಿಗಳ ಸಲುವಾಗಿ ಅನೇಕ ಮನೋರಂಜನ ಕಾರ್ಯಕ್ರಮಗಳು ಏರ್ಪಾಡಾಗಿದ್ದವು.

ದಕ್ಷಿಣದ ದಂಡಯಾತ್ರೆಯ ಕಾಲದಲ್ಲಿ – ದೇವಗಿರಿಯಿಂದ ಕರೆತಂದಿದ್ದ ಸುಪ್ರಸಿದ್ಧ ನರ್ತಕಿಯರಿಂದ ನರ್ತನವೊಂದನ್ನು ಏರ್ಪಡಿಸಲಾಗಿತ್ತು. ಜತೆಯಲ್ಲೇ ಒಂದು ಪಾನಕೂಟ – ದೇವಗಿರಿಯಿಂದ ತಂದಿದ್ದ ಶ್ರೇಷ್ಠವಾದ ದ್ರಾಕ್ಷಾರಸವನ್ನು ಚಿನ್ನದ ಬಟ್ಟಲುಗಳಲ್ಲಿ, ಸುಂದರಿಯರಾದ ದಾಸಿಯರು ಒದಗಿಸಲು ನಿಂತಿದ್ದರು.

ಜಲಾಲುದ್ದೀನನು ಬೆಳಗಿನಿಂದಲೂ ಉಲ್ಲಾಸಿತನಾಗಿದ್ದನು. ಅವನಿಗೆ ಸಂಜೆಯ ನೃತ್ಯಪ್ರದರ್ಶನ ಪ್ರಿಯವಾಯಿತು. ಅವನದು ಹೆಚ್ಚಾಗಿ ದ್ರಾಕ್ಷಾರಸ

ತೆಗೆದುಕೊಳ್ಳುವ ಸ್ವಭಾವವಲ್ಲ. ಆದರೂ ಇಂದು ಸುಂದರ ರಮಣಿಯರ ಕೈಲಿ ಬಂದ, ಉತ್ತಮ ಮಧುವನ್ನು ತಿರಸ್ಕರಿಸಲು ಮನಸ್ಸು ಬರಲಿಲ್ಲ. ಅವನು ಹೆಚ್ಚಾಗಿಯೇ ಸೇವಿಸಿ, ಸರಿರಾತ್ರಿಯ ವೇಳೆಗೆ, ತನ್ನ ಶಿಬಿರಕ್ಕೆ ತೆರಳಲು ಮೇನೆಯನ್ನು ಹತ್ತಿದನು. ಈ ಮೊದಲೇ ಅವನ ಪತ್ನಿ ಹಾಗೂ ಸಹಜಾದರು ತಮ್ಮ ಶಿಬಿರಗಳಿಗೆ ತೆರಳಿದ್ದರು.

ಸೇವಕರು ಜಲಾಲುದ್ದೀನನ ಮೇನೆಯನ್ನು ಹೊತ್ತು ನಡೆದರು. ಇಂದೆಲ್ಲಾ ಅವನಿಗೆ ಸ್ವರ್ಗಲೋಕದಲ್ಲಿ ಇದ್ದಂತೆ ಭಾಸವಾಗಿತ್ತು. ದೇವಗಿರಿಯ ವಿಪುಲವಾದ ಸಂಪತ್ತು ತನ್ನ ದಾಗುವ ಹಿಗ್ಗು ಅಂದಿನ ಮನೋರಂಜನೆಯ ಕಾರ್ಯಕ್ರಮ ಅವನಲ್ಲಿ ಯೌವನೋದಯವಾದಂತೆ, ಹುರುಪುಗೊಳಿಸಿತ್ತು. ಯಥೇಚ್ಛವಾದ ಮಧ್ಯ ಸೇವನೆ ಅವನನ್ನು ನಿದ್ರೆ ಎಚ್ಚರಗಳ ನಡುವಣ ಸ್ಥಿತಿಗೆ ಕೊಂಡೊಯ್ದಿತ್ತು. ಅವನು ತೂಕಡಿಸುತ್ತಾ, ಸ್ವರ್ಗೀಯ ಕನಸು ಕಾಣುತ್ತಾ ಹಾಗೇ ಮೇನೆಯಲ್ಲಿ ನಿದ್ರೆ ಹೋದನು.

“ ಹುಜೂರ್, ತಮ್ಮ ಕುಟೀರ ಬಂತು....ಮೇನೆಯನ್ನು ಬಿಟ್ಟು ಇಳಿಯ. ಬೇಕು ! ” ಎಂದು ವಜೀರನು ಬಂದು ಎಚ್ಚರಿಸಿದಾಗಲೇ ಅವನಿಗೆ ಎಚ್ಚರ. ಅವನು ಮೇನೆಯಿಂದ ಇಳಿದು ಸುತ್ತಲೂ ನೋಡಿದನು, ಅದು ಯಾವುದೋ ಹೊಸ ಜಾಗವಿರುವಂತೆ ಭಾಸವಾಯಿತು.

“ ನಮ್ಮ ಬಿಡಾರ ಎಲ್ಲಿದೆ. ನಾವು ಎಲ್ಲಿಗೆ ಬಂದಿದ್ದೇವೆ ? ಏಕೆ ಇಲ್ಲಿ ಇಷ್ಟು ಕತ್ತಲೆ ? ಒಂದು ದೀಪವೂ ಇಲ್ಲ- ” ಎಂದು ಉದ್ಗಾರ ತೆಗೆದನ್ನು ಅಷ್ಟರಲ್ಲಿ ಅಲ್ಲಾವುದ್ದೀನನು ಅಲ್ಲಿಗೆ ಬಂದು,

“ಹುಜೂರ್, ತಾವು ಸ್ವರ್ಗದ ಬಾಗಿಲಿಗೆ—ಅಲ್ಲ ನರಕದ ಬಾಗಿಲಿಗೆ ಬಂದಿದ್ದೀರಿ ! ” ಎಂದು ಹೇಳಿ ಆ ಕತ್ತಲಿನಲ್ಲೂ ಥಳ ಥಳನೆ ಹೊಳೆಯುತ್ತಿದ್ದ ಕತ್ತಿಯನ್ನು ಜಲಾಲುದ್ದೀನನ ಮೇಲೆ ಬೀಸಿದನು. ಆ ಪೆಟ್ಟಿಗೆ ಅವನ ತಲೆ ಕತ್ತರಿಸಿ ಬಿತ್ತು. ‘ ಯೋ ಅಲ್ಲಾ....’ ಎಂದು ಹೇಳುತ್ತಿದ್ದಂತೆ ಅವನ ಪ್ರಾಣ ಹಾರಿ ಹೋಗಿತ್ತು.

ಅಲ್ಲಾವುದ್ದೀನನು-ಜಲಾಲುದ್ದೀನನ ದೇಹವನ್ನು ತುಂಡರಿಸಿ, ಮೂಟೆ ಕಟ್ಟಿ-ಹೊಳೆಗೆ ಹಾಕಿದನು. ಅವನ ಶಿಬಿರಕ್ಕೆ ಧಾಳಿ ಇಟ್ಟು, ಅವನ ಮಕ್ಕಳನು

ನಿಷ್ಕರುಣೆಯಿಂದ ಕತ್ತಿಗೆ ಬಲಿಕೊಟ್ಟನು. ಈಗ ಬೇಗಂ ಸಾಹೇಬಳನ್ನು ವಧಿಸಲು ಬಂದನು.

ಅಷ್ಟರಲ್ಲಿ ಅವಳಿಗೆ ಎಚ್ಚರಿಕೆಯಾಯಿತು. ಅವಳು ಗಾಬರಿಯಿಂದ ಎದ್ದು ನಿಂತಳು. ಎದುರಿಗೆ ದೈತ್ಯಾವೇಶದಲ್ಲಿ ಅಲ್ಲಾವುದ್ದೀನನೇ ನಿಂತಿದ್ದನು.

"ಅಲ್ಲಾವುದ್ದೀನ್! ಇದೇನು ಈ ಅರ್ಧ ರಾತ್ರಿಯಲ್ಲಿ ನೀನು ಇಲ್ಲಿ! ಬಾದಷಹರು ಎಲ್ಲಿ? ನರ್ತನ ಕೂಟದಿಂದ ಬಂದರೆ?"

"ಬಾದಷಹ ಷಹಜಾದರು ಸೈತಾನನ ಲೋಕಕ್ಕೆ ಹೋಗೀದ್ದಾರೆ!"

"ಏನು? ಸುಲ್ತಾನರನ್ನು, ಷಹಜಾದರನ್ನು ಮೋಸದಿಂದ ಕೊಲೆ ಮಾಡಿಸಿದೆಯಾ? ನೀಚ! ದೂರಸರಿ!" ಎಂದು ಹೇಳಿ ಸೊಂಟದಲ್ಲಿದ್ದ ಕಠಾರಿಯನ್ನು ಕೈಗೆ ತೆಗೆದುಕೊಂಡಳು ಬೇಗಂಸಾಹೇಬ್.

ಅಹಹ್ಹಾ....ಅಹಹಾ....ಬೇಗಂಸಾಹೇಬಳಿಗೆ ಅದೆಷ್ಟು ಪೌರುಷ! ಅತ್ತೇ ಈಗ ತಿಳಿಯಿತೇ. ಅಲ್ಲಾವುದ್ದೀನನು ಕೇವಲ ಮಾತಿನ ಮಲ್ಲನಲ್ಲ! ಅವನು ಸಿಕಂದರನೆಂದು ಈಗಲಾದರೂ ತಿಳಿಯಿತೆ?" ಎಂದು ಹೇಳಿ ಅವಳನ್ನು ಕೊಲ್ಲಲು ಕತ್ತಿಯನ್ನು ಎತ್ತಿದನು. ಅಷ್ಟರಲ್ಲಿ ಅದೇನು ಅನ್ನಿಸಿತೋ, ಎತ್ತಿದ ಕತ್ತಿಯನ್ನು ಕೆಳಗೆ ಇಳಿಸಿ, ವಿಕಟನಗೆ ನಗುತ್ತಾ ಹೇಳಿದನು.

"ಬೇಗಂ ಸಾಹೇಬರೇ, ನಿಮ್ಮನ್ನೂ ಸುಲ್ತಾನರ ಬಳಿಗೆ ಕಳುಹಿಸಬೇಕೆಂದಿದ್ದೆ. ಆದರೆ, ನಿಮ್ಮನ್ನು ಬೇಕೆಂದೇ ಉಳಿಸಿದ್ದೇನೆ. ನಾಳೆ ಸಿಕಂದರನಾಗುವ ನನ್ನ ಊಳಿಗ ಮಾಡಿಕೊಂಡಿರಲು ನಿಮ್ಮನ್ನು ಉಳಿಸಿದ್ದೇನೆ. ನಿಮ್ಮ ಷಹಜಾದರ ಪತ್ನಿಯರು ನನಗೆ ದಾಸಿಯರಾಗಿ, ನನ್ನನ್ನು ಓಲೈಸುವುದನ್ನು ತೋರಿಸುವ ಸಲುವಾಗಿ ನಿಮ್ಮನ್ನು ಕೊಲ್ಲದೆ ಉಳಿಸಿದ್ದೇನೆ?" ಎಂದು ಹೇಳಿ ಅವಳನ್ನು ಬಂಧಿಸಿ ಸೆರೆಯಲ್ಲಿಡಲು ಆಜ್ಞೆ ಮಾಡಿ, ಅಲ್ಲಿಂದ ಹೊರಟು ಹೋದನು.

# ೧೨

ಅಲ್ಲಾವುದ್ದೀನನು ಜಲಾಲುದ್ದೀನನನ್ನೂ, ಅವನ ಇಬ್ಬರು ಮಕ್ಕಳನ್ನೂ ಕೊಂದು ಕ್ರಿ. ಶ. ೧೨೯೬ ರಲ್ಲಿ ದೆಹಲಿಯ ಸಿಂಹಾಸನವನ್ನು ಆಕ್ರಮಿಸಿ ತಾನೇ ಸುಲ್ತಾನನೆಂದು ಘೋಷಿಸಿಕೊಂಡನು. ವೃದ್ಧ ದೊರೆ ಜಲಾಲುದ್ದೀನನು ಕೊಲೆ ಯಾಗಿದ್ದರೂ ಆಸ್ಥಾನದ ವಜೀರರೂ ಮೌಲುಗಳೂ, ಮುಲ್ಲಾಗಳೂ ಅಲ್ಲಾವುದ್ದೀನನನ್ನೇ ದೊರೆಯಾಗಿ ಒಪ್ಪಿಕೊಂಡರು. ಏಕೆಂದರೆ ಜಲಾಲುದ್ದೀನನು ಸಾಧಾ ಸ್ವಭಾವದ ದೊರೆಯಾಗಿದ್ದರೂ ದೇಶದ ಅಂದಿನ ಪರಿಸ್ಥಿತಿಯಲ್ಲಿ ಅವನು ಅಪ್ರಯೋಜಕನೆನಿಸಿ ಕೊಂಡಿದ್ದನು. ಅವನ ಕೈ ಕೆಳಗಿನ ಅಧಿಕಾರಿಗಳೇ ಅವನ ಮೇಲೆ ತಿರುಗಿ ಬಿದ್ದಿದ್ದರು. ಅವನ ಮಿತ್ರರು ವಿದ್ರೋಹಿಗಳನ್ನು ಉಗ್ರವಾಗಿ ಶಿಕ್ಷಿಸಲು ಹೇಳಿದಾಗ ಜಲಾಲುದ್ದೀನನು " ಅಯ್ಯಾ ಮಿತ್ರ, ನಾನು ಈಗಾಗಲೇ ಸಾಕಷ್ಟು ವೃದ್ಧನಾಗಿದ್ದೇನೆ. ಅದಷ್ಟು ಹೆಚ್ಚು ರಕ್ತದ ಕೋಡಿ ಹರಿಸದೆ ನಾನು ಗೋರಿ ಕಾಣಬೇಕೆಂದ್ದೀನೆ ಎಂದು ಹೇಳುತ್ತಿದ್ದರು. ಆದರೆ ಶಾಂತನಾಗಿ ಗೋರಿ ಕಾಣಲು ಆಶಿಸಿದ್ಧ ಅವನಿಗೆ ಉಗ್ರವಾದ ಶಿಕ್ಷೆಯೇ ದೊರಕಿತ್ತು. ಇದು ವಿಧಿವಿಲಾಸ.

ಜಲಾಲುದ್ದೀನನು ಆಸ್ಥಾನಿಕರ ಅಸಮಾಧಾನಕ್ಕೆ ಪಾತ್ರವಾಗಿದ್ದತೆಯೇ ದೇಶದ ಮುಸ್ಲಿಂ ಜನತೆಯ ಅಸಮಾಧಾನಕ್ಕೂ ಪಾತ್ರನಾಗಿದ್ದನು. ಅವನು ತನ್ನ ಇಸ್ಲಾಂ ಶ್ರದ್ಧೆಯ ಉತ್ಕಟ ಭಾವದಲ್ಲಿ ತಿಳಿಯದೆ ಮಾಡಿದ್ದ ಒಂದು ಅಪರಾಧ ಅವನ ವಿಷಯದಲ್ಲಿ ಮುಸ್ಲಿಮರು ತಿರಸ್ಕಾರದಿಂದ ನೋಡುವಂತೆ ಮಾಡಿತ್ತು. ಅದು ಸ್ವಾಮೊದ್ದೀಮನ ಪ್ರಕರಣ.

ಸಿದ್ದಿಮೊದ್ದೀಮನು ದೆಹಲಿಯ ಒಬ್ಬ ಸಂತ-ದರವೇಶಿ ಅಂದರೆ ಫಕೀರ. ಜನ ಅವನು ಮಹಾಮಹಿಮನೆಂದು ಹೇಳುತ್ತಿದ್ದರು. ಆ ದೇವತಾಮನುಷ್ಯನು ಸ್ಪರ್ಶಮಾತ್ರದಿಂದಲೇ ಎಂತೆಂತಹ ಕಾಹಿಲೆಗಳನ್ನಾದರೂ ಗುಣಪಡಿಸುತ್ತಿದ್ದನಂತೆ! ತನ್ನ ಸಹಾಯಕ್ಕೆ ಪ್ರತಿಯಾಗಿ ಅವನು ಯಾರಿಂದಲೂ ಯಾವುದೇ ಪ್ರತಿಫಲವನ್ನು ಬಯಸುತ್ತಿರಲಿಲ್ಲ. ಅವನು ಸರ್ವಸಂಗಪರಿತ್ಯಾಗಿ. ನಿಂತಲ್ಲಿ

ನಿಲ್ಲದೆ ಊರಿಂದ ಊರಿಗೆ ಪರ್ಯಟನ ಮಾಡುತ್ತಾ, ದೀನದಲಿತರಿಗೂ ಕಷ್ಟದಲ್ಲಿರುವವರಿಗೂ ಸಹಾಯ ಮಾಡುತ್ತಿದ್ದನು.

ಹೀಗಾಗಿ ಅವನ ಕೀರ್ತಿ ಬಹುದೂರ ಹಬ್ಬಿತ್ತು. ಅವನು ಹೋದಲ್ಲಿ ಜನರ ಗುಂಪು ನೆರೆಯುತ್ತಿತ್ತು. ಅವರು ಅವನು ಅಪೇಕ್ಷೆ ಪಡದೆ ಇದ್ದರೂ ಏನನ್ನಾದರೂ ಕೊಟ್ಟು ಹೋಗುತ್ತಿದ್ದರು. ಅವನು ಅವುಗಳನ್ನೆಲ್ಲಾ ಅಲ್ಲಿದ್ದ ಬಡಬಗ್ಗರಿಗೆ ದಾನಮಾಡಿಬಿಡುತ್ತಿದ್ದನು. ಇದರಿಂದಾಗಿ ಅವನು ಒಬ್ಬ ಸಾಮಾನ್ಯ ವ್ಯಕ್ತಿ–ದೇವರ ಸೇವಕನೆಂದು ಹೇಳಿಕೊಳ್ಳುತ್ತಿದ್ದನು. ಅವನು ಯಾರೊಡನೆಯೂ ಮಾತನಾಡುತ್ತಿರಲಿಲ್ಲ. ಸಾಮಾನ್ಯವಾಗಿ ಮೌನದಿಂದ ಇರುತ್ತಿದ್ದನು. ಇದರಿಂದ ಅವನ ವ್ಯಕ್ತಿತ್ವಕ್ಕೆ ಇನ್ನಷ್ಟು ವರ್ಚಸ್ಸು ಬಂದಿತ್ತು. ಹೋದಹೋದಲ್ಲಿ ಜನ–ಮುಸಲ್ಮಾನರು–ಹಿಂದೂಗಳು ಅವನನ್ನು ದೇವರ ಅವತಾರವೆಂದು ತಿಳಿಯತೊಡಗಿದರು. ಅವನ ಸೇವೆ ತಮ್ಮ ಸೌಭಾಗ್ಯವೆಂದು ತಿಳಿದರು.

ಇಂತಹ ಸಾಧುಸತ್ಪುರುಷನನ್ನು ವೃಥಾಕಾರಣಕ್ಕಾಗಿ ಜಲಾಲುದ್ದೀನನು ಕ್ರೂರವಾಗಿ ಶಿಕ್ಷಿಸಿದ್ದನು.

ಜಲಾಲುದ್ದೀನನು ನಿಷ್ಠಾವಂತ ಮುಸಲ್ಮಾನನಾಗಿದ್ದನು. ಸೂಫಿ ಪಂಥಕ್ಕೆ ಸೇರಿದ್ದ ಸಿದ್ಧಿಮೊದ್ದೀನನ ನಡವಳಿಕೆ ಜಲಾಲುದ್ದೀನನಿಗೆ ಸರಿಕಾಣಲಿಲ್ಲ. ಅವನ ದೃಷ್ಟಿಯಲ್ಲಿ "ಸಿದ್ಧಿಯು ಧರ್ಮ ಬಿಟ್ಟು ಹೋಗುತ್ತಿದ್ದಾನೆ. ವಿಧರ್ಮಿಯರಾದ ಹಿಂದೂಗಳನ್ನು ಅವನು ಅನುಯಾಯಿಗಳಾಗಿ ಪಡೆದಿದ್ದಾನೆ" ಎಂಬ ಆಗ್ರಹವಿತ್ತು. ಅದಕ್ಕೆ ತಕ್ಕಂತೆ ಸಿದ್ಧಿಯು ಮಸೀದಿಗೆ ಹೋಗುತ್ತಿರಲಿಲ್ಲ. ಈಶ್ವರನು ಎಲ್ಲೆಡೆಯಲ್ಲೂ ಇದ್ದಾನೆ. ಅಣುರೇಣುತೃಣ ಕಾಷ್ಟಗಳಲ್ಲೂ ಇರುವನೆಂಬುದನ್ನು ತಿಳಿದಿದ್ದ ಅವನಿಗೆ ಪ್ರಾರ್ಥನೆಯ ಸಲುವಾಗಿ ಮಸೀದಿ ಇಲ್ಲವೇ ದೇವಮಂದಿರಗಳ ಅವಶ್ಯಕತೆ ಇರಲಿಲ್ಲ.

ಇದು ಕಟ್ಟು ಇಸ್ಲಾಂ ಭಕ್ತನಾಗಿದ್ದ ಜಲಾಲುದ್ದೀನನಿಗೆ ಸಹಿಸದಾಗಿತ್ತು. ಸಿದ್ಧಿಯು ಇಸ್ಲಾಂ ಹೆಸರಿನಲ್ಲಿ ಧರ್ಮವನ್ನು ಅತಿಕ್ರಮಿಸಿ ನಡೆಯುತ್ತಿದ್ದಾನೆ ಎಂದು ಭಾವಿಸಿದನು. ಇದೇ ಸಮಯದಲ್ಲಿ ಸಿದ್ದಿಯ ದ್ವೇಷಿಗಳು ಅವನ ಮೇಲೆ ಜಲಾಲುದ್ದೀನನಿಗೆ ಚಾಡಿ ಹೇಳಿದರು. ಸುಲ್ತಾನನ ಮೇಲೆ ಜನರನ್ನು ಎತ್ತಿಕಟ್ಟಿ, ಅವನನ್ನು ಸಿಂಹಾಸನದಿಂದ ತಳ್ಳಲು ಅವನು ಫಕೀರನ ವೇಷ ತಳೆ

ದಿರುವನೆಂದು ಇಲ್ಲದ ದೋಷಾರೋಪಣೆಯನ್ನು ಮಾಡಿದರು. ಇವುಗಳನ್ನು ನಂಬಿ ಅವನನ್ನು ಜಲಾಲುದ್ದೀನನು ವಿಚಾರಣೆಗೆ ಗುರಿಪಡಿಸಿದನು.

ಕೂಡಲೇ ಅವನನ್ನು ನ್ಯಾಯಾಲಯಕ್ಕೆ ಬರಲು ಆಜ್ಞೆಮಾಡಿದನು. ಈ ಆಜ್ಞೆಯನ್ನು ರಾಜಭಟರು ತಿಳಿಸಿದಾಗ, ಸಿದ್ದಿಮೊದ್ದೀನನು ಶಾಂತನಾಗಿ "ನಾನು ಅಲ್ಲಾನ ಆಜ್ಞೆಯ ಹೊರತು ಮತ್ತೆ ಯಾರ ಆಜ್ಞೆಯನ್ನೂ ಪಾಲಿಸುವುದಿಲ್ಲ!" ಎಂದನು.

ಇದನ್ನು ಕೇಳಿ ಜಲಾಲುದ್ದೀನನು ಕೆರಳಿದನು. ತನ್ನ ಆಜ್ಞೆಯನ್ನು ತಿರಸ್ಕರಿಸಿದ ಅವನಿಗೆ ತಕ್ಕ ರೀತಿಯಲ್ಲಿ ಬುದ್ಧಿ ಕಲಿಸಬೇಕೆಂದು ಅವನನ್ನು ಬಲಾತ್ಕಾರದಿಂದ ನ್ಯಾಯಾಲಯಕ್ಕೆ ಕರೆತರಿಸಿದನು. ಅವನ ಮೇಲೆ ಮೊದಲಿನಿಂದ ದ್ವೇಷ ಕಾರುತ್ತಿದ್ದ ಖಾಜಿಗಳೂ ಮೌಲ್ವಿಗಳೂ ಅವನ ವಿರೋಧವಾಗಿ ಸಾಕ್ಷ್ಯವಿತ್ತರು. ಇವುಗಳನ್ನು ಕೇಳಿ ಕುಪಿತನಾಗಿ ಜಲಾಲುದ್ದೀನನು ಸಿದ್ದಿಮೊದ್ದೀನನನ್ನು ಶೂಲಕ್ಕೆ ಏರಿಸಲು ಆಜ್ಞೆ ಮಾಡಿದನು.

ಈ ಆಜ್ಞೆಯನ್ನು ಕೇಳಿ ಸಿದ್ದಿಯು ತನ್ನಲ್ಲೇ ನಕ್ಕನು. ಅವನು ಶಾಂತಮನಸ್ಕನಾಗಿಯೇ ಶೂಲದ ಬಳಿಗೆ ಹೋದನು. ತನ್ನ ಕತ್ತಿಗೆ ನೇಣು ಹುರಿಬಿಗಿದಾಗ ಮಾತ್ರ, ಅವನು ಸುತ್ತಲಿದ್ದವರನ್ನು ಉದ್ದೇಶಿಸಿ "ನಮ್ಮೆಲ್ಲರ ತಂದೆಯಾದ ಅಲ್ಲಾ ಇದನ್ನು ನೋಡಿ ನಗುತ್ತಿದ್ದಾನೆ. ನನ್ನನ್ನು ಹಿಂಸಿಸಿದವರು ನಾಳೆ ತಮ್ಮ ಕರ್ಮಫಲವನ್ನು ಭುಂಜಿಸದೆ ಹೋಗುವುದಿಲ್ಲ. ಜಲಾಲುದ್ದೀನನು ಮಾತ್ರವಲ್ಲ, ಅವನ ಮಕ್ಕಳು ಮಾತ್ರವಲ್ಲ—ಅವನ ವಂಶದವರೆಲ್ಲರೂ ಇದೇ ರೀತಿ ಕ್ರೂರವಾದ ಸಾವಿಗೆ ತುತ್ತಾಗುವರು! ಇದು ಅಲ್ಲಾನ ಶಾಪ!" ಎಂದು ಹೇಳಿ ಅಲ್ಲಾನ ಪಾದ ಸೇರಿದ್ದನು.

ಆ ಶಾಪದಂತೆ ಇಂದು ಜಲಾಲುದ್ದೀನನು ಕ್ರೂರ ರೀತಿಯಲ್ಲಿ ಹತನಾಗಿದ್ದನು. ಅವನ ಮಕ್ಕಳೂ ಇದೇ ರೀತಿಯಲ್ಲಿ ದುರ್ಮರಣವನ್ನು ಪಡೆದಿದ್ದರು. ಇದನ್ನು ನೋಡಿದ ಜನತೆ ಸಿದ್ದಿಯ ಭವಿಷ್ಯವಾಣಿಯನ್ನು ನೆನೆದು ಗಾಬರಿಗೊಂಡರು. ಇದೆಲ್ಲಾ ಜಲಾಲುದ್ದೀನನ ಕರ್ಮಫಲವೆಂದು ಅವರು ಅವನ ಸಾವಿನ ಬಗ್ಗೆ ಹೆಚ್ಚು ಶೋಕಿಸಲಿಲ್ಲ.

ಅಲ್ಲಾವುದ್ದೀನನೂ ತಾನು ಸಿಂಹಾಸನವನ್ನೇರಿದ ಕೂಡಲೇ ಈ ಕೃತ್ಯವನ್ನು ಕುರಿತು ಜನ ಮಾತನಾಡಿಕೊಳ್ಳುವುದನ್ನು ತಪ್ಪಿಸಲು ಅನೇಕ ಉಗ್ರವಾದ ಶಾಸನಗಳನ್ನು ಜಾರಿಗೆ ತಂದನು.

ಸೈನಿಕರು ತನ್ನ ವಿರುದ್ಧ ದಂಗೆ ಏಳದಂಗೆ ಅವರಿಗೆ ಧಾರಾಳವಾಗಿ ತಾನು ತಂದಿದ್ದ ಸಂಪತ್ತನ್ನು ಹಂಚಿ, ಅವರ ವಿಶ್ವಾಸಕ್ಕೆ ಪಾತ್ರನಾದನು. ಜನರು ತನ್ನ ವಿರುದ್ಧ ದಂಗೆ ಏಳದಿರಲೆಂದು ಉತ್ಸವಗಳಲ್ಲೂ, ವಿವಾಹಾದಿ ಕಾರ್ಯಗಳಿಗೂ–ಒಟ್ಟಾಗಿ ಸೇರದಂತೆ ಕಟ್ಟುಮಾಡಿದನು. ಸೈನಿಕರು ಮದ್ಯಪಾಯಿಗಳಾದರೆ ನಿರ್ವೀರ್ಯರಾಗುವರೆಂದು–ಮದ್ಯಪಾನದಿಂದ ಉಂಟಾಗುವ ತೊಂದರೆಗಳನ್ನು ತಪ್ಪಿಸಲು–ಅದನ್ನು ತನ್ನ ರಾಜ್ಯದಲ್ಲಿ ಬಹಿಷ್ಕರಿಸಿದನು. ಶ್ರೀಮಂತರಿಂದ ಹಣವನ್ನು ದೂಡಿ, ಅವರ ಶಕ್ತಿಯನ್ನು ಮುರಿದನು. ಅಧಿಕಾರ ಬಲದಿಂದ ಸೊಕ್ಕಿಮೆರೆಯುತ್ತಿದ್ದ ಅಧಿಕಾರಿಗಳನ್ನೆಲ್ಲಾ ಉಗ್ರವಾಗಿ ಶಿಕ್ಷಿಸಿದನು. ಕಳ್ಳಕಾಕರಿಂದ ಉಂಟಾಗುತ್ತಿದ್ದ ಉಪದ್ರವ ತಪ್ಪಿಸಲು, ಉಗ್ರಕ್ರಮ ಕೈಗೊಂಡನು. ತನ್ನ ವಿರುದ್ಧ ಜನ ಮಾತನಾಡಿಕೊಂಡರೆ, ಯಾವುದೇ ವಿದ್ರೋಹಕರ ಚಟುವಟಿಕೆಗಳಲ್ಲಿ ಭಾಗವಹಿಸಿದರೆ ವರದಿಮಾಡಲು ಸುಸಜ್ಜಿತವಾದ ಗುಪ್ತ ಚಾರ ದಳವನ್ನು ನೇಮಿಸಿದನು. ಅನೇಕ ತೆರಿಗೆಗಳನ್ನು ವಿಧಿಸಿ, ಶ್ರೀಮಂತರ ಸಂಪತ್ತನ್ನು ಕಿತ್ತುಕೊಂಡು ಅವರಿಂದ ಬಡವರ ಶೋಷಣೆ ತಪ್ಪಿಸಿದನು. ಹೀಗೆ ಆಡಳಿತ ಯಂತ್ರವನ್ನು ಬಿಗಿಪಡಿಸಿ, ತನ್ನ ವಿರುದ್ಧ ಯಾವುದೇ ಸಂಚು ನಡೆಯದಂತೆ ಅವನು ಅಧಿಕಾರವನ್ನು ಭದ್ರಪಡಿಸಿಕೊಂಡನು.

ಅಧಿಕಾರ ಕೈಯಲ್ಲಿ ಭದ್ರವಾದ ಮೇಲೆ ಸಿಕಂದರನೆನಿಸಿಕೊಳ್ಳುವ ಆಸೆಯಿಂದ ದಂಡಯಾತ್ರೆಗೆ ಮನಸ್ಸು ಕೊಟ್ಟನು.

ಅವನ ವಕ್ರದೃಷ್ಟಿಗೆ ಮೊದಲು ಬಿದ್ದ ರಾಜ್ಯವೆಂದರೆ ಗುಜರಾತ. ಅವನು ಅಲ್ಲಿನ ಸಂಪತ್ತನ್ನು ಕೇಳಿದ್ದನು. ಅಲ್ಲಿನ ದೊರೆ ವಾಘೇಲಕರ್ಣರಾಯನ. ಮೇಲೆ ದಂಡೆತ್ತಿ ಹೋಗಬೇಕೆಂದಿರುವಾಗಲೇ ಅವನಿಗೆ ಸೂಕ್ತ ಕಾರಣವೊಂದು ಒದಗಿತ್ತು.

ಅಲ್ಲಾವುದ್ದೀನನು ದೆಹಲಿಯ ಸಿಂಹಾಸನವನ್ನು ಏರಿದ ಸಮಯಕ್ಕೆ ಕೊಂಚ ಮೊದಲು ಗುಜರಾತಿನ ಸಿಂಹಾಸನವನ್ನು ವಾಘೇಲಕರ್ಣನು ಹತ್ತಿದ್ದನು. ಇವನು ಪವಿತ್ರವಾದ ಪಶ್ಚಿಮ ಚಾಲುಕ್ಯ ವಂಶಕ್ಕೆ ಸೇರಿದ್ದನು.

ಇವನ ಹಿಂದೆ ಚಾಲುಕ್ಯ ವಂಶದ ಅರಸರು ಪರಮಾರರನ್ನು ಓಂದೊತ್ತಿ ಅನ್ಹಿಲ ವಾಡದಲ್ಲಿ ವೈಭವದಿಂದ ಆಳಿದ್ದರು. ಇವರಲ್ಲೆಲ್ಲಾ ಜಯಸಿಂಹಸಿದ್ಧರಾಜನು ಅತ್ಯಂತ ಪ್ರಸಿದ್ಧನು. ಇವನೇ ಅಧುನಿಕ ಗುಜರಾತಿನ ಮೂಲಪುರುಷ ನೆಂದರೂ ಸಲ್ಲುತ್ತದೆ.

ಇವನ ಹಿಂದೆ ಮೂಲರಾಜ ಭೀಮ ಮತ್ತು ಕರ್ಣರು ಗುರ್ಜರವನ್ನು ಮಹಾರಾಷ್ಟ್ರವಾಗಿ ಮಾಡಲು ಪ್ರಯತ್ನಿಸಿ ವಿಫಲರಾಗಿದ್ದರು.

ಅವರ ನಂತರ ಪಟ್ಟವೇರಿದ ಜಯಸಿಂಹಸಿದ್ಧರಾಜನು ಗುರ್ಜರ ದೇಶದ ಸಾಮ್ರಾಜ್ಯಕ್ಕೆ ಬುನಾದಿ ಹಾಕಿದನು. ಇವನು ಅಸಾಧಾರಣ ವೀರಪುರುಷ ನಾಗಿದ್ದಂತೆ, ದಕ್ಷ ರಾಜಕಾರಣಿಯೂ, ಸಾಹಿತ್ಯಾಭಿಮಾನಿಯೂ ಆಗಿದ್ದನು. ಇವನ ಕಾಲದಲ್ಲಿ ಹೇಮಚಂದ್ರನೆಂಬ ಕವಿಯು 'ಸಿದ್ಧಹೇಮ' ಮತ್ತು 'ದ್ವಶ್ರಯ' ಮಹಾಕಾವ್ಯಗಳನ್ನು ಬರೆದನು. ಇವನು ಸೌರಾಷ್ಟ್ರ ಹಾಗೂ ದಕ್ಷಿಣ ಗುಜ ರಾತುಗಳನ್ನು ಗೆದ್ದು ಮಹಾರಾಜಾಧಿರಾಜ ಪರಮೇಶ್ವರ ತ್ರಿಭುವನ ಗಂಡ ಮುಂತಾದ ಬಿರುದುಗಳನ್ನು ಧರಿಸಿದನು. ಶಾಕಂಬರಿಮಾಳವಗಳನ್ನು ಗೆದ್ದು ಸಿದ್ಧ ಚಕ್ರವರ್ತಿ ಎನಿಸಿಕೊಂಡನು.

ಇವನ ನಂತರ ಆಳಿದ ದೊರೆಗಳು ಅಷ್ಟು ಸಮರ್ಥರಾಗಿರಲಿಲ್ಲ. ಕುಮಾರ ಪಾಲ, ಅಜಯಪಾಲ, ಇಮ್ಮಡಿಮರುಳರಾಜ, ಇಮ್ಮಡಿ ಭೀಮ ಇವರು ಸಾಮ್ರಾಜ್ಯವನ್ನು ಮಹಮದೀಯರಿಂದ ಉಳಿಸಿಕೊಳ್ಳಲು ಪ್ರಯತ್ನಿಸಿದರೂ, ಭೀಮನ ಕಾಲದಿಂದ ಈಚೆಗೆ ಸಾಮ್ರಾಜ್ಯವು ಒಡೆದುಹೋಗಲಾರಂಭಿಸಿತು.

ಮಹಮದ್‌ಘೋರಿ ಮತ್ತು ಮಲ್ಲಿಕ್ ಕುತ್ಬುದ್ದೀನ್ ದೌಲತ್‌ರ ಧಾಳಿ ಯನ್ನು ತಡೆಯಲು ಭೀಮನಿಂದ ಸಾಧ್ಯವಾಗಲಿಲ್ಲ. ಆ ಸಮಯದಲ್ಲಿ ರಾಜ ಪುತ್ರರಲ್ಲಿದ್ದ ಪರಸ್ಪರ ದ್ವೇಷಾಸೂಯೆಗಳಿಂದ ಭಾರತದಲ್ಲಿ ಮುಸಲ್ಮಾನರು ನೆಲೆ ಯಾಗಿ ನಿಂತರು. ಈ ವೇಳೆಗೆ ಭೀಮನನ್ನು ಓಡಿಸಿ ಜಯಸಿಂಹನೆಂಬುವನು ಅನ್ಹಿಲವಾಡದ ಸಿಂಹಾಸನವನ್ನು ಆಕ್ರಮಿಸಿದ್ದನು. ಮುಂದೆ ಆಳಿದ ವಿಶಾಲ ದೇವ ಅವನ ಸೋದರ ಅಳಿಯ ಅರ್ಜುನ ದೇವರು ಹೆಸರಿಗೆ ಮಟ್ಟಿಗೆ ಸಾಮ್ರಾಟರಾಗಿದ್ದರು. ಅರ್ಜುನದೇವನಿಗೆ ಹಿಮದೇವ ಮತ್ತು ಸಾರಂಗದೇವ ಎಂಬ ಮಕ್ಕಳಿದ್ದರು. ಕ್ರಿಶ. ೧೨೯೭ ರಲ್ಲಿ ಸಾರಂಗದೇವನು ಸಾಯಲು ಅವನ ಸೋದರಳಿಯ ವಾಘೇಲ ಕರ್ಣನು ಸಿಂಹಾಸನವನ್ನೇರಿದನು.

ಈ ಸಮಯದಲ್ಲಿ ಉತ್ತರ ಭಾರತದ ಅರಸರು ಪರಸ್ಪರ ಕಾದಾಡಿ ದುರ್ಬಲರಾಗಿದ್ದರು. ಮೊದಲಿನಿಂದಲೂ ದೇವಗಿರಿಯ ಯಾದವರಿಗೂ, ಗುಜರಾತಿನ ದೊರೆಗಳಿಗೂ ಬದ್ಧದ್ವೇಷವಿತ್ತು ಒಂದಲ್ಲಿ ಒಂದು ಕಾರಣಕ್ಕಾಗಿ ಯುದ್ಧಗಳು ನಡೆಯುತ್ತಲೇ ಇದ್ದುವು. ಒಂದುಕಡೆ ದೇವಗಿರಿಯೊಡನೆ ಯುದ್ಧ ವಾದರೆ, ಇನ್ನೊಂದೆಡೆಯಲ್ಲಿ ಮಾಳವದಮೇಲೆ ಯುದ್ಧ, ಮತ್ತೊಮ್ಮೆ ಚಹ ಮಾನರ ರಾಜಧಾನಿ ರತನ್ ಬೂರದಮೇಲೆ ಧಾಳಿ. ಹೀಗೆ ಗುಜರಾತಿನ ಅಂತಃ ಸತ್ವ ಜರ್ಜರಿತವಾಗಿತ್ತು. ಇಂತಹ ಸಮಯದಲ್ಲಿ ವಾಘಾಲ ಕರ್ಣನು ಅನ್ಹಿಲವಾಡದ ಸಿಂಹಾಸನವನ್ನೇರಿದ್ದನು.

ಕರ್ಣನು ಯುವಕನಾದರೂ ದುರ್ಬಲ ದೊರೆಯಾಗಿದ್ದನು. ಅವನು ಹೇಡಿಯೂ ವಿಷಯಾಸಕ್ತನೂ ಆಗಿದ್ದನು. ಯೌವನದಲ್ಲಿ ಒಮ್ಮೆ ದುಡುಕಿ ಮಾಧವನೆಂಬ ಬ್ರಾಹ್ಮಣ ಸೋದರನ ಪತ್ನಿಯನ್ನು ತನ್ನ ಅತಃಪುರಕ್ಕೆ ಸೇರಿಸಿ ಕೊಂಡಿದ್ದನು. ತನಗಾದ ಅನ್ಯಾಯವನ್ನು ಮಾಧವನು ಮರೆಯಲಿಲ್ಲ. ಅವನು ಕರ್ಣನಿಗೆ ಹೊಂದುಕೊಂಡು ಅವನ ಮಂತ್ರಿಯೂ ಆಗಿದ್ದನು. ಆದರೂ ಅಂತರಂಗದಲ್ಲಿ ಕರ್ಣನಮೇಲೆ ಸೇಡುತೀರಿಸಿಕೊಳ್ಳಲು ಹಾತೊರೆ ಯುತ್ತಿದ್ದನು. ವನಮೆಹತ, ರಾಜಪುರೋಹಿತ ಗಂಗೇಶ್ವರ ಬತಾ ಮಹಾರಾಜ್ ಮುಂತಾದ ಸ್ವಾಮಿ ನಿಷ್ಠಸೇವಕರು ಮಾಧವನ ದ್ರೋಹಚಿಂತನೆಯ ಬಗ್ಗೆ ದೊರೆಯನ್ನು ಎಚ್ಚರಿಸುತ್ತಿದ್ದರು. ಆದರೆ ಮಾಧವನ ಕೈಬೊಂಬೆಯಾಗಿದ್ದ ಕರ್ಣನು ಅವರ ಮಾತಿಗೆ ಕಿವಿಗೊಡಲಿಲ್ಲ. ಇದರ ಪರಿಣಾಮವನ್ನು ಅವನು ಅನುಭವಿಸಬೇಕಾಯಿತು.

ಮಾಧಧನು ತನ್ನ ಅತ್ತಿಗೆಗೆ ಆದ ಅನ್ಯಾಯಕ್ಕೆ ಸೇಡು ಬಗೆಯಲು ದೆಹಲಿಯ ಸಿಂಹಾಸನವನ್ನು ಏರಿದ್ದ ಅಲ್ಲಾವುದ್ದೀನನೊಡನೆ ಸಂಚು ನಡೆ ಸಿದನು. ಅನ್ಹಿಲವಾಡದ ಮೇಲೆ ದಾಳಿ ಇಟ್ಟರೆ, ಗುಜರಾತನ್ನು ಅವನಿಗೆ ಸುಲಭವಾಗಿ ವಶಪಡಿಸುವುದಾಗಿ ಪತ್ರ ಬರೆದನು.

ಮೊದಲಿಂದಲೂ ಗುಜರಾತಿನ ಸಂಪತ್ತಿನ ಬಗ್ಗೆ ಕೇಳಿದ್ದ ಅಲ್ಲಾ ವುದ್ದೀನನು. ತನ್ನ ಕೈಲಿ ಅಧಿಕಾರ ಭದ್ರವಾದ ಕೂಡಲೇ ಗುಜರಾತಿನಮೇಲೆ ದೃಷ್ಟಿ ಹೊರಳಿಸಿದನು.

ಅವನು ಗುಜರಾತಿನಮೇಲೆ ದಂಡೆತ್ತಿಹೋಗಲು ಇನ್ನೊಂದು ಕಾರಣವೂ ಇತ್ತು.

ವಾಘೇಲಕರ್ಣನಿಗೆ ಕಮಲಾದೇವಿ ಎಂಬ ಅಸಾಧಾರಣ ರೂಪಯೌವನ ಸಂಪನ್ನೆಯಾದ ಮಡದಿ ಇರುವಳೆಂಬ ಸುದ್ಧಿಯನ್ನು ಕೇಳಿದ್ದ. ಹೇಗಾದರೂ ಮಾಡಿ ಸ್ವರ್ಗಲೋಕದ ಅಪ್ಸರೆಯಂತಿದ್ದ ಕಮಲಾದೇವಿಯನ್ನು ತನ್ನ ಅಂತಃಪುರಕ್ಕೆ ಸೇರಿಕೊಳ್ಳಬೇಕೆಂಬುದೇ ಅಲ್ಲಾವುದ್ಧೀನನ ಆಶಯವಾಗಿತ್ತು.

ಗುಜರಾತಿನ ಮೇಲೆ ತಾನೇ ದಾಳಿ ಇಡಬೇಕೆಂದಿದ್ದರೂ ದೆಹಲಿಯನ್ನು ಬಿಟ್ಟು ಹೊರಡುವುದು ಅಪಾಯಕರವೆಂದು ಅವನು ತನ್ನ ನಂಬುಗೆಯ ದಳಪತಿಗಳಾದ ಉಲುಘ್‌ಖಾನ್ ಮತ್ತು ವಜೀರ ನಜರತ್‌ಖಾನ್‌ರನ್ನು ದೊಡ್ಡದೊಂದು ಸೈನ್ಯದೊಡನೆ ಕಳುಹಿಸಿಕೊಟ್ಟನು.

ಅವರು ಮೊದಲು ಮೇವಾಡವನ್ನು ಮುತ್ತಿದರು. ಮೇವಾಡದ ದೊರೆ ಜಯಸಿಂಹನು ಧೈರ್ಯದಿಂದ ಶತ್ರುಗಳನ್ನು ಎದುರಿಸಿ, ತನ್ನ ರಾಜ್ಯವನ್ನು ಉಳಿಸಿಕೊಂಡನು. ಯವನರು ಅವನ ರಾಜ್ಯದ ತಂಟೆಗೆ ಹೋಗದೆ, ನೇರ ಗುಜರಾತಿನ ಮೇಲೆ ಏರಿ ಹೋದರು. ಅವರು ದಾರಿಯುದ್ದಕ್ಕೂ ಸಿಕ್ಕಿದುದನ್ನು ಕೊಳ್ಳೆಹೊಡೆದು ಬಾಣಸ ನದಿಯನ್ನು ದಾಟಿ ಅನ್ಹಿಲವಾಡದ ಮೇಲೆ ದಾಳಿ ಇಟ್ಟರು.

ಈ ದಾಳಿಯು ಅನಿರೀಕ್ಷಿತವಾಗಿ ಬಂದಿತ್ತು. ಚಿತ್ತೂರಿನ ಸಮರಸಿಂಹನು ಅಲ್ಲಾವುದ್ದೀನನ ಸೈನ್ಯಕ್ಕೆ ಯಾವುದೇ ಪ್ರತಿಭಟನೆ ಇಲ್ಲದೆ ಹಾದು ಹೋಗಲು ಅವಕಾಶ ಕೊಟ್ಟುದರಿಂದಲೇ ನಿರೀಕ್ಷೆಗೆ ಮೊದಲೇ ಯವನರು ಅನ್ಹಿಲವಾಡವನ್ನು ಮುತ್ತಿದ್ದರು.

ಇದಕ್ಕೆ ಮಾಧವನ ದ್ರೋಹ ಕಾರಣವಾಗಿದ್ದಂತೆ, ತನ್ನ ಪತ್ನಿಯ ಅಸಾಧಾರಣ ರೂಪವೂ ಕಾರಣವಾಗಿತ್ತೆಂದು ಕರ್ಣನಿಗೆ ಮಾತ್ರ ತಿಳಿದಿರಲಿಲ್ಲ.

ರಾಣಿ ಕಮಲಾ ದೇವಿಯು ಹೆಸರಿಗೆ ತಕ್ಕಂತೆ ಪ್ರಬುದ್ಧ ಪದ್ಮನಯನೆಯಾಗಿದ್ದಳು. ಅವಳ ಸೌಂದರ್ಯದ ಕೀರ್ತಿ ದೆಹಲಿಯನ್ನು ಮುಟ್ಟುವುದು ಹಾಗಿರಲಿ, ದೇಶ ವಿದೇಶಗಳಿಗೂ ಹಬ್ಬಿತ್ತು. ಅವಳ ಸೌಂದರ್ಯ ಅಂತಹದು. ಅವಳು ಮುವತ್ತರ ಹರೆಯವನ್ನು ಸಮೀಪಿಸಿದ್ದರೂ ಇನ್ನು ಹದಿನೆಂಟರ ತರುಣಿ

ಯಂತೆ ಕಾಣಿಸುತ್ತಿದ್ದಳು. ವಾಸ್ತವವಾಗಿ ಅವಳು ಹದಿನಾರು ವಯಸ್ಸಿನ ಮಗಳ ತಾಯಿಯಾಗಿದ್ದಳು. ದೇವಲ ದೇವಿ, ಕಮಲಾ ದೇವಿಯರನ್ನು ಜತೆಗೆ ನಿಲ್ಲಿಸಿದರೆ ಅವರನ್ನು ತಾಯಿ ಮಗಳೆಂದು ಹೇಳಲು ಸಾಧ್ಯವಿರಲಿಲ್ಲ. ಅವರು ಸಹೋದರಿಯರಂತೆ ಕಾಣುತ್ತಿದ್ದರು. ದೇವಲ ದೇವಿಯು ಇನ್ನೂ ವಿಕಸಿತ ವಾಗಿದಿದ್ದ ಕುಸುಮದಂತೆ ಇದ್ದರೆ, ಚನ್ನಾಗಿ ಅರಳಿದ ಕುಸುಮದ ಸೌಂದರ್ಯ ಕಮಲಾ ದೇವಿಯದು. ಒಂದು ಅನಘ್ರಾಣಿತ ಪುಷ್ಪ ಇನ್ನೊಂದು ತನ್ನ ಮಧುವಿನಿಂದ ದುಂಬಿಗೆ ಅಮಲೇರಿಸಿದ ಪೂರ್ಣ ಪುಲ್ಲ ಪುಷ್ಪ. ಒಬ್ಬಳು ಲತೆಯಂತೆ ಬಳುಕುತ್ತಿದರೆ, ಇನ್ನೊಬ್ಬಳು ಹೂ ಕಾಯಿ ಹಣ್ಣುಗಳಿಂದ ಬಿರಿದಿರುವ ಒಂದು ವೃಕ್ಷ. ಒಬ್ಬಳಲ್ಲಿ ಮುಗ್ಧತೆ ಎದ್ದು ಕಾಣಿಸಿದರೆ, ಇನ್ನೊಬ್ಬಳಲ್ಲಿ ವಿಷಯ ಸುಖಾಭಿಲಾಷೆ ಒಡೆದು ಕಾಣುತ್ತಿತ್ತು. ಒಬ್ಬಳಲ್ಲಿ ದೈವಿಕ ಕಳೆ ಇದ್ದರೆ, ಇನ್ನೊಬ್ಬಳಲ್ಲಿ ಇಂದ್ರಿಯಗಳನ್ನು ಹೊಡೆದೆಬ್ಬಿಸುವ ಚೇತೋಹಾರಿಯಾದ ಆಕರ್ಷಣೆ ಇತ್ತು. ಒಟ್ಟಿನಲ್ಲಿ ವಿಧಾತನು ಆ ತಾಯಿ ಮಕ್ಕಳಲ್ಲಿ ಅಷ್ಟೊಂದು ಭೇದವನ್ನು ಕಲ್ಪಿಸಿದ್ದರೂ, ಇಬ್ಬರೂ ನಂದನದಲ್ಲಿ ಅರಳಿದ ಸೌಂದರ್ಯಲತೆಯ ಎರಡು ಪುಷ್ಪಗಳೆಂಬಂತೆ ಸೃಷ್ಟಿಸಿದ್ದನು.

ಕಮಲಾ ದೇವಿಯದು ಕೆಂದಾವರೆಯ ವೈ ಬಣ್ಣವಾದರೆ, ದೇವಲ ದೇವಿಯದು ಶ್ವೇತ ಪದ್ಮದ ಧವಳಕಾಂತಿ. ಒಬ್ಬಳ ಸೌಂದರ್ಯದಲ್ಲಿ ಮಾದಕತೆ, ಇನ್ನೊಬ್ಬಳ ಸೌಂದರ್ಯದಲ್ಲಿ ಉಪಶಾಂತಿ ಪ್ರಖರವಾಗಿತ್ತು. ರೂಪ, ಗುಣ, ಅಭಿರುಚಿಗಳಲ್ಲೂ ಅದೇ ವ್ಯತ್ಯಾಸವಿತ್ತು. ಕಮಲಾ ದೇವಿಗೆ ಇನ್ನೂ ಭೋಗಾಕಾಂಕ್ಷೆ ಇತ್ತು. ವಿಷಯ ಸುಖಾಭಿಲಾಷಿ ಅವಳು. ಸಾಹಿತ್ಯ ಸಂಗೀತಗಳಲ್ಲಿ ಒಳ್ಳೆ ಅಭಿರುಚಿ. ಸದಾ ಸಂಗೀತ, ನೃತ್ಯ, ಮಧು ಮಹೋತ್ಸವ ನಡೆಯುತ್ತಿರಬೇಕು! ಆಗ ಅವಳ ಚೇತನ ಉಶೃಂಖವಾಗಿ, ದೇಶ ಕಾಲಗಳನ್ನು ಮರೆತು, ರಾಗ-ಭೋಗಗಳ ಸರಸಿಯಲ್ಲಿ ಈಜಾಡುವ ಹಂಸವಾಗುತ್ತದೆ. ಅವುಗಳಿಲ್ಲದೆ ಹೋದರೆ-ಚಂದ್ರನಿಲ್ಲದ ಚಕೋತಿ, ತಂಗದಿರನಿಲ್ಲದ ಕನ್ನೈದಿಲೆ, ಅರುಣ ಕಿರಣವಿಲ್ಲದ ಕಮಲಿನಿಯಂತೆ ನಿಸ್ತೇಜಳಾಗುತ್ತಾಳೆ.

ಆದರೆ ದೇವಲಿ ದೇವಿಯ ಸ್ವಭಾವ ತದ್ವಿರುದ್ಧ. ಅವಳಿಗೆ ಸಾಹಿತ್ಯ ಸಂಗೀತಗಳಲ್ಲಿ ಆಸಕ್ತಿ ಇದ್ದರೂ-ಉದ್ದೀಪನ ಶಕ್ತಿಯ ವಾದ್ಯಗಳಾಗಲೀ, ಗೀತಗಳಾಗಲೀ ಸೇರದು. ಅವಳಿಗೆ ವೀಣೆಯನ್ನು ಕಂಡರೆ-ಪ್ರಾಣ. ಬಿಳಿಯ

ಹೂಗಳನ್ನು, ಬಿಳಿಯವಸ್ತ್ರಗಳನ್ನು ಕಂಡರೆ ಅಷ್ಟೇ ಪ್ರೀತಿ. ಅವಳು ರಾಜ ಪುತ್ರಿಯಾಗಿ ಬೆಳೆದಿದ್ದರೂ, ಸದಾ ಬಿಳುಪು ಉಡುಗೆ ತೊಡುಗೆಯಲ್ಲಿ ಇರುತ್ತಿದ್ದಳು. ತಂದೆ ಕರ್ಣನು ಇಬ್ಬರ ಸೌಂದರ್ಯಾಭಿರುಚಿಗಳನ್ನು ಕಂಡು ತನ್ನಲ್ಲೇ ನಗುತ್ತಿದ್ದನು. ಅವನು ಮಗಳನ್ನು ಮುದ್ದಿಗೆ ದೇವಲ ದೇವಿ ಎಂದು ಕರೆಯದೆ, ಧವಳ ದೇವಿ ಎಂದು ಕರೆಯುತ್ತಿದ್ದನು. ಅವನಿಗೆ ಪ್ರಿಯವಾದ ಇನ್ನೊಂದು ಹೆಸರು ಮಹಾಶ್ವೇತೆ ತನ್ನ ಮಗಳು ಬಾಣ ಕವಿಯ ಮಹಾಶ್ವೇತೆಯಂತೆ ಕೀರ್ತಿ ಶಾಲಿಯಾಗಬೇಕೆಂದೇ ಅವನ ಹಾರೈಕೆ! ಈ ಭಾಗ್ಯವನ್ನು ಈ ಜನ್ಮದಲ್ಲಿ ದೇವಲ ದೇವಿ ಪಡೆದಿರಲಿಲ್ಲ. ವಾಘಲಿಕರ್ಣನು ಹಾರೈಸಿದುದೇ ಒಂದು, ವಿಧಾತನು ಬರೆದಿದ್ದುದೇ ಒಂದು.

## ೧೩

ಮೊದಲಿನಿಂದಲೂ ವಾಘೇಲ ಕರ್ಣನಿಗೆ ದೇವಲ ದೇವಿಯನ್ನು ಯಾದವ ದೊರೆ ರಾಮಚಂದ್ರ ದೇವನ ಮಗ ಶಂಕರ ದೇವನಿಗೆ ಮದುವೆಮಾಡಿ ಕೊಡಬೇಕೆಂಬ ಆಶೆಯಿತ್ತು. ಎಲ್ಲ ರೀತಿಯಲ್ಲಿ ಶಂಕರ ದೇವನು ದೇವಲ ದೇವಿಯ ಕೈ ಹಿಡಿಯಲು ತಕ್ಕವನಾಗಿದ್ದನು. ಅವನು ರಾಮಚಂದ್ರ ದೇವನ ಹಿರಿಯ ಮಗನೂ, ಯುವರಾಜ ಕುಮಾರನೂ ಆಗಿದ್ದನು. ಅವನು ಚಿಕ್ಕವನಾದರೂ ಬುದ್ಧಿ ಶಕ್ತಿಯಲ್ಲೂ, ಧೈರ್ಯ ಸಾಹಸಗಳಲ್ಲೂ ನಾಡಿನ ಕಣ್ಮಣಿಯಾಗಿದ್ದನು. ರಾಮ ದೇವನು ಅವನನ್ನು, ಅವನ ಸಹೋದರ ಭಿಲ್ಲಮನನ್ನೂ ತನ್ನ ಎರಡು ಕಣ್ಣುಗಳೆಂದು ತಿಳಿದಿದ್ದನು. ಅದರಲ್ಲೂ ಶಂಕರ ದೇವನನ್ನು ಕಂಡರೆ ಒಂದು ಪಾಲು ಪ್ರೀತಿ ಹೆಚ್ಚಾಗಿತ್ತು. ಅಂತಲೇ ಅವನನ್ನು ಬಾಲಕನಿರುವಾಗಲೇ ಯುವರಾಜ ಪದವಿಗೇರಿಸಿದ್ದನು. ಅವನು ಸಣ್ಣವನಿರುವಾಗಲೇ ರಾಜ್ಯಾಡಳಿತದಲ್ಲಿ ತರಪೇತಿ ಕೊಟ್ಟಿದ್ದನು. ಈಗ ಅವನು ಯುವಕನಾಗಿದ್ದುದರಿಂದ, ಅವನಿಗೆ ವಿವಾಹ ಮಾಡಲು ಉತ್ಸುಕನಾಗಿದ್ದನು.

ಮಗನು ವಿವಾಹ ವಯಸ್ಕನಾದುದನ್ನು ಕಂಡು ರಾಮದೇವನು ನಾನಾ ದೇಶಗಳ ರಾಜ ಪುತ್ರಿಯರ ಭಾವ ಚಿತ್ರಗಳನ್ನು ತರಿಸಿಕೊಂಡನು. ಅವರಲ್ಲಿ ಅನುರೂಪಳಾದ ಕನ್ಯೆಯನ್ನು ನೋಡಿ ಮಗನಿಗೆ ಮದುವೆ ಮಾಡಬೇಕೆಂಬುದೇ ಅವನ ಅಭೀಷ್ಟವಾಗಿತ್ತು. ಹೀಗೆ ಬಂದ ಅನೇಕ ಕನ್ಯೆಯರಲ್ಲಿ ದೇವಲ ದೇವಿಯೂ ಒಬ್ಬಳು. ಅವಳ ಭಾವ ಚಿತ್ರವನ್ನು ನೋಡಿದ ಕೂಡಲೇ ರಾಮ ಚಂದ್ರ ದೇವನ ಮನಸ್ಸನ್ನು ಸೆರೆಹಿಡಿದಳು. ಅವಳಾದರೆ ಆಗಬಹುದು–ಕುಲ ಗೋತ್ರಗಳನ್ನು ನೋಡುವಂತೆ ಇಲ್ಲ–ಎಂದು ಮೆಚ್ಚಿದ.

ಶಂಕರ ದೇವನಂತೂ ಆ ಭಾವ ಚಿತ್ರವನ್ನು ನೋಡಿದ ಕೂಡಲೇ ಅವ ಳಲ್ಲಿ ಅನುರಕ್ತನಾಗಿದ್ದನು. ಅದು ಪ್ರಥಮ ನೋಟದ ಪ್ರಣಯ. ದೇವಲ ದೇವಿಯು ಗುಜರಾತಿನ ಕರ್ಣರಾಯನ ಒಬ್ಬಳೇ ಮಗಳೆನ್ನುವುದಕ್ಕಿಂತಲೂ, ಭಾವ ಚಿತ್ರದಲ್ಲಿ ಅವಳ ಮುಖ ಭಾವ ಸರಳ ಸೌಂದರ್ಯ ಅವನಿಗೆ ಅಪೂರ್ವ ವೆನಿಸಿದವು. ಅವಳನ್ನು ನೋಡಿ ಮಹಾದೇವ ನೆದುರಿಗೆ ಕುಳಿತು ಧ್ಯಾನಮಗ್ನೆ ಯಾಗಿದ್ದ ಮಹಾಶ್ವೇತೆಯ ಚಿತ್ರಕಣ್ಣು ಮುಂದೆ ಸುಳಿಯಿತು. ಅವನ ಬಗೆ ಗಣ್ಣು ಭಾವನಾಲೋಕದಲ್ಲಿ ವಿಹರಿಸಿತು. ಯಾವುದೋ ಸಮ್ಮೋಹಕ ಶಕ್ತಿ ಯೊಂದು ಅವಳ ಬಳಿಗೆ ಎಳೆಯುತ್ತಿರುವಂತೆ ಭಾಸವಾಗುತ್ತಿತ್ತು. ಅವಳನ್ನು ಮದುವೆಯಾಗಬೇಕು. ಇಲ್ಲದೆ ಇದ್ದರೆ–ಈ ಜನ್ಮದಲ್ಲಿ ತಾನು ಯಾರನ್ನೂ ಮದುವೆಯಾಗ ಬಾರದು–ಎಂಬ ನಿಶ್ಚಯ ಉಂಟಾಯಿತು.

ಇದನ್ನು ಪ್ರಕಟಿಸದೆ ಇದ್ದರೂ, ಮಗನ ಅಭೀಷ್ಟವೇನೆಂಬುದನ್ನು ಸೂಕ್ಷ್ಮವಾಗಿ ಅರಿತಿದ್ದ ರಾಮದೇವನು ಕೂಡಲೇ ರಾಜಪುರೋಹಿತರನ್ನು ಕರೆಸಿ, ಅವರ ಜತೆಯಲ್ಲಿ ಗುಜರಾತಿನ ವಾಘೇಲ ಕರ್ಣರಾಯನಿಗೆ ಮಂಗಳ ವಸ್ತು ಗಳನ್ನು ಕಳುಹಿಸಿ ಕೊಟ್ಟನು–ಶಂಕರ ದೇವನಿಗೆ ತಮ್ಮ ಮಗಳನ್ನು ವಿವಾಹ ಮಾಡಿಕೊಟ್ಟು ತಮ್ಮ ವಂಶವನ್ನು ಬೆಳಗಬೇಕೆಂದು ಬಿನ್ನವಿಸಿಕೊಳ್ಳಲು ತಿಳಿಸಿ ದನು. ಉಚಿತ ಉಡಗೊರೆಯೊಡನೆ ಪುರೋಹಿತರು ಹೊರಟು ಅನ್ಹಿಲ ವಾಡವನ್ನು ತಲುಪಿದರು.

ಕನ್ಯಾರ್ಥಿಯಾಗಿ ಬಂದ ರಾಮ ದೇವನ ಕಡೆಯ ರಾಜಪುರೋಹಿತರನ್ನು ದೊರೆ ಕರ್ಣರಾಯನು ವಿಶ್ವಾಸದಿಂದ ಬರ ಮಾಡಿಕೊಂಡು, ಉಚಿತ ರೀತಿ ಯಲ್ಲಿ ಸತ್ಕರಿಸಿದನು. ಪುರೋಹಿತರು ತಾವು ತಂದಿದ್ದ ಮಂಗಳ ದ್ರವ್ಯಗಳನ್ನೂ

ತರಿಸಿದ್ದ ಬೆಲೆ ಬಾಳುವ ವಡವೆ ವಸ್ತುಗಳನ್ನೂ ಉಡುಗರೆಯಾಗಿ ದೊರೆಗೆ ಒಪ್ಪಿಸಿದರು. ತಾವು ಜತೆಯಲ್ಲಿ ತಂದಿದ್ದ ರಾಮದೇವರಾಯನ ಪತ್ರವನ್ನು ಕರ್ಣನ ಕೈಗೆ ಕೊಟ್ಟರು. ಅದನ್ನು ಕರ್ಣನು ಓದಿಕೊಂಡು ಮುಗುಳು ನಕ್ಕನು.

ಆ ಪತ್ರದಲ್ಲಿ ರಾಮದೇವರಾಯನು ಹೀಗೆ ಬರೆದಿದ್ದನು.

ಸೂರ್ಯವಂಶೋದ್ಭವರೂ, ವಾಘೇಲ ಕುಲತಿಲಕರೂ ವೀರ ಪ್ರತಾಪಶಾ ಜಾಧಿ ರಾಜ, ತ್ರಿಭುವನ ಗಂಡ ಕರ್ಣರಾಯರ ಸನ್ನಿಧಿಗೆ—

ದೇವಗಿರಿಯ ಯಾದವ ಕುಲೋತ್ಪನ್ನರಾದ ರಾಮಚಂದ್ರ ದೇವನ ಅನಂತಾನಂತ ವಂದನೆಗಳು.

ಈಗ ಈ ಪತ್ರ ಬರೆಯುವುದೇನೆಂದರೆ, ಇದುವರೆಗೆ ನಮ್ಮೆರಡು ಕುಲ ಗಳಿಗೂ ಕಾರಣಾಂತರಗಳಿಂದ ವೈರವು ಬೆಳೆದು ಬಂದಿದೆ. ನಾವು ಪರಸ್ಪರ ಮಿತ್ರರಾಗಿರಲು ಬಹು ಕಾಲದಿಂದ ಪ್ರಯತ್ನಿಸುತ್ತಿದ್ದರೂ ವಿಧಿಯ ಚಿತ್ರಕ್ಕೆ ಅದು ಬಂದಿರಲಿಲ್ಲ. ಇಂದು ದೈವಾನುಗ್ರಹದಿಂದ ನಮ್ಮೆರಡು ರಾಷ್ಟ್ರಗಳಿಗೆ ಚಿರಂತರವಾದ ಸ್ನೇಹ ಬಾಂಧವ್ಯ ಉಂಟಾಗುವ ಸದವಕಾಶವು ಬಂದಿದೆ. ತಮಗೆ ವಿವಾಹ ಯೋಗ್ಯಳಾದ ಕನ್ಯಾರತ್ನವೊಂದು ಇರುವುದಾಗಿ ಕೇಳಿದ್ದೇನೆ. ಸತ್ಕುಲ ಪ್ರಸೂತಳೂ, ಸರ್ವಲಕ್ಷಣ ಸಂಪನ್ನೆಯೂ ಆಗಿರುವ ನಿಮ್ಮ ಪುತ್ರಿ ಯನ್ನು ನಮ್ಮ ಯುವರಾಜ ಕುಮಾರ ಶಂಕರ ದೇವನಿಗೆ ತಂದು ಕೊಳ್ಳಬೇಕೆಂಬ ಮಹದಾಸೆ ಇದೆ. ಈ ಸಂಬಂಧದ ಬಗ್ಗೆ ನಾನು ತುಂಬಾ ಉತ್ಸಕನಾಗಿದ್ದೇನೆ. ಇದರಿಂದ ನಮ್ಮೆರಡು ವಂಶಗಳಿಗೆ ಭದ್ರವಾದ ಸ್ನೇಹ ಸೌಹಾರ್ದಗಳ ಸೇತುವೆ ಯನ್ನು ನಿರ್ಮಿಸಿದಂತೆ ಆಗುವುದೆಂದು ನಂಬಿದ್ದೇನೆ. ತಾವು ದೊಡ್ಡ ಮನಸ್ಸು ಮಾಡಿ ನಿಮ್ಮ ಕನ್ಯಾರತ್ನವನ್ನು ನಮ್ಮ ಕುಮಾರನಿಗೆ ಕೊಟ್ಟು ಆ ಮೂಲಕ ಎರಡು ರಾಜ ಮನೆತನಗಳ ಮಧುರ ಬಾಂಧವ್ಯಕ್ಕೆ ಬುನಾದಿ ಹಾಕುವಿರೆಂದು ನಂಬಿದ್ದೇನೆ. ಈ ಸಂಬಂಧ ತಮಗೆ ಒಪ್ಪಿಗೆಯಾದರೆ, ಈ ಬಗ್ಗೆ ನಮ್ಮ ಕುಲ ಪುರೋಹಿತರೊಡನೆ ಮಾತನಾಡಿ, ಉಳಿದ ವಿಷಯಗಳನ್ನು ನಿರ್ಧರಿಸಲು ನಮ್ಮ ಒಪ್ಪಿಗೆ ಇದೆ.

ಇಂತು ತಮ್ಮ ಸ್ನೇಹಾಕಾಂಕ್ಷಿ,
ರಾಮಚಂದ್ರದೇವ.

ಈ ಪತ್ರದ ಸಂದೇಶದಿಂದ ಕರ್ಣನಿಗೆ ಮಹದಾನಂದವಾಯಿತು. ತನ್ನ ಬಹು ದಿನಗಳ ಹಾರೈಕೆ ಇಂದು ಸಫಲವಾಯಿತೆಂದು ಹರ್ಷಿಸಿದನು. ಅವನು ಪುರೋಹಿತರನ್ನು ಸರಿಯಾದ ರೀತಿಯಲ್ಲಿ ಉಪಚರಿಸಿ ಇಳಿದುಕೊಳ್ಳಲು ರಾಜೋಚಿತವಾದ ಬಿಡಾರವನ್ನು ಕಲ್ಪಿಸಿಕೊಟ್ಟನು. ಈ ಸುದ್ಧಿಯನ್ನು ಪ್ರಿಯ ಪತ್ನಿಗೆ ತಿಳಿಸಲು ಉತ್ಸಕನಾಗಿ, ಅವಳ ಅಂತಃ ಪುರಕ್ಕೆ ಬಂದನು.

ನಮ್ಮ ದೇವಲ ದೇವಿಗೆ ಇದುವರೆಗೆ ಬಂದಿರುವ ಜಾತಕಗಳಲ್ಲಿ ಇದು ಅತ್ಯಂತ ಪ್ರಶಸ್ತವಾಗಿದೆ ಮಾತ್ರವಲ್ಲ ಕುಲಗೋತ್ರಗಳಲ್ಲೂ ನಮ್ಮ ವಂಶದ ಘನತೆ ಗೌರವಗಳಿಗೆ ತಕ್ಕಂತೆ ಇದೆ. ನಾನು ಶಂಕರ ದೇವನು ಎಲ್ಲ ರೀತಿಯಲ್ಲೂ ದೇವಲ ದೇವಿಗೆ ಅನುರೂಪನಾದ ವರನೆಂದು ಕೇಳಿದ್ದೇನೆ. ಇಂತಹವನಿಗೆ ಮಗಳನ್ನು ಧಾರೆ ಎರೆದು ಕೊಡದೆ ಬೇರೆಯಾರಾದರೂ ಅಜ್ಞಾತ ಕುಲದವನಿಗೆ ಕೊಡಬೇಕೆಂದಿರುವೆಯಾ ಹೇಗೆ?"

"ನಮ್ಮ ಮಗುವಿಗೆ ಈ ಜನ್ಮದಲ್ಲಿ ಮದುವೆ ಬರೆಯದೆ ಇದ್ದರೂ ಚಿಂತೆಯಿಲ್ಲ. ಆ ಗೊಲ್ಲರ ಯುವಕನಿಗೆ ನಾನು ಮಗಳನ್ನು ಕೊಡುವುದಿಲ್ಲ. ಹೇಗೂ ಅವಳು ಕ್ಷತ್ರಿಯೋಚಿತ ವಿದ್ಯೆಗಳನ್ನೂ ಕಲಿತಿದ್ದಾಳೆ. ನಿಮ್ಮ ನಂತರ ಸಿಂಹಾಸನವನ್ನೇರಿ ರಾಜ್ಯವಾಳಲಿ ಬಿಡಿ."

"ಹಾಗಾದರೆ ನಿನಗೆ ಈ ಸಂಬಂಧವು ಇಷ್ಟವಿಲ್ಲವೆ?"

"ಅದನ್ನು ಹೊಸದಾಗಿ ತಿಳಿಸಿಕೊಡಬೇಕೆ? ನಿಮಗೆ ದೇವಲ ದೇವಿಯ ವಿಷಯದಲ್ಲಿ ನಿಜವಾದ ಪ್ರೀತಿ ಇದ್ದಿದ್ದರೆ, ಸಾಮ್ರಾಜ್ಞಿಯಾಗಬೇಕಾಗಿರುವ ಅವಳನ್ನು ಅಜ್ಞಾತ ಕುಲಗೋತ್ರೋದ್ಭವನಿಗೆ ಧಾರೆ ಎರೆಯಲು ಇಷ್ಟು ಉತ್ಸಕರಾಗುತ್ತಿರಲಿಲ್ಲ!" ಎಂದಳು ಅಸಹನೆಯಿಂದ ಕುದಿಯುತ್ತಾ.

"ದೇವಿ, ನನ್ನ ಮಗಳ ಮೇಲೆ ನನಗೆ ಪ್ರೇಮವಿಲ್ಲವೆ? ಅವಳು ನಿನ್ನ ಮಗಳು ಎಂತೋ ಅಂತೇ ನನ್ನ ಮಗಳು ಎಂಬುದನ್ನು ನೀನು ಮರೆಯಬೇಡ. ಈ ವಿವಾಹದಿಂದ ಅವಳಿಗೆ ಕೇಡಾಗುವುದಿದ್ದರೆ ನಾನು ಈ ಪ್ರಸ್ತಾಪವನ್ನು ಮಾಡುತ್ತಿದ್ದೆನೆ?"

"ನಿಮಗೆ ನಿಮ್ಮ ಮಗಳ ಮೇಲೆ ಅಭಿಮಾನವಿದ್ದಿದ್ದರೆ ನೀವು ಅವಳ ಭವಿಷ್ಯವನ್ನು ಹಾಳು ಮಾಡಲು ಏಕೆ ಇಷ್ಟು ಉತ್ಸಕರಾಗುತ್ತಿದ್ದಿರಿ?"

"ದೇವಲದೇವಿಯ ಹಿತಚಿಂತನೆ ನಿನಗೆ ಸೇರಿರುವಷ್ಟೇ ನನಗೂ ಸೇರಿದೆ ಎಂಬುದನ್ನು ನೀನು ಮರೆಯಬಾರದು. ಮಗಳಿಗೆ ಪ್ರಾಪ್ತ ವಯಸ್ಸಿನಲ್ಲಿ ವಿವಾಹ ಮಾಡುವುದು ತಂದೆ ತಾಯಿಗಳ ಕರ್ತವ್ಯ ಬಂದ ಎಲ್ಲವರಗಳಲ್ಲಿ ಯಾವುದಾದರೊಂದು ಕುಂದು ತೆಗೆಯುತ್ತ ಬಂದರೆ ದೇವಲ ದೇವಿಗೆ ಈ ಜನ್ಮದಲ್ಲಿ ಮದುವೆಯಾಗದೆ, ಕನ್ಯೆಯಾಗಿಯೇ ಉಳಿಯಬೇಕಾದೀತು. ಚನ್ನಾಗಿ ಆಲೋಚಿಸು !"

"ಆಲೋಚಿಸಿಯೇ, ಈ ಮಾತು ಹೇಳುತ್ತಿರುವುದು. ನಮ್ಮ ಮಗುವಿಗೆ ಇನ್ನೂ ಹದಿನಾರು ವರ್ಷ ತುಂಬಿಲ್ಲ-ಆಗಲೇ ವಿವಾಹದ ಮಾತು ಎತ್ತುತ್ತಿದ್ದೀರಿ ! ಅವಳನ್ನು ಮದುವೆ ಮಾಡಿ ಮನೆಯಿಂದ ಹೊರಗಟ್ಟಬೇಕೆಂದು ಯೋಚಿಸಿದ್ದೀರಾ ಹೇಗೆ ? ಮದುವೆ ಎಂದರೆ ಏನೆಂದು ತಿಳಿಯದ ಆ ಮಗುವನ್ನು ಯಾವನೋ ಕಂಡು ಕೇಳರಿಯದ ರಾಜಪುತ್ರನಿಗೆ ವಧುವಾಗಿ ಅರ್ಪಿಸುವುದು ನನಗೆ ಇಷ್ಟವಿಲ್ಲ. ನೀವು ನನ್ನ ಬಗ್ಗೆ ಏನಾದರೂ ತಿಳಿಯಿರಿ. ದೇವಲ ದೇವಿಯು ತಾನಾಗಿ ಒಲಿಯುವ ಪುರುಷನಿಗೆ ಅವಳನ್ನು ವಿವಾಹ ಮಾಡಿ ಕೊಡುವೆನೇ ಹೊರತು, ಬಲಾತ್ಕಾರದ ವಿವಾಹಕ್ಕೆ ನಾನು ಜೀವದಿಂದ ಇರುವವರೆಗೆ ಸಮ್ಮತಿಸಲಾರೆ ! ಈ ಮಾತು ಖಂಡಿತ !"

"ಪ್ರಿಯ ಕಮಲಾದೇವಿ, ನೀನು ಮೊದಲಿಂದಲೂ ದೇವಲ ದೇವಿಯ ವಿವಾಹದ ಮಾತು ಬಂದಾಗಲೆಲ್ಲಾ ಇದೇ ಮಾತು ಹೇಳುತ್ತಾ ಬಂದಿರುವೆ. ಈ ವಿಷಯದಲ್ಲಿ ನೀನು ತೀರ ನಿಷ್ಠುರಳಾಗಿ ವರ್ತಿಸುತ್ತಿದ್ದಿ. ನಮ್ಮ ಮಗುವಿನ ಕೈಯನ್ನು ಹಿಡಿಯಲು ರಾಜಪುತ್ರಸ್ಥಾನದ ಅನೇಕ ರಾಜಪುತ್ರರು ಮೇಲೆ ಬಿದ್ದು ಬಂದರೂ ನೀನು ಅವರನ್ನೆಲ್ಲಾ ತಿರಸ್ಕರಿಸುತ್ತಾ ಬಂದಿರುವೆ. ಮೇವಾಡ, ಅಂಬೇರ್, ಜೈಸಲ್ಮೇರ್ (?) ಮುಂತಾದ ರಾಜಪುತ್ರರಿಗೆ ಮಗಳನ್ನು ಕೊಡಲು ನಿರಾಕರಿಸಿರುವೆ. ಅವರು ಸಣ್ಣ ಪುಟ್ಟ ದೊರೆಗಳೆಂದು ತಿರಸ್ಕರಿಸಿದೆ. ಇಂದು ದೇವಗಿರಿಯ ಯಾದವರು ಕೈ ಹಿಡಿಯಲು ಬಂದಾಗ ಅವರಿಗೆ ಕುಲವಿಲ್ಲವೆಂದು ಆಕ್ಷೇಪಿಸುತ್ತಿದ್ದಿ. ನೀನು ಕೀರ್ತಿ, ಅಧಿಕಾರ, ಶ್ರೀಮಂತರ ವಂಶಗಳ ಹೆಸರಿನಲ್ಲಿ ದಕ್ಷಿಣಾ ಪಥದ ಪಾಂಡ್ಯ, ಕೇರಳ, ಹೊಯ್ಸಳ, ಕಾಕತೀಯರನ್ನೂ ತಿರಸ್ಕರಿಸಿರುವುದಲ್ಲದೆ. ಲಾಟ, ಮಾಂಳವರನ್ನೂ, ಅಪಮಾನಗೊಳಿಸಿದ್ದಿ-ನೀನು ನಿನ್ನ ಮಗ

ಳನ್ನು ಯವನರಿಗೆ ಧಾರೆ ಎರೆದು ಕೊಡಬೇಕೆಂದಿರುವೆಯೋ ಏನೋ, ಯಾರಿಗೆ ಗೊತ್ತು ?" ತಿರಸ್ಕಾರದಿಂದ ಕರ್ಣನು ಹೇಳಿದ.

"ಹೌದು, ನಾನು ನನ್ನ ಮಗಳನ್ನು ದಿಲ್ಲಿ ಸುಲ್ತಾನನಿಗೇ ಕೊಡಲು ಯೋಚಿಸಿರುವುದು ! ಈಗಲಾದರೂ ನಿಮಗೆ ತೃಪ್ತಿಯಾಯಿತೆ ?" ಎಂದಳು ಕಮಲಾದೇವಿ, ವ್ಯಂಗ್ಯ ತುಳುಕುವ ದನಿಯಲ್ಲಿ.

"ನಿನ್ನ ಮಗಳನ್ನು ಯವನರಿಗೆ ಕೊಡುವ ಬದಲು ಭಾವಿಗೆ ನೂಕುವುದು ಲೇಸು ! "

"ನಾನು ಏಕೆ ಬಾವಿಗೆ ನೂಕಲಿ ? ಆ ಮಗುವನ್ನು ಕುಲಗೋತ್ರಗಳಿಲ್ಲದ ಆ ಯಾವವರಿಗೆ ಮದುವೆ ಮಾಡಿ ಕೊಟ್ಟ ಸಾವಿಗಿಂತ ಘೋರವಾದ ಶಿಕ್ಷೆಯನ್ನು ವಿಧಿಸಿರಿ ! ನಾನು ಅಡ್ಡ ಬರುವುದಿಲ್ಲ. ಅವಳು ಹೇಗೂ ನಿಮ್ಮ ಮಗಳು, ಏನಾದರೂ ಮಾಡಿಕೊಳ್ಳಿ ! ಇನ್ನು ಮೇಲೆ ಅವಳ ಮದುವೆಯ ವಿಷಯಕ್ಕೆ ಬಂದರೆ ಸೋಮನಾಥನ ಆಣೆ ಇದೆ !" ಎಂದು ಹೇಳಿ ಪೆಟ್ಟುತಿಂದ ಸರ್ಪಿಣಿಯಂತೆ ಬುಸುಗುಟ್ಟುತ್ತಾ ಅಲ್ಲಿ ನಿಲ್ಲದೆ ಹೊರಟು ಹೋದಳು.

ಕರ್ಣನಿಗೆ ಕಮಲಾದೇವಿಯ ಮಾತುಕತೆಯಿಂದ ಮನಸ್ಸಿಗೆ ಬಹಳ ವ್ಯಥೆಯಾಯಿತು. ಮೊದಲಿನಿಂದಲೂ ದೇವಲ ದೇವಿಯ ಮದುವೆಯ ವಿಷಯದಲ್ಲಿ ಅವರಿಬ್ಬರಿಗೂ ಭಿನ್ನಾಭಿಪ್ರಾಯವಿತ್ತು. ಕರ್ಣನು ಅವಳನ್ನು ಸತ್ಕುಲ ಪ್ರಸೂತನಾದ ಒಬ್ಬ ರಾಜಪುತ್ರನಿಗೆ ಧಾರೆಎರೆಯಬೇಕೆಂದು ಆಶಿಸಿದ್ದರೆ ಕಮಲಾ ದೇವಿಯು ಸಾಮ್ರಾಟನಿಗಲ್ಲದೆ ಅವಳನ್ನು ಬೇರೆ ಯಾರಿಗೂ ಮದುವೆ ಮಾಡಲು ಸಿದ್ಧಳಿರಲಿಲ್ಲ. ಈಗ ಭಾರತದಲ್ಲಿ ಇದ್ದ ಹಿಂದೂ ರಾಜ್ಯಗಳು ಅವನತಿ ಹೊಂದಿ, ದಿಲ್ಲೀಶ್ವರರೊಬ್ಬರೇ ನಿಜವಾದ ಸಾಮ್ರಾಟರಾಗಿದ್ದರು. ಎಂದ ಮೇಲೆ ಕಮಲಾ ದೇವಿಯ ಅಧಿಕಾರ ಮೋಹದಿಂದ ದೇವಲ ದೇವಿಯನ್ನು ಯವನನಾದ ಅಲ್ಲಾವುದ್ದೀನನಿಗೆ ಕೊಟ್ಟು ಅವಳ ಸುಕೋಮಲ ಬಾಳಿಗೆ ಕುಠಾರವಾಗಲು ನಿಶ್ಚಯಿಸಿರುವಳೇ ಎಂದು ಹಲವು ಬಾರಿ ಕರ್ಣನು ಶಂಕಿಸಿದ್ದ. ಇಂದು ವಿನೋದಕ್ಕೆ ಕಮಲಾದೇವಿ ಹೇಳಿದ್ದ ಮಾತಿನಲ್ಲಿ ಈ ಸಂಶಯಕ್ಕೆ ಪುಷ್ಟಿ ದೊರೆತಿತ್ತು. ವಿಧಿಯ ಇಚ್ಛೆ ಹಾಗಿದ್ದರೆ ಅದನ್ನು ತಪ್ಪಿಸುವವರು ಯಾರು ? ಎಂದುಕೊಂಡು ಕರ್ಣನು ಭಾರವಾದ ನಿಟ್ಟುಸಿರುಬಿಟ್ಟನು.

ವಾಘೇಲ ಕರ್ಣನಿಗೆ ಕಮಲಾದೇವಿಯ ವರ್ತನೆ ಚಿಂತೆಗೆ ಕಾರಣವಾ

ವಾಗಿತ್ತು. ಅವನು ಕಮಲಾದೇವಿಯನ್ನು ಮದುವೆಯಾದುದೇ ಅವಳ ಸೌಂದರ್ಯಕ್ಕೆ ಮನಸೋತು. ಅವಳ ಮೋಹಕ ರೂಪಕ್ಕೆ-ಅದಕ್ಕಿಂತ ಮೋಹಕವಾದ ನಗುವಿಗೆ ಅವನು ಮಾರುಹೋಗಿ ಅವಳನ್ನು ಮದುವೆಯಾಗಿ ಪಟ್ಟದ ರಾಣಿಯಾಗಿ ಮಾಡಿಕೊಂಡಿದ್ದನು. ಆದರೆ ಅವನಿಗೆ ಆ ರೂಪದ ಹಿಂದೆ ಆ ನಗುವಿನ ಹಿಂದೆ ಎಂತಹ ಭಯಂಕರ ಸರ್ಪ ಇದೆ ಎಂದು ತಿಳಿದಿರಲಿಲ್ಲ. ಕಮಲಾದೇವಿಗೆ ತನ್ನ ಸೌಂದರ್ಯದ ಬಗ್ಗೆ ಹೆಮ್ಮೆ ಇತ್ತು. ಅದನ್ನು ಉಪಯೋಗಿಸಿಕೊಂಡು ಕರ್ಣನನ್ನು ಹೇಗೆ ಕುಣಿಸುವುದೆಂದು ತಿಳಿದಿತ್ತು. ಅವಳಲ್ಲಿ ವಿಷಯಾಸಕ್ತಿ ಒಂದು ಪಾಲಾದರೆ ಅಧಿಕಾರ ಲಾಲಸೆ ಹತ್ತು ಪಾಲು ಇತ್ತು. ಅವಳಿಗೆ ತನ್ನ ಗಂಡನನ್ನು ಕೈಗೊಂಬೆಯಾಗಿ ಮಾಡಿಕೊಂಡು, ತಾನೇ ಗುಜರಾತಿನ ಸಾಮ್ರಾಜ್ಞಿಯಾಗಿ ಮೆರೆಯುವ ಆಸೆ ಇತ್ತು. ಅಂತಲೇ ಅವಳು ಕರ್ಣರಾಯನನ್ನು ತನ್ನ ಹಾವ ಭಾವ ವಿಲಾಸಗಳಲ್ಲೂ, ಸನ್ಮೋಹಕ ಮುಗುಳು ನಗೆಯಲ್ಲೂ, ಸೆರೆಹಿಡಿದು ಅವನನ್ನು ತನ್ನ ಇಚ್ಛೆ ಇದ್ದಂತೆ ಕುಣಿಸುತ್ತಿದ್ದಳು. ತನ್ನ ಪತ್ನಿಯು ಹೇಳಿದಂತೆ ಕುಣಿಯುವುದರಲ್ಲಿ ಅವನಿಗೂ ಸಂತೋಷವಿತ್ತು. ಕರ್ಣನು ರಾಜ್ಯಾಡಳಿತದ ಸಮಸ್ತ ಹೊಣೆಗಾರಿಕೆಯನ್ನೂ ತನ್ನ ಪತ್ನಿಗೆ ಒಪ್ಪಿಸಿ ಅವಳ ದಾಸಾನುದಾಸನಾಗಿ ಸದಾ ವಿಲಾಸ ಭೋಗಗಳಲ್ಲಿ ಮೈಮರೆತು ಇರುತ್ತಿದ್ದನು.

ಕಮಲಾದೇವಿಯು ಮಾಧವನ ಸಹಾಯದಿಂದ ತಾನೇ ರಾಣಿಯಂತೆ ಆಳುತ್ತಿದ್ದಳು. ಅವಳಿಗೆ ಅಧಿಕಾರ, ಶ್ರೀಮಂತಿಕೆ, ವಿಲಾಸ ಭೋಗಗಳಲ್ಲಿ ತನ್ನ ಗತಜೀವನ ಮರೆತುಹೋಗಿತ್ತು. ಅದನ್ನು ಅವಳು ಉದ್ದಿಶ್ಯಪೂರ್ವಕವಾಗಿಯೇ ಮರೆತಿದ್ದಳು. ಅದು ಅವಳ ಪಾಲಿಗೆ ಒಂದು ದುಸ್ವಪ್ನ! ಅಂತಲೇ ಅವಳು ಅದನ್ನು ಮರೆತಿದ್ದಳು.

ಕಮಲಾದೇವಿಯ ತಂದೆ ಒಬ್ಬ ಆಚಾರನಿಷ್ಠ ಬ್ರಾಹ್ಮಣ. ಅವನು ಸೋಮನಾಥ ದೇವಾಲಯದಲ್ಲಿ ಒಬ್ಬ ಅರ್ಚಕನಾಗಿದ್ದನು. ಒಮ್ಮೆ ಕರ್ಣರಾಯನು ಸೋಮೇಶ್ವರನ ಸಂದರ್ಶನಕ್ಕೆ ಬಂದಿದ್ದಾಗ ಅವಳ ರೂಪ ಸಂಪತ್ತಿಗೆ ಮಾರುಹೋದನು. ಅವಳು ಅಲ್ಲಿನ ಪೂಜಾರಿಯ ಮಗಳೆಂದು ತಿಳಿದಾಗ ಸಂತೋಷವೇ ಆಯಿತು. ಆದರೆ ಅವಳು ವಿವಾಹಿತೆ. ಕೇಶವ ಸೋಮಯಾಜಿ

ಎಂಬ ಶ್ರೋತ್ರಿಯ ಪತ್ನಿ ಎಂಬುದನ್ನು ತಿಳಿದಾಗ ಅವನಿಗೆ ನಿರಾಶೆಯಾಯಿತು. ಆದರೂ ಅವನು ಧೃತಿಗೆಡದೆ, ರಾಜಧಾನಿಗೆ ಹೋದಕೂಡಲೇ ತನ್ನ ಅಪ್ತಮಿತ್ರರೊಡನೆ ಸಮಾಲೋಚಿಸಿ ಒಂದು ಕಾರಾಸ್ಥಾನ ಸಿದ್ಧಗೊಳಿಸಿದನು.

ಅದರಂತೆ, ಒಂದು ದಿನ ಕಮಲಾದೇವಿಯು ತನ್ನ ತಂದೆಯ ಮನೆಯಿಂದ ಕಣ್ಮರೆಯಾದಳು. ಅವಳನ್ನು ಯಾರು ಎಷ್ಟು ಹುಡುಕಿದರೂ ಸಿಗಲಿಲ್ಲ. ಕಡೆಗೆ ತಂದೆಯು ಮಗಳ ಆಸೆಯನ್ನು ಬಿಟ್ಟನು. ಅದಕ್ಕೆ ತಕ್ಕಂತೆ ಪ್ರಭಾಸದ ಬಳಿಯ ಒಂದು ಕೊಳದಲ್ಲಿ ಒಂದು ಹೆಂಗಸಿನ ಶವ ಸಿಕ್ಕಿತು. ಬಹುಕಾಲದ ಮೇಲೆ ಅದನ್ನು ಮೇಲೆತ್ತಿದುದರಿಂದ ಅದು ಕೊಳೆತು ಹೋಗಿ, ಗುರುತು ಸಿಗದಂತೆ ಆಗಿತ್ತು. ಅದೇ ಕಮಲಾದೇವಿಯ ಶವವಿರಬೇಕೆಂದು ಎಲ್ಲರೂ ತರ್ಕಿಸಿ, ಅವಳ ನೆನಪನ್ನು ಮರೆತರು.

ಆದರೆ ಅವಳ ಗಂಡ ಕೇಶವ ಸೋಮಯಾಜಿಗೆ ಮಾತ್ರ ಈ ವಿಷಯದಲ್ಲಿ ನಂಬಿಕೆ ಹುಟ್ಟಲಿಲ್ಲ. ಅವನಿಗೆ ತನ್ನ ಪ್ರಿಯಪತ್ನಿ ಕಮಲಾದೇವಿಯು ಆತ್ಮಹತ್ಯಮಾಡಿಕೊಳ್ಳಲು ಕಾರಣ ಎಷ್ಟು ಯೋಚಿಸಿದರೂ ತಿಳಿಯಲಿಲ್ಲ. ಅವಳ ಬಗ್ಗೆ ಶೋಧೆ ನಡೆಸುತ್ತಿದ್ದಾಗ–ಅದರ ಸುಳಿವು ಒಂದು ದೊರೆಯಿತು.

ಅಲ್ಲಿದ್ದ ದನಕಾಯುವ ಹುಡುಗನಿಂದ ಯಾರೋ ಅಶ್ವಾರೋಹಿಗಳು, ಒಬ್ಬ ಹೆಂಗಸನ್ನು ಬಲಾತ್ಕಾರದಿಂದ ಹೊತ್ತುಕೊಂಡು ಹೋದ ಸಂಗತಿ ತಿಳಿಯಿತು. ಅವಳೇ ಕಮಲಾದೇವಿ ಇರಬೇಕೆಂದು ಅವನು ತರ್ಕಿಸಿ, ನೇರ ಅನ್ಹಿಲವಾಡಕ್ಕೆ ಹೋದನು. ಅಲ್ಲಿ ಅವನಿಗೆ ಯಾರಿಂದಲೋ ಕರ್ಣನ ಅಂತಃಪುರದಲ್ಲಿ ತನ್ನ ಪತ್ನಿ ಇನ್ನೂ ಬದುಕಿರುವಳೆಂದು ಸುದ್ದಿ ತಿಳಿಯಿತು. ಒಮ್ಮೆ ಅವಳನ್ನು ರಹಸ್ಯವಾಗಿ ಭೇಟಿ ಮಾಡಿದಾಗ ನಡೆದ ಸಂಗತಿ ತಿಳಿಯಿತು.

ಆಗಿನ ಸೋಮನಾಥನ ದೇವಾಲಯದಲ್ಲಿ ತನ್ನನ್ನು ನೋಡಿದ್ದ ಕರ್ಣನು ರಾಜಧಾನಿಗೆ ಹಿಂತಿರುಗಿ, ತನ್ನ ಸೇವಕರನ್ನು ಕಳುಹಿಸಿ, ಅವಳನ್ನು ಪ್ರಭಾಸದಿಂದ ಬಲಾತ್ಕಾರದಲ್ಲಿ ಹೊತ್ತುಕೊಂಡು ಹೋಗಿ, ಅಂತಃಪುರಕ್ಕೆ ಸೇರಿಸಿಕೊಂಡನು. ಅವಳ ಇಷ್ಟದ ವಿರುದ್ಧ ಅವಳ ಶೀಲ ಹರಣ ಮಾಡಿದ್ದ. ಈಗ ಅವಳು ನಾಯಿ ಮುಟ್ಟಿದ ಮಡಕೆಯಂತೆ ಆಗಿದ್ದಳು. ಕುಲಗೆಟ್ಟ ತಾನು ಕೇಶವ ಸೋಮಯಾಜಿಯ ಹಿಂದೆ ಬರಲು ಸಾಧ್ಯವಿಲ್ಲವೆಂದೂ, ತನ್ನನ್ನು ಈ ಜನ್ಮದಲ್ಲಿ ಮರೆತು,

ಅವನು ಬೇರೊಬ್ಬ ಸತ್ಕುಲ ಪ್ರಸೂತಳನ್ನು ಮದುವೆಯಾಗಿ ಸುಖವಾಗಿ ಇರ ಬೇಕೆಂದು ಹೇಳಿ ಅವನಿಂದ ಬೀಳ್ಕೊಂಡಳು.

ಆದರೆ ಇಷ್ಟು ಸುಲಭವಾಗಿ ತನಗಾದ ಅನ್ಯಾಯವನ್ನು ಸೋಮಯಾಜಿ ಮರೆಯಲು ಸಿದ್ಧನಿರಲಿಲ್ಲ. ಅವನು ಕರ್ಣನನ್ನು ಕೊಲೆಮಾಡಲು ಪ್ರಯತ್ನಿಸಿ, ವಿಫಲನಾದನು. ಇದರ ಪ್ರತ್ಯಕ್ಷ ಫಲವನ್ನು ಅವನು ಅನುಭವಿಸಬೇಕಾಯಿತು.

ಒಂದು ದಿನ ರಾತ್ರಿ ಅವನಿದ್ದ ಮನೆಯ ಮೇಲೆ ಕಳ್ಳರು ದಾಳಿಇಟ್ಟು ಅವನನ್ನು ಕೊಲೆಮಾಡಿ, ಅವನ ಸರ್ವಸ್ವವನ್ನೂ ದೋಚಿಕೊಂಡು ಹೋದರು. ಈ ಕೊಲೆ ಹಾಗೂ ಕಳ್ಳತನಗಳ ಹಿಂದೆ ಕರ್ಣನ ಕೈವಾಡವಿದೆ ಎಂಬುದು ಮಾಧವನಿಗೆ ತಿಳಿಯದೆ ಹೋಗಲಿಲ್ಲ. ಅವನು ತನ್ನ ಅಣ್ಣ ಅತ್ತಿಗೆಯರಿಗೆ ಉಂಟಾಗಿದ್ದ ಅನ್ಯಾಯಕ್ಕೆ ಪ್ರತೀಕಾರ ಬಗೆಯಲು ನಿಶ್ಚಯಿಸಿದನು. ಆದಕ್ಕಾಗಿ ತಾನು ಬದುಕಿರಲು ಶಪಥ ಮಾಡಿದನು. ಅವನು ಕೇಶವನಿಗಿಂತಲೂ ಚತುರ ನಾಗಿದ್ದುದರಿಂದ ಅಣ್ಣನಂತೆ ದುಡುಕದೆ ಉಪಾಯವಾಗಿ ಈ ಕಾರ್ಯವನ್ನು ಸಾಧಿಸಲು ನಿಶ್ಚಯಿಸಿದನು.

ಅವನು ಕರ್ಣನ ಸೇವೆಯನ್ನು ಸ್ವೀಕರಿಸಿ, ಅವನ ವಿಶ್ವಾಸ-ನಂಬಿಕೆಗಳಿಗೆ ಪಾತ್ರನಾಗಿ, ಇಂದು ಪ್ರಧಾನ ಅಮಾತ್ಯ ಪದವಿಯನ್ನು ಅಲಂಕರಿಸಿದ್ದನು. ಅವನು ಕಮಲಾದೇವಿಯ ಮೈದುನನೆಂಬುದನ್ನು ತಿಳಿದಿದ್ದರೂ, ಅವನು ತನ್ನನ್ನು ನಿಷ್ಠೆಯಿಂದ ಸೇವಿಸುತ್ತಿದ್ದುದರಿಂದ, ಅವನ ಬಗ್ಗೆ ಕರ್ಣನಿಗೆ ಯಾವುದೇ ಶಂಕೆ ಇರಲಿಲ್ಲ. ತನ್ನ ಬಗ್ಗೆ ಯಾವುದೇ ಸಂಶಯ ಬಾರದಂತೆ ಮಾಧವನೂ ನಡೆದು ಕೊಳ್ಳುತ್ತಿದ್ದನು.

ಕಮಲಾದೇವಿಗೆ ತನ್ನ ಅಧಿಕಾರ ಲಾಲಸೆಯನ್ನು ತೀರಿಸಿಕೊಳ್ಳಲು ಮಾಧವನ ಸಹಾಯ ಬೇಕಿತ್ತು. ಕಮಲಾದೇವಿಯ ವಿಶ್ವಾಸಕ್ಕೆ ಅವನು ಪಾತ್ರ ನಾಗಿದ್ದ. ಅವನಲ್ಲಿ ಕರ್ಣನೂ ಸಂಪೂರ್ಣವಾಗಿ ನಂಬಿಕೆ ಇರಿಸಿದ್ದನು. ಅವನ ಇಚ್ಛೆಯ ವಿರುದ್ಧ ಅವನಾಗಲೀ ಕಮಲಾದೇವಿಯಾಗಲೀ ತಮ್ಮ ಅಧಿಕಾರ ಪದವಿಗಳನ್ನು ಉಳಿಸಿಕೊಳ್ಳುವುದು ಕಷ್ಟವೆಂದು ತಿಳಿದಿದ್ದ ಅವರಿಬ್ಬರೂ ಅವನು ಹೇಳಿದಂತೆ ಕೇಳಿಕೊಂಡು, ತಮ್ಮ ವಿಲಾಸ ಭೋಗಗಳಲ್ಲಿ ಮೈಮರೆತಿದ್ದರು.

ರಾಜ್ಯಾಡಳಿತವೆಲ್ಲವೂ ಮಾಧವನ ಕೈಯಲ್ಲಿತ್ತು. ಅವನು ಮನಸ್ಸು ಮಾಡಿದ್ದರೆ, ಕರ್ಣನನ್ನು ಸಿಂಹಾಸನದಿಂದ ತಳ್ಳಿ ತಾನೇ ದೊರೆಯಾಗಿ ಮೆರೆಯ

ಬಹುದಾಗಿದ್ದರೂ, ಅವನಿಗೆ ಅಧಿಕಾರ, ಕೀರ್ತಿಗಳ ಮೋಹವಿರಲಿಲ್ಲ. ಅವನಿಗೆ ಇದ್ದ ಒಂದೇ ಒಂದು ಅಭೀಷ್ಟವೆಂದರೆ ತನ್ನ ಅಣ್ಣನಿಗಾದ ಅನ್ಯಾಯಕ್ಕೆ ಕರ್ಣನ ಮೇಲೆ ಸೇಡು ಬಗೆಯುವುದು. ಅದಕ್ಕಾಗಿ ಅವನು ಸೂಕ್ತ ಸಮಯಕ್ಕಾಗಿ ಕಾಯುತ್ತಿದ್ದನು. ಅವನು ಒಳ್ಳೆಯ ರಾಜಕಾರಣಿಯೂ ಮುತ್ಸದ್ದಿಯೂ ಆಗಿದ್ದುದರಿಂದ, ತನ್ನ ಹೃದಯಾಂತರಾಳದ ಆಸೆಯನ್ನು ತೋರಗೊಡದೆ, ಸ್ವಾಮಿನಿಷ್ಠ ಸೇವಕನ ಸೋಗಿನಲ್ಲಿ ಯುದ್ಧ ಸಮಯಕ್ಕಾಗಿ ಕಾಯುತ್ತಿದ್ದನು. ಇದು ಇತರ ಮಂತ್ರಿಗಳಿಗೆ ಮುಖ್ಯವಾಗಿ ವನಮೆಹತನಿಗೆ ತಿಳಿಯದೆ ಇರಲಿಲ್ಲ–ಆದರೆ ಅವರ ಮಾತನ್ನು ಕರ್ಣನು ಕಿವಿಯ ಮೇಲೆ ಹಾಕಿಕೊಂಡಿರಲಿಲ್ಲ. ಇದಕ್ಕೆ ಕಮಲಾದೇವಿಯ ಭರವಸೆಯೇ ಕಾರಣ. ಅವಳಾಗಲೀ, ಅವನಾಗಲೀ, ತಮಗೆ ಅನಾಯಾಸವಾಗಿ ದೊರೆತ ಅಧಿಕಾರ ಪದವಿಗಳನ್ನು ತಿರಸ್ಕರಿಸುವಷ್ಟು ಮೂರ್ಖರಾಗುವುದಿಲ್ಲವೆಂದು ಅವನು ಭಾವಿಸಿದ್ದನು. ಆದರೆ ಅದು ಅವನ ತಪ್ಪು ಕಲ್ಪನೆಯಾಗಿತ್ತು. ಕಮಲಾದೇವಿ ತನ್ನ ಅಧಿಕಾರ ವ್ಯಾಮೋಹದಿಂದ ಅವನಿಗೆ ಒಲಿದಿದ್ದಳು. ಆದರೆ ಮಾಧವನು ಅವನ ಮೇಲೆ ಸೇಡು ತೀರಿಸಿಕೊಳ್ಳುವ ಸಲುವಾಗಿ ಅವನನ್ನು ಒಲಿದಿದ್ದನು. ನಿಷ್ಠೆಯ ಸೋಗಿನಲ್ಲಿ ಅವನನ್ನು ಓಲೈಸುತ್ತಿದ್ದನು.

ಹೀಗೆ ಅವರಿಬ್ಬರೂ ಕರ್ಣನ ಕೈಯಿಂದ ರಾಜ್ಯಾಡಳಿತದ ಜವಾಬ್ದಾರಿಯನ್ನು ವಹಿಸಿಕೊಂಡಮೇಲೆ ಕರ್ಣನ ಕೆಲಸ ಹಗುರವಾಗಿತ್ತು. ಅವನು ತನ್ನ ವಿರಾಮವನ್ನು ಮನೋರಂಜನೆಗಳಲ್ಲಿ ಕಳೆಯುತ್ತಿದ್ದನು.

ಅವನು ಇದುವರೆಗೂ ಕಮಲಾದೇವಿಯನ್ನು ಯಾವುದೇ ಪ್ರಸಂಗದಲ್ಲಿ ವಿರೋಧಿಸಿರಲಿಲ್ಲ. ಆದರೆ ದೇವಲಾದೇವಿಯ ಪ್ರಸಂಗದಲ್ಲಿ ಮಾತ್ರ ಅವರಿಬ್ಬರಿಗೂ ರೂಢಮೂಲವಾದ ಭಿನ್ನಾಭಿಪ್ರಾಯವೇರ್ಪಟ್ಟಿತು. ಇದಕ್ಕೆ ದೇವಲಾದೇವಿಯ ಮೇಲೆ ಅವನಿಗಿದ್ದ ಪ್ರೀತಿಯೇ ಕಾರಣವಾಗಿತ್ತು. ದೇವಲ ತನ್ನ ತಾಯಿಯ ದೇವಿಯ ಮೇಲ್ಪಂಕ್ತಿಯನ್ನು-ಅಂದರೆ ಅವಳ ಉಶೃಂಖಲ ಲೋಲುಪ ಜೀವನವನ್ನು ಅನುಸರಿಸದೆ–ಯೋಗ್ಯ ರಾಜಪುತ್ರನ ಕೈಹಿಡಿದು ಸುಖವಾಗಿರಬೇಕೆಂಬುದೇ ಅವನ ಹಾರೈಕೆಯಾಗಿತ್ತು. ಆದರೆ ಕಮಲಾದೇವಿಯು ಮಾತ್ರ ಅವನ ಆಶೋತ್ತರಗಳಿಗೆ ಕೊಡಲಿ ಪೆಟ್ಟು ಹಾಕಿದ್ದಳು. ಅಂತಲೇ ಅವನಿಗೆ ಈ ಪ್ರಸಂಗ ತುಂಬಾ ವ್ಯಥೆಯನ್ನು ಉಂಟುಮಾಡಿತ್ತು.

ಮೊರನೆಯ ದಿನ ರಾಜಪುರೋಹಿತರು ಬಂದು ಕರ್ಣರಾಯನನ್ನು ನೋಡಿದರು. ತಾವು ಬಂದ ಕಾರ್ಯದ ಸಫಲತೆ, ವಿಫಲತೆಗಳನ್ನು ತಿಳಿಯು ವುದೇ ಅವರ ಉದ್ದಿಶ್ಯವಾಗಿತ್ತು. ಸಾಧ್ಯವಾದರೆ ಕರ್ಣನೊಡನೆ ಈ ಬಗ್ಗೆ ಮಾತನಾಡಿ ಈ ವಿವಾಹವನ್ನು ಕುದರಿಸಬೇಕೆಂದಿದ್ದರು.

"ಪ್ರಭು, ನಾಳೆ ನಾನು ದೇವಗಿರಿಗೆ ಹಿಂತಿರುಗಬೇಕೆಂದಿದ್ದೇನೆ. ನಮ್ಮ ಸಾಮ್ರಾಟರಿಗೆ ಏನನ್ನಾದರೂ ನಿವೇದಿಸುವುದಿದ್ದರೆ ಬಿನ್ನವಿಸಿಕೊಳ್ಳುತ್ತೇನೆ" ಎಂದರು.

ಈ ಮಾತಿಗೆ ಕರ್ಣನು ತಟಕ್ಕನೆ ಉತ್ತರಕೊಡದೆ, ಪುರೋಹಿತರ ಮುಖ ವನ್ನೇ ದಿಟ್ಟಿಸಿ ನೋಡಿದ.

"ಪುರೋಹಿತರೇ, ದೇವಗಿರಿಗೆ ಹಿಂದಿರುಗಲು ಇಷ್ಟೇಕೆ ಆತುರ ? ತಾವು ಬಂದು ಮೂರು ದಿನಗಳೂ ಆಗಿಲ್ಲ, ಆಗಲೇ ಹೊರಡುವ ಮಾತು ತೆಗೆ ಯುತ್ತೀರಾ ?" ಎಂದ ದೈನ್ಯವಾಗಿ.

"ಪ್ರಭು, ನಾನು ಇಲ್ಲಿ ಇದ್ದು ಮಾಡುವುದಾದರೂ ಏನು ? ತಾವಾಗಲೀ, ಮಹಾರಾಣಿಯವರಾಗಲೀ ಈ ವಿವಾಹದ ಬಗ್ಗೆ ಉತ್ಸಾಹವನ್ನು ತೋರಿಸಲಿಲ್ಲ. ಬಹುಶಃ ಈ ಸಂಬಂಧ ತಮ್ಮ ಮನಸ್ಸಿಗೆ ಬರಲಿಲ್ಲವೆಂದು ಕಾಣುತ್ತದೆ. ಎಂದ ಮೇಲೆ ಇಷ್ಟವಿಲ್ಲದ ಕೆಲಸಕ್ಕೆ ನಾವೇಕೆ ಒತ್ತಾಯ ಮಾಡಬೇಕು, ನಾವು ಬಂದ ಕೆಲಸ ಮುಗಿಯಿತಲ್ಲ ! ಇನ್ನು ನಮಗೆ ಅಪ್ಪಣೆಯನ್ನು ಕೊಡಿ !"

"ಪುರೋಹಿತರೇ, ಈ ವಿವಾಹಕ್ಕೆ ನನ್ನ ಸಮ್ಮತಿ ಇಲ್ಲವೆಂದು ನೀವು ತಿಳಿಯಬಾರದು. ಆದರೆ ಈ ಬಗ್ಗೆ ಯಾವುದೇ ನಿರ್ಧಾರ ತೆಗೆದುಕೊಳ್ಳಲಾರದ ಸ್ಥಿತಿಯಲ್ಲಿ ನಾನಿದ್ದೇನೆ. ಇದು ದುಡುಕುವ ವಿಷಯವಲ್ಲವೆಂದು ನಿಮಗೂ ತಿಳಿದಿದೆ. ತಾವು ಇನ್ನು ಕೆಲವು ದಿನ ಇಲ್ಲಿ ನಮ್ಮ ಅತಿಥಿಗಳಾಗಿ ಉಳಿದರೆ, ನಮ್ಮ ಅಭೀಷ್ಟವನ್ನು ತಿಳಿಸುತ್ತೇನೆ !" ಎಂದ ಕರ್ಣ. ಆದರೆ ಮತ್ತೆ ಮೂರು ದಿನಗಳು ಕಳೆದರೂ ಕರ್ಣನಿಂದ ಯಾವುದೇ ಖಚಿತವಾದ ಉತ್ತರ ಬರಲಿಲ್ಲ. ಈ ವಿವಾಹದ ವಿಷಯದಲ್ಲಿ ಕರ್ಣನಿಗೆ ಇಷ್ಟವಿದ್ದರೂ ಮಹಾರಾಣಿ ಕಮಲಾ ದೇವಿಗೆ ಏಕೋ ಇದು ಇಷ್ಟವಿಲ್ಲವೆಂಬುದು ತಿಳಿಯದೇ ಇರಲಿಲ್ಲ. ಆದುದರಿಂದ ಚಾಣಾಕ್ಷರಾದ ಅವರು ಕಮಲಾದೇವಿಯ ಮನಸ್ಸಿನಲ್ಲಿ ಏನಿದೆಯೋ ಅದನ್ನು

ತಿಳಿಯಲು ಪ್ರಯತ್ನಿಸಿದರು. ಅವರು ಲೋಕಾಭಿರಾಮವೆಂಬಂತೆ ಮಹಾರಾಣಿಯ ಅಂತಃಪುರಕ್ಕೆ ಬಂದರು.

ಕಮಲಾದೇವಿಯು ಅವರನ್ನು ಗೌರವದಿಂದ ಸ್ವಾಗತಿಸಿ, ಸತ್ಕರಿಸಿದಳು. "ತಾಯಿ, ಮಗಳು ಎಲ್ಲಿ ಕಾಣಿಸುವುದಿಲ್ಲ ? ". ಎಂದರು ಸುತ್ತಲೂ ನೋಡಿ.

"ಸ್ವಾಮಿ, ಇಲ್ಲೇ ಎಲ್ಲೋ ಇರಬೇಕು ! ಕರೆಸುತ್ತೇನೆ" ಎಂದು ಹೇಳಿ ದೇವಲದೇವಿಯನ್ನು ಕರೆತರಲು ದೂತರನ್ನು ಕಳುಹಿಸಿಕೊಟ್ಟಳು. ದೇವಲಾದೇವಿಯು ತಾಯಿಯ ಆತುರದ ಕರೆಯನ್ನು ಮನ್ನಿಸಿ ಗಾಬರಿಯಿಂದಲೇ ಬಂದಳು. ಅವಳನ್ನು ನೋಡುತ್ತಲೇ ಕಮಲಾದೇವಿ,

"ಮಗು ಪುರೋಹಿತರಿಗೆ ನಮಸ್ಕಾರಮಾಡಮ್ಮ ! " ಎಂದಳು ಅದರಂತೆ ದೇವಲದೇವಿಯು ರಾಜಪುರೋಹಿತರಿಗೆ ನಮಸ್ಕರಿಸಿದಳು.

"ಆಯುಶ್ಮಂತಳಾಗಿ ಬಾಳಮ್ಮ ! " ಎಂದು ಹೇಳಿದವರೇ,

"ಶೀಘ್ರ ಕಲ್ಯಾಣ ಸಿದ್ಧಿರಸ್ತು" ಎಂದು ಹೇಳಿ ನಕ್ಕರು. ಈ ಮಾತು ಕೇಳಿ ದೇವಲದೇವಿಯ ಮುಖ ಲಜ್ಜೆಯಿಂದ ಕೆಂಪಾಯಿತು.

"ತಾಯಿ, ಈ ಮಗುವಿನ ಮುಖದಲ್ಲಿ ಲಕ್ಷ್ಮಿ ಕಳೆ ಇದೆ. ಖಂಡಿತವಾಗಿಯೂ ಈಕೆಯನ್ನು ಕೈಹಿಡಿದವನು ಭಾಗ್ಯಶಾಲಿ ! " ಎಂದರು.

"ಪುರೋಹಿತರೇ, ನಮ್ಮ ದೇವಲದೇವಿಯನ್ನು ಕಂಡವರೆಲ್ಲರೂ ಇದೇ ಮಾತನ್ನು ಹೇಳುತ್ತಿರುತ್ತಾರೆ ! ಆದರೂ ಒಮ್ಮೊಮ್ಮೆ ಮಗಳ ಭವಿಷ್ಯವನ್ನು ನೆನೆದಾಗ ಏಕೋ ಒಂದು ಬಗೆಯ ಹೆದರಿಕೆಯಾಗುತ್ತದೆ ! " ಎಂದಳು.

"ಏಕೆ ತಾಯಿ ? "

"ಭವಿಷ್ಯದ ಕರಾಳಗರ್ಭದಲ್ಲಿ ಮಗುವಿಗೆ ಏನು ಕಾದಿದೆಯೋ ಯಾರು ಬಲ್ಲರು ? ಏಕೆಂದರೆ ಇವಳು ಎಲ್ಲರಂತೆ ಅಲ್ಲ-ಇವಳದೇ ಒಂದು ಬಗೆ ! " ಎಂದು ಹೇಳಿ ನಕ್ಕಳು. ಅನಂತರ ಮಗಳನ್ನು ಹೊರಗೆ ಕಳುಹಿಸಿ ಕೊಟ್ಟು ಹೇಳಿದಳು.

"ಇವಳನ್ನು ವಿವಾಹವಾಗಲು ಅನೇಕ ರಾಜಪುತ್ರರು ಹಾತೊರೆಯುತ್ತಿದ್ದಾರೆ. ಯಾರಿಗೆ ಇವಳನ್ನು ಮದುವೆ ಮಾಡಿಕೊಟ್ಟರೂ ಇನ್ನೊಬ್ಬರ ದ್ವೇಷವನ್ನು ಕಟ್ಟಿಕೊಳ್ಳಬೇಕಾಗುತ್ತದೆ. ಇವಳ ಕಾರಣದಿಂದ ಮತ್ತೆ ಪೃಥ್ವಿ

ರಾಜ ಸಂಯುಕ್ತೆಯರ ಕಥೆ ಪುನರಾವರ್ತಿಸಿದರೆ? ಎಂಬ ಕಳವಳವಾಗುತ್ತದೆ! ಆದರೆ ಈ ಬಗ್ಗೆ ನಾನು ಏನುಮಾಡಲೂ ಅಸಮರ್ಥಳಾಗಿದ್ದೇನೆ''.

"ತಾಯಿ, ತಮ್ಮ ಮನೋವ್ಯಥೆ ಏನೆಂದು ಊಹಿಸಕೊಳ್ಳಬಲ್ಲೆ! ಆದರೆ ಪರಿಹಾರಕ್ಕೆಂದೇ ದೇವರು ನನ್ನನ್ನು ಇಲ್ಲಿಗೆ ಕಳುಹಿಸಿರುವನೆಂದು ತಿಳಿಯಿರಿ. ದೇವಲದೇವಿಯನ್ನು ಶಂಕರದೇವನಿಗೆ ಕೊಟ್ಟರೆ ರಾಜಪುತ್ರರ ದ್ವೇಷ ಕಟ್ಟಿಕೊಳ್ಳುವುದು ತಪ್ಪುತ್ತದೆ.''

"ಈ ಸಂಬಂಧದಿಂದ ನಮ್ಮ ಸಮಸ್ಯೆ ಬಗೆಹರಿಯುವುದಿಲ್ಲ ಪುರೋಹಿತರೇ, ಇದರಿಂದ ಇನ್ನಿಷ್ಟು ಜಟಿಲಸಮಸ್ಯೆಗಳು ಉದ್ಭವವಾಗುತ್ತವೆ. ನಾವು ಇದು ವರೆಗೂ ಶತ್ರುಗಳಾಗಿದ್ದ ದೇವಗಿರಿಯ ಯಾದವರ ಸ್ನೇಹ ಹಸ್ತಕ್ಕೆ ಕೈಚಾಚಿ ದರೆ, ಇದುವರೆಗೆ ಸ್ನೇಹಿತರಾಗಿದ್ದ ಅನೇಕ ರಾಜಪುತ್ರರ ದ್ವೇಷ ಕಟ್ಟಿಕೊಳ್ಳ ಬೇಕಾಗುತ್ತದೆ! ಇದು ಸೆರಗಿನ ಕೆಂಡವೇ ಸರಿ!''

"ಹಾಗಾದರೆ ನೀವು ಹೇಳುವುದಾದರೂ ಏನು?''

"ನೀವು ಹೇಳುವ ಈ ಸಂಬಂಧ ದೇವರ ಇಚ್ಛೆಗೆ ಬಂದಿಲ್ಲವೆಂದು ಕಾಣು ತ್ತದೆ!''

"ಆದರೆ ತಾವು ಈ ವಿವಾಹಕ್ಕೆ ಸಮ್ಮತಿಸುವುದಿಲ್ಲವೆಂದು ತಿಳಿಯುತ್ತೆ".

"ಅದರ ಅರ್ಥ ಹಾಗಲ್ಲ! ನಮಗೆ ದೇವಗಿರಿಯ ಯಾದವರೊಡನೆ ಸ್ನೇಹ ಸಂಬಂಧ ಬೆಳೆಸಲು ತುಂಬಾ ಇಷ್ಟವಿದೆ. ಆದರೆ ಸದ್ಯದ ಪರಿಸ್ಥಿತಿ ಯಲ್ಲಿ ನಾವು ದೇವಲದೇವಿಯ ವಿವಾಹವನ್ನು ನಿರ್ಧರಿಸಿಲ್ಲ. ಅವಳಿಗೆ ಇನ್ನೂ ಚಿಕ್ಕವಯಸ್ಸು! ಮುಂದೆ ಎಂದೋ ಅವಳ ಮದುವೆಯ ಮಾತು; ಈಗ ಆ ಮಾತು ಪ್ರಸ್ತಾಪಿಸಿ, ಏಕೆ ಮನಸ್ಸು ಕಹಿಮಾಡಿಕೊಳ್ಳಬೇಕು?''

"ಹಾಗಾದರೆ ಸಾಮ್ರಾಟರಿಗೆ ಈ ಅಭಿಪ್ರಾಯವನ್ನು ತಿಳಿಸಲಿ?''

"ಇದಕ್ಕೆ ನನ್ನ ಅಭ್ಯಂತರವಿಲ್ಲ-ಆದರೆ ನಾವು ಅವರ ಸಲಹೆಯನ್ನು ತಿರಸ್ಕರಿಸಲಿಲ್ಲವೆಂದು ವಿಶದಪಡಿಸಿರಿ!'' ಎಂದು ಹೇಳುತ್ತಿರುವಂತೆ ಅಲ್ಲಿಗೆ ಕರ್ಣನು ಬಂದನು. ಅವನು ದೂರದಿಂದಲೇ ಅವರ ಮಾತನ್ನು ಕೇಳಿ ಕೊಂಡಿದ್ದನು. ಅಂತಲೇ ಹಠಾತ್ತನೆ ಹೇಳಿದನು.

"ಪುರೋಹಿತರೇ, ನಿಮ್ಮ ಸಾಮ್ರಾಟರಿಗೆ ಹೋಗಿ ತಿಳಿಸಿ! ಕಮಲಾ ದೇವಿಯು ಕರ್ಣ ದೇವನ ಇಷ್ಟದ ವಿರುದ್ಧ ಯವನರಿಗೆ ತನ್ನ ಮಗಳನ್ನು ಧಾರೆ

ಎರೆದು ಕೊಡಬೇಕೆಂದಿದ್ದಾಳೆ ! ಆ ಶಂಕರದೇವನಿಗೆ ಬಾಹುಗಳಲ್ಲಿ ಶಕ್ತಿ ಇದ್ದರೆ, ಪೃಥ್ವಿರಾಜನು ಸಂಯುಕ್ತೆಯನ್ನು ಅಪಹರಿಸಿದಂತೆ, ದೇವಲದೇವಿಯನ್ನು ಅಪಹರಿಸಿಕೊಂಡು ಹೋಗಿ ಮದುವೆಯಾಗಲಿ ! ಅದಕ್ಕೆ ನನ್ನ ಸಮ್ಮತಿ ಇದೆ ! ಇವಳನ್ನೇನು ಕೇಳುತ್ತೀರಿ !" ಎಂದನು.

ಈ ಮಾತು ಕೇಳಿ ಕಮಲಾದೇವಿಯು ಚಕಿತಳಾಗಿ ನಿಂತಳು.

"ಹೌದು, ನನ್ನನ್ನೇನು ಕೇಳುವುದು ? ದೇವಲದೇವಿಯ ವಿವಾಹ ವನ್ನು ನಿರ್ಧರಿಸಲು ನಾನು ಯಾರು ?" ಎಂದವಳೇ ಒಮ್ಮೆಲೆ ಧ್ವನಿಯನ್ನು ಗಡಸುಮಾಡಿ ಹೇಳಿದಳು "ಪುರೋಹಿತರೇ, ಚನ್ನಾಗಿ ಕೇಳಿ. ಕಮಲಾ ದೇವಿಯು ಜೀವಂತವಿರುವವರೆಗೆ ಆ ಗೊಲ್ಲ ರಾಜಪುತ್ರನಿಗೆ ಮಗಳನ್ನು ಕೊಡುವು ದಿಲ್ಲ. ಈ ಮಾತನ್ನು ನಿಮ್ಮ ದೊರೆಗೆ ತಿಳಿಸಿ !"

"ನಾನು ಜೀವಂತವಿರುವವರೆಗೆ, ದೇವಲ ದೇವಿಯನ್ನು ಶಂಕರದೇವನಿ ಗಲ್ಲದೆ ಅನ್ಯರಿಗೆ ವಿವಾಹಮಾಡಿ ಕೊಡುವುದಿಲ್ಲ. ಈ ಮಾತನ್ನೂ ನೀವು ಅವರಿಗೆ ತಿಳಿಸಿ." ಅಷ್ಟೇ ನಿಷ್ಠುರವಾಗಿ ಕರ್ಣನೂ ಹೇಳಿದ.

ಪುರೋಹಿತರು ಮಾತ್ರ ಇದಕ್ಕೆ ಉತ್ತರ ಕೊಡದೆ, ಅಲ್ಲಿಂದ ನಿರ್ಗಮಿಸಿ ದೇವಗಿರಿಯ ದಾರಿ ಹಿಡಿದರು.

ದೇವಗಿರಿಗೆ ಹಿಂತಿರುಗಿ ಈ ಎಲ್ಲ ಸಂಗತಿಯನ್ನೂ ರಾಮಚಂದ್ರದೇವನಿಗೆ ತಿಳಿಸಿದಾಗ ಅವನು ನಿಟ್ಟುಸಿರುಬಿಟ್ಟನು. ಆದರೆ ಅಲ್ಲೇ ಇದ್ದ ಶಂಕರ ದೇವನು ಮಾತ್ರ "ಅಪ್ಪಾಜಿ, ನನಗೆ ಅಪ್ಪಣೆ ಕೊಡಿ. ಕೂಡಲೇ ಸೈನ್ಯ ಸಮೇತ ಹೋಗಿ ಆ ಮದೋನ್ಮತ್ತ ಕಮಲಾದೇವಿಗೆ ತಕ್ಕ ಬುದ್ಧಿ ಕಲಿಸಿ ಬರುತ್ತೇನೆ." ಎಂದನು

"ಮಗು, ನಾವು ಈ ಅಲ್ಪ ಸಂಗತಿಗಾಗಿ ದುಡುಕಬಾರದು. ಭಾವೋ ದ್ರೇಕಗೊಳ್ಳಬಾರದು. ಅಲ್ಲದೆ ನಾವು ಈಗ ಪ್ರತಿಕೂಲದೈವರಾಗಿದ್ದೇವೆ. ನಾವು ನಮ್ಮ ಸ್ವಾತಂತ್ರ್ಯವನ್ನೂ, ಸಂಪತ್ತನ್ನೂ ಯವನರಿಗೆ ಸೂರೆಗೊಟ್ಟು ಹತ ಭಾಗ್ಯರಾಗಿದ್ದೇವೆ. ಈ ಸಮಯದಲ್ಲಿ ನಾವು ದುಡುಕಿ ಯಾವುದನ್ನೂ ಕೈಗೊಳ್ಳಬಾರದು !" ಎಂದು ಸಮಾಧಾನ ಮಾಡಿದನು.

"ಅಪ್ಪಾಜಿ, ನಾವು ರಾಜ್ಯಕೋಶಗಳನ್ನು ಶತ್ರುಗಳ ಮೋಸಕ್ಕೆ ಬಲಿಯಾಗಿ ಕಳೆದು ಕೊಂಡ ಮಾತ್ರಕ್ಕೇ ನಮ್ಮ ಸರ್ವಸ್ವವನ್ನೂ ಅವರಿಗೆ ಮಾರಿಕೊಂಡಿಲ್ಲ. ನಮಗೆ ಇನ್ನೂ ನಮ್ಮದೇ ಆದ ಆತ್ಮಗೌರವವಿದೆ; ಅದಕ್ಕೆ ಅಪಮಾನ

ಮಾಡುವವರು ಯಾರೇ ಆಗಿರಲಿ, ಪ್ರತಿಭಟಿಸದೆ ಇರಲಾರೆ! ಪ್ರಾಣ ಹೋದರೂ ಸರಿ, ಅಪಮಾನಕ್ಕೆ ತಲೆಬಾಗಿಸಲಾರೆ! ಅನ್ಯಾಯಕ್ಕೆ ಮಣಿಯಲಾರೆ!''

"ಮಗು, ಆ ಕಾಲ ಬಂದೇ ಬರುತ್ತದೆ. ಆದರೆ ನಾವು ಅಲ್ಲಿಯವರೆಗೆ ಕಾಯಬೇಕು, ಅಷ್ಟೇ'' ಎಂದು ನಿಟ್ಟುಸಿರು ಬಿಟ್ಟನು, ರಾಮಚಂದ್ರದೇವ. ಅವರೊಂದಿಗೆ ಶಂಕರದೇವನೂ ತನ್ನ ಅಸಹಾಯಸ್ಥಿತಿಯನ್ನು ನೆನೆದು ನಿಟ್ಟುಸಿರು ಬಿಟ್ಟನು.

## ೧೪

ಅಲ್ಲಾವುದ್ದೀನನ ಆಜ್ಞೆಯಂತೆ ಅಲೂಫ್‌ಖಾನನೂ, ನಜರತ್‌ಖಾನನೂ ಅನ್ಹಿಲವಾಡವನ್ನು ಮುತ್ತಿದರು. ಹಠಾತ್ತನೆ ರಾಜಧಾನಿಯ ಮೇಲೆ ದಾಳಿ ಇಟ್ಟ ಯವನರ ದಂಡನ್ನು ಸಮರ್ಥರೀತಿಯಲ್ಲಿ ಎದುರಿಸಲು ಕರ್ಣನಿಗೆ ಸಾಧ್ಯವಾಗಲಿಲ್ಲ. ಅವನಿಗೆ ಯವನರು ಗುಜರಾತಿನ ಮೇಲೆ ದಂಡೆತ್ತಿ ಬಂದುದೂ, ಚಿತ್ತೋಡದ ಸಮರಸಿಂಹನು ತನ್ನ ರಾಜ್ಯದಲ್ಲಿ ಮುನ್ನುಗ್ಗಲು ಅವಕಾಶ ಕೊಟ್ಟಿರುವುದೂ ತಿಳಿದಿರಲಿಲ್ಲ. ಬೇಕೆಂದೇ ಮಾಧವನು ಈ ಎಲ್ಲ ಸಂಗತಿಗಳನ್ನೂ ಕರ್ಣನಿಂದ ಗೋಪ್ಯವಾಗಿ ಇರಿಸಿದ್ದನು. ವಿಲಾಸಪ್ರಿಯನಾದ ಕರ್ಣನಿಗೆ ಯವನರು ತನ್ನ ರಾಜಧಾನಿಯ ಕಡೆಗೆ ತೀವ್ರಗತಿಯಲ್ಲಿ ಬರುತ್ತಿರುವ ಸಂಗತಿ ತಿಳಿಯುವ ವೇಳೆಗೆ ಕಾರ್ಯ ಮಿಂಚಿಹೋಗಿತ್ತು.

"ಪ್ರಭು, ಅಲ್ಲಾವುದ್ದೀನನ ದಳಪತಿಗಳಾದ ಉಲೂಫ್‌ಖಾನ್, ನಜರತ್‌ಖಾನರು ಅಸಂಖ್ಯಾತ ದಳದೊಂದಿಗೆ ರಾಜಧಾನಿಯ ಮೇಲೆ ಏರಿ ಬರುತ್ತಿದ್ದಾರೆ" ಎಂದು ವನಮೆಹತನು ಹೇಳಿದಾಗ ಕರ್ಣನು ಈ ಮಾತನ್ನು ನಂಬಲಿಲ್ಲ.

"ಮಂತ್ರಿಗಳೇ, ಇದೇನು ನೀವು ವಿನೋದಕ್ಕೆ ಹೀಗೆ ಹೇಳುತ್ತಿಲ್ಲ ತಾನೆ?'' ಎಂದು ಸಂಶಯದಿಂದ ಕೇಳಿದ.

"ಪ್ರಭು, ನನ್ನ ಮಾತು ವಿನೋದವಲ್ಲ–ಅಕ್ಷರಶಃ ಸತ್ಯ ಸಂಗತಿ !''

"ಹಾಗಾದರೆ, ಈ ಸಂಗತಿಯನ್ನು ಮಾಧವ ಅಮಾತ್ಯರು ಏಕೆ ನನಗೆ ತಿಳಿಸಲಿಲ್ಲ !''

"ಪ್ರಭು, ನಿಮಗೆ ಈಗಲಾದರೂ ತಿಳಿಯಿತೆ ? ಮಾಧವ ಅಮಾತ್ಯರ ನಿಜವಾದ ಸ್ವರೂಪ ! ಅವರ ದ್ರೋಹಚಿಂತನೆ ಈಗಲಾದರೂ ತಿಳಿಯಿತೆ ? ಅವರ ಬಗ್ಗೆ ನಾವು ಮೇಲಿಂದ ಮೇಲೆ ಎಚ್ಚರಿಕೆಯನ್ನು ನೀಡುತ್ತಿದ್ದರೂ ತಾವು ಅವರ ಮಾತನ್ನು ಕೇಳಿಕೊಂಡು, ನಮ್ಮನ್ನು ವಿದ್ರೋಹಿಗಳೆಂದು ತಿಳಿದಿರಿ ! ಈಗ ನಿಮಗೆ ಸ್ವಾಮಿನಿಷ್ಠರು ಯಾರು, ದ್ರೋಹಿಗಳು ಯಾರು ಎಂದು ತಿಳಿಯಿತೆ ? ''

"ಮಂತ್ರಿಗಳೇ, ನಿಜವಾಗಿಯೂ ಯವನರು ಅನ್ಹಿಲವಾಡದ ಮೇಲೆ ದಂಡೆತ್ತಿ ಬರುತ್ತಿದ್ದಾರೆಯೆ ?"

"ಹೌದು ಶ್ರೀ ಸೋಮೇಶ್ವರನ ಆಣೆಗೂ ಈ ಮಾತು ಸತ್ಯ ! ನಮ್ಮ ಮಾತು ಸುಳ್ಳಾದರೆ, ನಮ್ಮ ಶಿರಚ್ಛೇದನ ಮಾಡಬಹುದು ! "

ಎಂದು ರಾಜಪುರೋಹಿತರು ದನಿಗೂಡಿಸಿದರು.

"ಹಾಗಾದರೆ........ಹಾಗಾದರೆ........ಗುಜರಾತಿನ ಮೇಲೆ ಯವನರ ದಾಳಿ ನಿಜವಾಯಿತು !" ಎಂದು ಕರ್ಣನು ಉದ್ಗಾರ ತೆಗೆದನು.

"ಅಷ್ಟೇ ಅಲ್ಲ–ತಾವು ಇಂದಿನ ನಿರ್ಲಕ್ಷವನ್ನು ಮುಂದುವರಿಸಿದರೆ, ಅನ್ಹಿಲವಾಡವು ನಮ್ಮ ಕೈಬಿಡುವ ದಿನ ದೂರವಿಲ್ಲ ! ತಾವು ಈಗಲೇ ಎಚ್ಚೆತ್ತುಕೊಂಡು ಶತ್ರುಗಳಿಂದ ಗುರ್ಜರವನ್ನು ರಕ್ಷಿಸುವ ಕೆಲಸಕ್ಕೆ ಕಂಕಣ ತೊಡಬೇಕಾಗಿದೆ ! ಈಗ ಒಂದೊಂದು ನಿಮಿಷವೂ ಅಮೂಲ್ಯವಾಗಿದೆ !" ಎಂದು ಬಡಾ ಮಹಾರಾಜರು ಹೇಳಿದರು.

"ಪ್ರಭು, ಈಗ ನಾವು ಶತ್ರುಗಳನ್ನು ಮಾರ್ಗ ಮಧ್ಯೆ ತಡೆಯುವುದು ಒಳ್ಳೆಯದು. ಅವರು ಈಗ ಯಾವುದೇ ಪ್ರತಿಭಟನೆಯಿಲ್ಲದೆ ಮುಂದೆ ನುಗ್ಗುತ್ತಿದ್ದಾರೆ. ಅವರನ್ನು ಗಡಿಯಲ್ಲೇ ತಡೆಗಟ್ಟಲು ಸಾಧ್ಯವಾಗದಿದ್ದರೂ ನಡುದಾರಿಯಲ್ಲಿ ಸೋಲಿಸಿ, ಸದೆಬಡೆದು, ಓಡಿಸುವುದು ಕ್ಷೇಮ. ನಮ್ಮ ರಾಜಧಾನಿಯ ಬಳಿಗೆ ಅವರನ್ನು ಬರಗೊಟ್ಟರೆ, ಅದನ್ನು ಶತ್ರುಗಳಿಂದ ಉಳಿಸಿಕೊಳ್ಳುವುದು ಕಷ್ಟವಾಗುವುದು. ಆಗ ಮಾತ್ರ ಸರ್ವನಾಶವಾಗುತ್ತದೆ !''

"ಇದಕ್ಕೆ ನಾವು ಅವಕಾಶ ಕೊಡಬಾರದು ಪ್ರಭು, ಈಗಲೇ ನಾವು ಆಶಾಪಲ್ಲ (ಇಂದಿನ ಅಹಮದಾಬಾದು) ವನ್ನು ಭದ್ರಪಡಿಸಿ, ಶತ್ರುಗಳನ್ನೂ ಅಲ್ಲೇ ಸೋಲಿಸಿ ಹಿಮ್ಮೆಟ್ಟಿಸುವುದು ಲೇಸು. ಈ ಕಾರ್ಯಕ್ಕೆ ನಮಗೆ ಅಪ್ಪಣೆ ಕೊಡಿ. ಯವನರಿಗೆ ಗುರ್ಜರ ವೀರರ ಬಾಹುಬಲದ ಸವಿಯನ್ನು ಪರಿಚಯಮಾಡಿ ಕೊಟ್ಟು ಬರುತ್ತೇವೆ!" ಎಂದ ವನಮೆಹತ.

"ಪ್ರಭು, ಶಸ್ತ್ರ ಹಿಡಿಯಲು ಬಾರದ ನನ್ನಿಂದೇನು ಪ್ರಯೋಜನವೆಂದು ನೀವು ತಿಳಿಯಬಾರದು! ಈ ದಂಡ-ರಾಜದಂಡಕ್ಕಿಂತಲೂ ಪ್ರಭಾವಶಾಲಿಯಾಗಿದೆ. ಇದನ್ನು ಹಿಡಿದು-ನಾನು ಜನತೆಯನ್ನು ಹುರಿದುಂಬಿಸುತ್ತೇನೆ. ಶತ್ರುಗಳು ನಮ್ಮ ದೇವಾಲಯಗಳ ತಂಟೆಗೂ, ಪವಿತ್ರಗ್ರಂಥಗಳ ತಂಟೆಗೂ-ನಮ್ಮ ಧರ್ಮ ಸಂಸ್ಕೃತಿಯ ಕೇಂದ್ರಗಳ ತಂಟೆಗೂ ಬಾರದಂತೆ ಜನತೆಯನ್ನು ಎಚ್ಚರಿಸುತ್ತೇನೆ." ಎಂದು ಬಡಾ ಸಾಹೇಬರು ಹೇಳಿದರು.

"ವನಮೆಹತರೇ, ತಮ್ಮ ಸಲಹೆಗಳಿಗೆ ನಾನು ಋಣಿಯಾಗಿದ್ದೇನೆ. ಸದ್ಯಕ್ಕೆ ತಾವು ಆಶಾಪಲ್ಲದ ರಕ್ಷಣೆಗೆ ಹೊರಡಿ. ಬಡಾಮಹಾರಾಜರು ಪ್ರಬಾಸಕ್ಕೆ ತೆರಳಿ ಅಲ್ಲಿನ ಪವಿತ್ರವಾದ ದೇವಾಲಯವು ಯವನರಿಂದ ಅಪವಿತ್ರವಾಗದಂತೆ ನೋಡಿಕೊಳ್ಳಲಿ! ರಾಜಧಾನಿಯ ತಂಟೆಗೆ ಯವನರು ಬಾರದಂತೆ ನೋಡಿಕೊಳ್ಳುವ ಜವಾಬ್ದಾರಿ ನನಗೆ ಇರಲಿ!"

ಎಂದು ಹೇಳಿ ಅವರನ್ನು ಕಳುಹಿಸಿಕೊಟ್ಟು ಸಮ್ಮುಖಕ್ಕೆ ಮಾಧವ ಅಮಾತ್ಯನನ್ನು ಕರೆಸಿಕೊಂಡನು. ಆತುರದ ಕರೆಯನ್ನು ಕೇಳಿ ಅವನು ಗಾಬರಿಯಿಂದ ಓಡಿಬಂದನು. ಅವನನ್ನು ನೋಡುತ್ತಲೇ ಕರ್ಣನು ಅಸಹನೆಯಿಂದ ಕೇಳಿದ.

"ಅಮಾತ್ಯರೇ, ನಿಮ್ಮನ್ನು ನಂಬಿ ರಾಜ್ಯಕೋಶಗಳ ಹೊಣೆಗಾರಿಕೆಯನ್ನು ತಮಗೆ ವಹಿಸಿದುದಕ್ಕೆ ನನಗೆ ಸರಿಯಾದ ಶಿಕ್ಷೆ ವಿಧಿಸಿದಿರಿ! ನಿಮ್ಮನ್ನು ಪ್ರಾಣಕ್ಕಿಂತಲೂ ಪ್ರಿಯವಾಗಿ ತಿಳಿದುದಕ್ಕೆ ನೀವು ನನಗೆ ಹೀಗೆ ದ್ರೋಹ ಬಗೆಯಬಹುದೆ?" ಎಂದು ಖಿನ್ನನಾಗಿ ಕೇಳಿದನು.

"ಪ್ರಭು, ಅಂತಹ ಅಪಚಾರ ನನ್ನಿಂದ ಏನಾಯಿತು? ಅಪ್ಪಣೆ ಕೊಡಿಸಬೇಕು!"

"ಮತ್ತಿನ್ನೇನು ಆಗಬೇಕು ! ನನಗೆ ಗೂಢಚಾರರಿಂದ ಬಂದಿರುವ ವಾರ್ತೆ ನಿಜವಾದರೆ-ನಮ್ಮ ಸರ್ವನಾಶವಾಗುವುದು ಖಂಡಿತ!"

"ಪ್ರಭು, ತಾವು ಆ ದ್ರೋಹಿಯಾದ ವನಮಹತನ ಮಾತು ಕೇಳಿಕೊಂಡು ಪ್ರಕ್ಷುಬ್ಧರಾದಂತೆ ಇದೆ. ಬಹುಶಃ ಅವನು ತಮಗೆ ಯವನರ ದಾಳಿಯ ಸಂಗತಿಯನ್ನು ತಿಳಿಸಿರಬೇಕು!"

"ಹೌದು, ನೀವು ಸರಿಯಾಗಿ ಊಹಿಸಿದಿರಿ ? ಈ ವಿಷಯವನ್ನು ನೀವು ತಿಳಿದಿದ್ದರೂ ನನಗೇಕೆ ತಿಳಿಸಲಿಲ್ಲ!"

"ಇದರಲ್ಲಿ ತಮ್ಮ ಅವಗಾಹನೆಗೆ ತರುವಂತಹ ಯಾವ ವಿಷಯವೂ ಇರಲಿಲ್ಲ ಪ್ರಭು, ಇದೊಂದು ಹಳೆಯ ಸಂಗತಿ. ತಮಗೆ ಈಗಲೇ ತಿಳಿಯಬಹುದಾದುದನ್ನೆಲ್ಲಾ ತಿಳಿಸಿದೆ !"

"ಆದರೆ, ನೀವು ಯವನರ ಸೈನ್ಯ ಅನ್ಹಿಲವಾಡದ ಮೇಲೆ ದಂಡೆತ್ತಿ ಬರುತ್ತಿರುವ ಸಂಗತಿ ತಿಳಿಸಲಿಲ್ಲ !"

"ಇದೊಂದು ಪೊಳ್ಳು ವದಂತಿ ಪ್ರಭು, ಯವನರು ಇನ್ನೂ ನಮ್ಮ ಗಡಿಯನ್ನು ತಲುಪಿಯೇ ಇಲ್ಲ. ಜಾಲೋರಿನ ಚಹಮಾಣ ಕೆನ್ಹಡದೆಯು ಅವರಿಗೆ ತನ್ನ ರಾಜ್ಯದಲ್ಲಿ ಪ್ರವೇಶ ಕೊಡಲು ನಿರಾಕರಿಸಿದ್ದಾನೆ !"

"ಆದರೆ, ಆ ದ್ರೋಹಿ ಸಮರಸಿಂಹನು ಶತ್ರುಗಳ ಎಂಜಲಿಗೆ ಬಾಯಿಬಿಟ್ಟು ತನ್ನ ರಾಜ್ಯದಲ್ಲಿ ಅವರು ಪ್ರವೇಶಿಸಲು ರಹದಾರಿ ಕೊಟ್ಟಿರುವನೆಂದು ಕೇಳಿದ್ದೇನೆ !"

"ಪ್ರಭು, ಇದು ಸುಳ್ಳು, ಇದನ್ನೆಲ್ಲಾ ತಾವು ನಂಬಬಾರದು ! ಅಂತಹ ಸುದ್ದಿ ಇದ್ದರೆ, ಇದನ್ನು ಗೂಢಚಾರರು ನನಗೆ ವರದಿಮಾಡದೆ ಇರುತ್ತಿದ್ದರೆ ? ತಾವು ಯಾರದೋ ಮಾತು ಕೇಳಿಕೊಂಡು ಮೋಸ ಹೋಗಿದ್ದೀರಿ !"

"ನಿಮ್ಮ ಬಾಯಿಯ ಹರಕೆಯಂತೆ, ಇದು ಸುಳ್ಳೇ ಆಗಲಿ ! ಸಂತೋಷ. ಆದರೂ-ನಮ್ಮ ಎಚ್ಚರಿಕೆಯಲ್ಲಿ ನಾವು ಇರುವುದು ಒಳ್ಳೆಯದಲ್ಲವೇ ? ನಾವು ನಮ್ಮ ಗಡಿ ರಕ್ಷಣೆಗೆ ಗಮನ ಕೊಡುವುದು ಒಳ್ಳೆಯದಲ್ಲವೇ ?"

"ಪ್ರಭು, ಈ ಬಗ್ಗೆ ಕೈಗೊಳ್ಳಬೇಕಾದ ಎಲ್ಲ ಮುನ್ನೆಚ್ಚರಿಕೆ ಕ್ರಮಗಳನು ಕೈಗೊಳ್ಳಲಾಗಿದೆ. ಈ ಬಗ್ಗೆ ತಾವು ನಿಶ್ಚಿಂತೆಯಿಂದ ಇರಿ !"

"ನನಗೆ ನಿಶ್ಚಿಂತೆಯೆ ? ಶತ್ರುಗಳನ್ನು ಸದೆಬಡಿದಾಗಲೇ ನಿಶ್ಚಿಂತೆ ! ಅವರಿಗೆ ತಕ್ಕ ಬುದ್ಧಿ ಕಲಿಸಬೇಕು ! ದೇವಗಿರಿಯ ಯಾದವರಮೇಲೆ ದೊರೆತ ಜಯದಿಂದ ಹಿಗ್ಗಿ ನಮ್ಮ ಮೇಲೆ ಬೀಳಲು ಬರುತ್ತಿರುವ ವಿಜಯೋನ್ಮತ್ತ ಯವನರನ್ನು ಬಗ್ಗು ಬಡಿದಾಗಲೇ ನನಗೆ ನಿಶ್ಚಿಂತೆ ! ನಾವು ಈಗಲೇ ಸೂಕ್ತಕ್ರಮ ಕೈಗೊಳ್ಳ ಬೇಕಾಗಿದೆ ! ಗಡಿಯಲ್ಲೇ ಶತ್ರುಗಳನ್ನು ಮಾಲೋತ್ಪಾಟನ ಮಾಡಬೇಕೆಂದು ಯೋಚಿಸಿದ್ದೇನೆ !"

"ತಮ್ಮ ಸಲಹೆ ಸೂಕ್ತವಾಗಿದೆ ! ಆದರೆ ಅದಕ್ಕೆ ಇನ್ನೂ ಕಾಲಾವಕಾಶವಿದೆ ! ತಾವು ವೃಥಾ ಆತಂಕ ಗೊಳ್ಳುತ್ತಿದ್ದೀರಿ. ಅಂತಹ ಸಮಯ ಬಂದರೆ ಈ ದೇಹವನ್ನು ಬಲಿಗೊಟ್ಟಾದರೂ ಗುಜರಾತು ಯವನರ ಕೈವಶವಾಗುವುದನ್ನು ತಪ್ಪಿಸುತ್ತೇನೆ. ನೀವು ಈ ಬಗ್ಗೆ ನಿಶ್ಚಿಂತೆಯಿಂದ ಇರಿ !"

ಎಂದು ಕರ್ಣನನ್ನು ಸಮಾಧಾನಗೊಳಿಸಿದ. ಅಷ್ಟರಲ್ಲಿ ಚಾರರು ಆಶಾಪಲ್ಲಿಯಿಂದ ವಾರ್ತೆ ತಂದರು. ಆಲುಘ್‌ಖಾನನು ತನ್ನ ಸೈನ್ಯ ಸಮೇತ ಆಶೀಪಲ್ಲಿಯ ಬಳಿ ಬೀಡು ಬಿಟ್ಟಿರುವನೆಂದು ತಿಳಿಸಿದರು. ಇದನ್ನು ಕೇಳಿ ಕರ್ಣನು, ಮಾಧವನ ಬಳಿಗೆ ಬಂದು,

"ಅಮಾತ್ಯರೇ, ಈಚಿನ ಸುದ್ದಿ ಕೇಳಿದಿರಷ್ಟೆ. ನಾನು ನಿಮ್ಮ ಮಾತು ಕೇಳಿಕೊಂಡು ತಡಮಾಡಿದುದಕ್ಕೆ ಇದೇ ಫಲ. ನಿಮ್ಮನ್ನು ನಿಂದಿಸಿ ಫಲವಿಲ್ಲ–ಈಗ ನಾನೇ ಆಶಾಪಲ್ಲಿಯ ರಕ್ಷಣೆಗೆ ಸೈನ್ಯ ಸಮೇತ ಹೋಗುತ್ತೇನೆ. ನೀವು ರಾಜಧಾನಿಯಲ್ಲಿ ಉಳಿದು, ಅದರ ರಕ್ಷಣೆಗೆ ವ್ಯವಸ್ಥೆಮಾಡಿ !" ಎಂದು ಹೇಳಿ ಅಂದೇ ಆಶಾಪಲ್ಲಿಯ ರಕ್ಷಣೆಗೆ ಸೈನ್ಯ ಸಮೇತ ಹೊರಟನು.

ಮಾಧವನಿಗೆ ಬೇಕಾದುದೂ ಇದೇ. ಇಂತಹ ಸಮಯ ಬಂದೀತೇ ಎಂದು ಅವನು ಕಾಯುತ್ತಿದ್ದನು. ಈಗ ಕರ್ಣನು ರಾಜಧಾನಿಯಿಂದ ದೂರವಿರುವ ಸಮಯವನ್ನು ಸಾಧಿಸಿ, ಸುಲಭವಾಗಿ ಅನ್ಹಿಲವಾಡವನ್ನು ಶತ್ರುಗಳಿಗೆ ಒಪ್ಪಿಸಿ, ಆ ಮೂಲಕ ಕರ್ಣನ ಮೇಲೆ ಸೇಡು ತೀರಿಸಿಕೊಳ್ಳಬೇಕೆಂದು ಯೋಚಿಸಿದನು. ಅವನನ್ನು ಒಂದೇ ಪೆಟ್ಟಿಗೆ ಕೊಲ್ಲುವುದಕ್ಕಿಂತಲೂ ನಿಲ್ಲಲು ನೆಲೆ ಇಲ್ಲದೆ, ದೇಸಿಗನಂತೆ ಅಲೆಯುವಂತೆ ಮಾಡಿ, ಜೀವಂತ ನರಕ ಯಾತನೆ ಅನುಭವಿಸುವಂತೆ ಮಾಡುವುದೇ ಮಾಧವನ ಆಲೋಚನೆಯಾಗಿತ್ತು. ಅವನು ಗೆಲ್ಲಾವುದ್ದೀನನ ದಳಪತಿಗಳಿಗೆ ಅಂದೇ ಪತ್ರ ಬರೆದು, ಅನ್ಹಿಲವಾಡದ ಮೇಲೆ

ದಂಡೆತ್ತಿ ಬಂದರೆ ಅದನ್ನು ರಕ್ತಪಾತವಿಲ್ಲದೆ ಯವನರ ಪಾಲು ಮಾಡುವುದಾಗಿ ಭರವಸೆ ಕೊಟ್ಟನು.

ಈ ಪತ್ರವನ್ನು ಕಂಡು ಅಲೂಫ್ ಖಾನನು ಹಿರಿಹಿರಿಹಿಗ್ಗಿದನು. ಅನಿರೀಕ್ಷಿತ ವಾಗಿ ಇಂತಹ ಕಡೆಯಿಂದ ತನಗೆ ನೆರವು ಬರುವುದೆಂದು ಅವನು ಕನಸಿನಲ್ಲೂ ತಿಳಿದಿರಲಿಲ್ಲ. ಕೂಡಲೇ ಅವನು ಮಾಧವನಿಗೆ ಪತ್ರ ಬರೆದು—ಅವನ ಕಾರ್ಯಕ್ಕೆ ತಾವು ಋಣಿಯಾಗಿರುವುದಾಗಿ ತಿಳಿಸಿ, ಎಲ್ಲವೂ ಯೋಜನೆಯಂತೆ ನಡೆದರೆ, ಮಾಧವನನ್ನು ಗುಜರಾತಿನ ದೊರೆಯಾಗಿ ಮಾಡುವುದಾಗಿ ಆಶ್ವಾಸವಿತ್ತನು. ಇಂತಹ ಪ್ರಲೋಭಕ್ಕಿಂತಲೂ, ಸೇಡಿನ ಸಲುವಾಗಿ ಅವನು ಕರ್ಣನಿಗೆ ದ್ರೋಹ ಬಗೆಯಲು ನಿಶ್ಚಯಿಸಿದ್ದನು.

ಎಲ್ಲವೂ ಯೋಚಿಸಿದಂತೆಯೇ ನಡೆದಿತ್ತು. ಆಶಾಪಲ್ಲಿಯ ರಕ್ಷಣೆಗೆ ಹೋಗಿದ್ದ ಕರ್ಣನು ಶತ್ರುಗಳ ಕೈಯಲ್ಲಿ ಸಂಪೂರ್ಣವಾಗಿ ಸೋತು ಪ್ರಾಣ ಉಳಿಸಿಕೊಳ್ಳುವುದೇ ಕಷ್ಟವಾಯಿತು. ಎಂದೂ ಕೈಯಲ್ಲಿ ಕತ್ತಿ ಹಿಡಿಯದೆ ಇದ್ದ ಅವನಿಗೆ ಇಷ್ಟು ಮಾಡಿದುದೇ ದೊಡ್ಡ ಸಾಹಸವಾಯಿತು. ಅವನು ಸೈನ್ಯವನ್ನು ಹಿಂದೆ ಬಿಟ್ಟು, ಅನ್ಹಿಲವಾಡದ ರಕ್ಷಣೆಗೆ ಧಾವಿಸಿದನು.

ಆದರೆ ನಜರತ್ ಖಾನನ ನೇತೃತ್ವದಲ್ಲಿ ಹೊರಟ ಇನ್ನೊಂದು ಸೈನ್ಯವು ಈ ವೇಳೆಗೆ ಅನ್ಹಿಲವಾಡವನ್ನು ಮುತ್ತಿತ್ತು. ಅವನಿಗೆ ಮಾಧವನು ನೆರವಾಗಿದ್ದನು. ಅವನು ಕೋಟೆಗೆ ಮುತ್ತಿಗೆ ಹಾಕುತ್ತಿದ್ದಂತೆ, ಕೋಟೆಯ ಬಾಗಿಲುಗಳು ತೆರೆಯಲ್ಪಟ್ಟವು. ನಜರತ್ ಖಾನನನ್ನು ಮಾಧವನು ಬಹುಕಾಲದಗೆಳೆಯನೆಂಬಂತೆ ಸ್ವಾಗತಿಸಿ, ಅರಮನೆಗೆ ಕರೆದೊಯ್ದನು. ಅವನಿಗೆ ಕರ್ಣನ ರಾಜ್ಯ ಕೋಶಗಳನ್ನು ಒಪ್ಪಿಸಿದನು. ಇದರಿಂದ ಸುಪ್ರೀತನಾದ ನಜರತ್ ಖಾನನು ಮಾಧವನನ್ನು ಗುಜರಾತಿನ ದೊರೆ ಎಂದು ಘೋಷಿಸಿದನು.

ಮಾಧವನಿಗೆ ತಾನು ಕೈಗೊಂಡಿದ್ದ ಪ್ರತಿಜ್ಞೆಯ ಪೂರ್ವಾರ್ಧ ನೆರವೇರಿತ್ತು. ಇನ್ನು ಉತ್ತರಾರ್ದವು ನೆರವೇರಬೇಕಾಗಿತ್ತು. ಅದು ಕಮಲಾದೇವಿಯ ಕೊಲೆ! ಅದನ್ನು ಸಾಧಿಸಲು ಅವನು ಅವಳ ಅಂತಃಪುರಕ್ಕೆ ಬಂದಾಗ ಅದು ಬರಿದಾಗಿತ್ತು. ನಜರತ್ ಖಾನನು ಅಲ್ಲಾವುದ್ದೀನನ ಆಜ್ಞೆಯಂತೆ, ಕಮಲಾದೇವಿಯನ್ನು ಸೆರೆ ಹಿಡಿದು ದೆಹಲಿಗೆ ಕಳುಹಿಸಿ ಕೊಡಲು ಯೋಚಿಸಿದ್ದನು. ಆದರೆ ಈ ಮೊದಲೇ ಅವರು ಅರಮನೆಯಿಂದ ಹೇಗೋ ತಪ್ಪಿಸಿ

ಕೊಂಡು ಹೋಗಿದ್ದರು. ಈ ಸಂಗತಿ ತಿಳಿದಾಗ ಮಾಧವನಿಗಾದ ನಿರಾಶೆ ಅಷ್ಟಿಷ್ಟಲ್ಲ. ಇದರ ನೂರ್ಮಡಿ ನಿರಾಶೆ ನಜರತ್‌ಖಾನನಿಗೆ ಉಂಟಾಗಿತ್ತು. ಇದಕ್ಕೆ ಮಾಧವನೇ ಕಾರಣನೆಂದು ಬಗೆದು ನಜರತ್‌ಖಾನನು ಮಾಧವನನ್ನು ಕೊಲ್ಲಿಸಿದನು. ಹೀಗೆ ಆ ಸ್ವಾಮಿ ದ್ರೋಹಿಯ ಕತೆ ಕೊನೆಗೊಂಡಿತ್ತು.

ಕರ್ಣನು ಅನ್ಹಿಲ್‌ವಾಡಕ್ಕೆ ಬರುವುದರೊಳಗಾಗಿ ಇಷ್ಟೆಲ್ಲಾ ಹತ್ಯಾಕಾಂಡ ನಡೆದುಹೋಗಿತ್ತು. ಇನ್ನು ರಾಜಧಾನಿಯನ್ನು ಪ್ರವೇಶಿಸಿದರೆ ತಾನು ಶತ್ರುಗಳಿಗೆ ಸಿಕ್ಕುವುದು ಖಂಡಿತವೆಂದು ಯೋಚಿಸಿ, ವೇಷಾಂತರದಲ್ಲಿ ಪ್ರಭಾಸಕ್ಕೆ ಬಂದನು.

ವಿಜಯೋನ್ಮತ್ತ ಯವನ ಸೈನಿಕರು ಈ ವೇಳೆಗಾಗಲೇ ಪ್ರಭಾಸದ ಮೇಲೆ ದಂಡೆತ್ತಿಹೋಗಿ, ಸೋಮನಾಥ ದೇವಾಲಯದ ಮೇಲೆ ಧಾಳಿ ಇಟ್ಟಿದ್ದರು. ಅದನ್ನು ಯವನರಿಂದ ಉಳಿಸಿಕೊಳ್ಳಲು ಬಡಾಮಹಾರಾಜನು ಮಾಡಿದ್ದ ಎಲ್ಲ ಪ್ರಯತ್ನ ವಿಫಲವಾಗಿತ್ತು. ಅದರ ಪೂಜಾರಿಗಳು, ಮೂಲ ವಿಗ್ರಹವು ಶತ್ರುಗಳಿಗೆ ದೊರಕದಂತೆ ಅದನ್ನು ಅಡಗಿಸಿ, ಕೃತಕ ವಿಗ್ರಹವನ್ನು ಶತ್ರುಗಳಿಗೆ ಬಲಿಕೊಟ್ಟು ಪುರಾತನ ಸೋಮನಾಥನನ್ನು ಉಳಿಸಿದರು.

ಪ್ರಭಾಸದಲ್ಲಿ ಮುಸಲ್ಮಾನರು ಮಾಡಿದ ಅತ್ಯಾಚಾರಕ್ಕೆ ಕೊನೆ ಮೊದಲಿಲ್ಲ. ಅವರು ಮನೆಗಳನ್ನು ಸೂರೆ ಹೊಡೆದರು. ದೇವಾಲಯದ ಆಭರಣಗಳನ್ನು ದೋಚಿದರು. ಅನೇಕ ಸ್ತ್ರೀಯರ ಪಾತಿವ್ರತ್ಯದ ಹರಣವಾಯಿತು. ಗೋಬ್ರಾಹ್ಮಣರು ಅವರ ಕೂರ್ಗತ್ತಿಗೆ ಬಲಿಯಾದರು. ಇದನ್ನೆಲ್ಲಾ ನೋಡಿ ಭಾವುಕರು ಶಿವನ ಅಸ್ತಿತ್ವವನ್ನೇ ಶಂಕಿಸಿದರು. ಅವನನ್ನು ಅನ್ಯಾಯಗಳನ್ನು ಕಂಡು ಸುಮ್ಮನಿರುವ ಹೇಡಿಯೆಂದು ಜರೆದರು.

"ಓ ರುದ್ರದೇವ! ನಿನ್ನ ಹೂಮಾಲೆ ಅಸಭ್ಯ ಯವನ ರಾಕ್ಷಸರಿಂದ ಬೂದಿಯಾದರೂ ಜಗತ್ತಿನ ಧರ್ಮವನ್ನು ಉದ್ಧರಿಸಲು ಬರಲಿಲ್ಲವೇಕೆ? ದಾನವರ ಶಕ್ತಿಗೆ ನೀ ಅಂಜಿ ಕುಳಿತೆಯಾ? ಓ ತ್ರಿಪುರಾತಂಕ! ನಿನ್ನ ತ್ರಿಶೂಲವನ್ನು ಎಲ್ಲಿ ಅಡಗಿಸಿದೆ?"

—ಎಂದು ಕವಿ ಪದ್ಮನಾಭನು ತನ್ನ ಕಾವ್ಯದಲ್ಲಿ ಉದ್ಗಾರ ತೆಗೆದಿದ್ದಾನೆ.

ದೇವಾಲಯವನ್ನು ಶತ್ರುಗಳಿಂದ ಉಳಿಸಿಕೊಳ್ಳಲು ವಾಜಾಯೋಧರಾದ ಮಾಲಸುತ ಮತ್ತು ಪದ್ಮಲರು ಮಾಡಿದ ಸಾಹಸ ವ್ಯರ್ಥವಾಗಿತ್ತು. ಇಂತು

ಜಗತ್ಪ್ರಸಿದ್ಧವಾದ ಸೋಮನಾಥ ದೇವಾಲಯವು ಕ್ರಿ. ಶ. ೧೨೯೯ನೇ ಜೂನ್ ೬ನೇ ದಿನಾಂಕ ಶತ್ರುಗಳಿಗೆ ವಶವಾಯಿತು.

ಅಲ್ಲಿಂದ ಹೊರಟ ಯವನ ಸೈನಿಕರು ಕ್ಯಾಂಬೆಯ ಮೇಲೆ ದಾಳಿಯಿಟ್ಟು ಅದನ್ನು ವಶಪಡಿಸಿಕೊಂಡು ತಮ್ಮ ಪೈಶಾಚಿಕ ಪ್ರಭುತ್ವಕ್ಕೆ ಬಲಿಗೊಟ್ಟರು. ಇದನ್ನೆಲ್ಲಾ ಕಂಡಮೇಲೆ ಕರ್ಣನಿಗೆ ಎದೆಯೊಡೆಯಿತು. ತನ್ನ ಅಸಹಾಯ ಸ್ಥಿತಿಯಲ್ಲಿ ಅವನು ಏನೂ ಮಾಡುವಂತೆ ಇರಲಿಲ್ಲ. ಅವನು ತನ್ನನ್ನು ಶತ್ರುಗಳಿಗೆ ಹಿಡಿದುಕೊಟ್ಟವರಿಗೆ ಬಹುಮಾನವಿದೆ ಎಂಬುದನ್ನು ಅರಿತು, ಬೇರೆ ದಾರಿ ಕಾಣದೆ ಅಲ್ಲಿಂದ ತಲೆ ತಪ್ಪಿಸಿಕೊಂಡನು.

ಕ್ಯಾಂಬೆಯು ಯವನರಿಗೆ ವಶವಾದ ಮೇಲೆ, ಅಲ್ಲಿದ್ದ ಸಮಸ್ತ ಸಂಪತ್ತು ಅವರಿಗೆ ಸೂರೆಯಾಯಿತು. ಈ ಎಲ್ಲ ಸಂಪತ್ತಿಗೆ ಮಿಗಿಲಾದ ಸಂಪತ್ತು – ಮಲ್ಲಿಕಾಪೂರ್ ಎಂಬುವನು – ಅಲ್ಲಾವುದ್ದೀನನಿಗೆ ದೊರಕಿದ್ದನು ಮುಂದೆ ಇವನ ಹೆಸರು ಭಾರತದ ಇತಿಹಾಸದಲ್ಲಿ ರಕ್ತಾಕ್ಷರಗಳಿಂದ ಬರೆಯುವಂತೆ ಆಯಿತು.

ಮಲ್ಲಿಕಾಪೂರನ ಮೊದಲಿನ ಹೆಸರು ಮಾಲಿಕ ಕಪೂರನೆಂದು. ಅವನು ಜಾತಿ ಕೆಟ್ಟು ಮುಸ್ಲಿಮನಾಗಿದ್ದನು. ಅವನ ಜೀವನ ಮೊದಲಿನಿಂದ ಕಡೆಯ ತನಕ ಒಂದು ಸಾಹಸಪೂರ್ಣ ರೋಮಾಂಚಕ ಕಥೆಯಾಗಿತ್ತು.

ಕಪೂರನು ತಾಯಿತಂದೆಗಳನ್ನು ಬಾಲ್ಯದಲ್ಲೇ ಕಳೆದುಕೊಂಡು ತಬ್ಬಲಿಯಾಗಿದ್ದನು. ಅವನ ಮೇಲೆ ಕರುಣೆಗೊಂಡು ಅವನ ಚಿಕ್ಕಮ್ಮನು ಸಾಕಿದ್ದಳು. ಅವಳಿಗೆ ಸೋಮನಾಥ ದೇವಾಲಯದಲ್ಲಿ ಕಸ ಗುಡಿಸುವ ಕೆಲಸವಿತ್ತು. ಹೀಗಾಗಿ ಕಪೂರನಿಗೆ ದೇವಾಲಯದಲ್ಲಿ ಸೇವಕನ ಕೆಲಸ ದೊರಕಿತು. ಇಷ್ಟರಿಂದಲೇ ತೃಪ್ತಿಯಾಗುವ ಚೇತನ ಅವನದಾಗಿರಲಿಲ್ಲ. ಅವನದು ಸ್ವಭಾವತಃ ಸಾಹಸ ಪ್ರವೃತ್ತಿ. ಅವನು ಸೋಮನಾಥ ದೇವಾಲಯದಲ್ಲಿ ಹೆಚ್ಚು ಕಾಲ ನಿಲ್ಲಲಿಲ್ಲ.

ಕಪೂರನು ಸಾಹಸಪ್ರಿಯನಾಗಿದ್ದಂತೆ ಸರಸಿಯೂ, ಸುಂದರನೂ ಆಗಿದ್ದನು. ಅವನು ತಾನು ಸಾಮಾನ್ಯ ಸೇವಕನೆಂಬುದನ್ನು ಮರೆತು, ದೇವಾಲಯದ ನರ್ತಕಿಯ ಮಗಳಲ್ಲಿ ಮೋಹಗೊಂಡಿದ್ದನು. ಅವಳೂ ಕಾಪೂರನ ಸುಂದರ ರೂಪಿಗೆ ಮಾರುಹೋಗಿದ್ದಳು. ಇದು ತಾಯಿಯ

ಗಮನಕ್ಕೆ ಬಂದು ಅವಳು ಈ ಬಗ್ಗೆ ಕಪೂರನನ್ನು ಹೀನಾಮಾನವಾಗಿ ಬೈದಳು. ಅವಳು ಇಷ್ಟಕ್ಕೇ ಸುಮ್ಮನಾಗದೆ ಈ ವಿಷಯವನ್ನು ಅವನ ಚಿಕ್ಕಮ್ಮನ ಕಿವಿಗೂ ಹಾಕಿದಳು. ಇದರ ಪ್ರತ್ಯಕ್ಷ ಪರಿಣಾಮ : ಆ ರಾತ್ರಿಯೇ ಕಪೂರನೂ ಆ ನರ್ತಕಿಯ ಮಗಳೂ ಕಣ್ಮರೆಯಾದರು. ಅವರು ಎಲ್ಲಿ ಹುಡುಕಿದರೂ ದೊರೆಯಲಿಲ್ಲ. ವರ್ಷಗಳು ಉರುಳಿದಂತೆ ಜನ ಅವರನ್ನು ಮರೆತರು.

ಕಪೂರನು ಆ ರಾತ್ರಿ ನರ್ತಕಿಯ ಮಗಳೊಂದಿಗೆ ಹೊರಟವನು – ಕ್ಯಾಂಬೆಗೆ ಬಂದನು. ಅಲ್ಲಿ ನರ್ತಕಿಯ ಮೈಮೇಲಿದ್ದ ಒಡವೆಗಳನ್ನು ಮಾರಿ ಕೊಂಡು ಕೆಲವು ದಿನ ಜೀವನ ಮಾಡಿದನು. ಮುಂದೆ ಯಾವುದೂ ಕೆಲಸ ದೊರೆಯದೆ, ಜೀವನ ನಿರ್ವಹಣೆ ಕಷ್ಟವಾಗಲು, ಕಪೂರನು ತನ್ನನ್ನು ನಂಬಿ ಬಂದಿದ್ದ ನಲ್ಲೆಯನ್ನೇ ಒಬ್ಬ ಅರಬ್ಬಿ ವರ್ತಕನಿಗೆ ಮಾರಿಬಿಟ್ಟನು! ಹೀಗೆ ಕೆಲವು ದಿನ ಕಾಲಹಾಕಿದನು.

ಅಷ್ಟರಲ್ಲಿ ಮಸ್ಕಟ್ಟಿನ ವ್ಯಾಪಾರಿಯೊಬ್ಬನ ಗಮನಕ್ಕೆ ಬಿದ್ದನು. ಅವನು ಕುದುರೆ ವ್ಯಾಪಾರ ಮಾಡುತ್ತಿದ್ದನು. ಅವನು ಕ್ಯಾಂಬೆಯಲ್ಲಿ ತಂಗಿದ್ದಾಗ ಕಾಪೂರನ ಅಸಾಧಾರಣ ರೂಪ ಗಮನಕ್ಕೆ ಬಂದಿತು. ಅವನ ವಾಕ್ ಚಾತುರ್ಯ, ಸಾಹಸಪ್ರಿಯತೆಗಳು ಮನಸ್ಸಿಗೆ ಬಂದವು. ಅವನು ಕಪೂರನನ್ನು ಸೇವಕನಾಗಿ ಸ್ವೀಕರಿಸಿದನು. ಬಹು ಬೇಗ ಕಪೂರನು ಅವನ ಅಂತರಂಗದ ಮಿತ್ರನೂ, ಸಹಭೋಗಿಯೂ ಆದನು.

ಕಪೂರನಲ್ಲಿ ಸ್ತ್ರೀಯರನ್ನು ಆಕರ್ಷಿಸುವಂತೆಯೇ ಪುರುಷರನ್ನೂ ಆಕರ್ಷಿ ಸುವ ಗುಣವಿತ್ತು. ಅವನು ಬಾಲ್ಯದಲ್ಲೇ ದುಶ್ಚಟಗಳಿಗೆ ಬಿದ್ದು, ಕೀಳುಜನರ ಸಹವಾಸದಲ್ಲಿ ಸಾಲಿಂಗ ಸಖ್ಯದ ಸವಿಯನ್ನು ಅನುಭವಿಸಿದ್ದನು. ಮಸ್ಕಟ್ಟಿನ ವ್ಯಾಪಾರಿಗೆ ಕಪೂರನು ಪ್ರಿಯವಾದುದು ಇದೇ ಕಾರಣಕ್ಕಾಗಿ. ಅವರಿಬ್ಬರ ಸ್ನೇಹ ಗಾಢವಾದಂತೆ ಕಪೂರನು ಹಿಂದೂ ಧರ್ಮವನ್ನು ತೊರೆದು ಮುಸ್ಲಿಂ ಧರ್ಮವನ್ನು ಸ್ವೀಕರಿಸಿ ಮಲ್ಲಿಕಾಫೂರನಾದನು.

ವಿಧಿ ಅಲ್ಲಿಗೇ ಅವನನ್ನು ಬಿಡಲಿಲ್ಲ. ಒಂದು ದಿನ ವ್ಯಾಪಾರಿಯು ಕಾಫೂರನೊಡನೆ ಹಡಗಿನಲ್ಲಿ ಪ್ರಯಾಣ ಮಾಡುತ್ತಿದ್ದಾಗ ಕಡಲ್ಗಳ್ಳರು ಹಡಗನ್ನು ಮುತ್ತಿ ಅದನ್ನು ವಶಪಡಿಸಿಕೊಂಡರು. ಅವರು ನಿಷ್ಕರುಣೆಯಿಂದ

ವ್ಯಾಪಾರಿಯನ್ನು ಕೊಂದು, ಅವನ ಸಂಪತ್ತನ್ನೆಲ್ಲಾ ಅಪಹರಿಸಿದರು. ಕಾಫೂರನನ್ನು ಮಾತ್ರ ಕೊಲ್ಲದೆ, ಅವನನ್ನು ಗುಲಾಮನನ್ನಾಗಿ ಮಾರಿ ಬಿಟ್ಟರು – ಕ್ಯಾಂಬೆಯ ರಾಮಚಂದನೆಂಬುವನು ಅವನನ್ನು ಒಂದು ಸಾವಿರ ದಿನಾರಗಳಿಗೆ ಕೊಂಡುಕೊಂಡನು. ಅಲ್ಲಿಂದಾಚೆಗೆ ಮಲ್ಲಿಕಾಫೂರನಿಗೆ 'ಹಜಾರಿ ದಿನಾರಿ' ಎಂಬ ಹೆಸರು ಬಂತು.

ಯವನ ಸೈನಿಕರು ಕ್ಯಾಂಬೆಯನ್ನು ಮುತ್ತಿ ವಶಪಡಿಸಿಕೊಂಡಾಗ ಸೇಟ್ ರಾಮಚಂದನು ಅವರಿಗೆ ಬಲಿಯಾಗಿದ್ದನು. ರಾಮಚಂದನು ಸುಪ್ರಸಿದ್ಧ ಕುದುರೆ ವ್ಯಾಪಾರಿ. ಕ್ಯಾಂಬೆಯ ವಣಿಕ ಮಂಡಲದಲ್ಲಿ ಪ್ರತಿಷ್ಠಿತ ವ್ಯಕ್ತಿ. ಅವನು ಪರ್ಶಿಯ, ಓರ್ಮೊಸ್, ಅರಬ್ಬೀ ಸ್ಥಾನಗಳಿಂದ ಶ್ರೇಷ್ಠ ದರ್ಜೆಯ ಕುದುರೆಗಳನ್ನು ತರಿಸಿಕೊಂಡು ಲಾಭದಾಯಕ ಉದ್ಯಮವನ್ನು ಕೈಗೊಂಡಿದ್ದನು. ಇದರ ಜತೆಗೆ ಅವನು ರತ್ನಪಡಿ ವ್ಯಾಪಾರವನ್ನು ಕೈಗೊಂಡಿದ್ದನು. ಶತ್ರುಗಳು ನಗರದ ಮೇಲೆ ಧಾಳಿಯಿಟ್ಟಾಗ ಅವನು ತನ್ನ ಸಂಪತ್ತನ್ನೆಲ್ಲಾ ಭೂಗತ ಮಾಡಿ, ತನ್ನ ಮಳಿಗೆಗೆ ತಾನೇ ಬೆಂಕಿ ಇಟ್ಟಿದ್ದನು. ಶತ್ರುಗಳ ಕೈಯಿಂದ ಪಾರಾಗಬೇಕೆಂಬುದೇ ಅವನ ಉದ್ದಿಶ್ಯ. ಆದರೆ ಅವನ ಕುದುರೆ ಲಾಯದಲ್ಲಿ ನೂರಾರು ಅರಬ್ಬೀ ಠಾಕಣಗಳು ಇದ್ದವು. ಇವುಗಳು ಮಲ್ಲಿಕಾಫೂರನ ಮೇಲ್ವಿಚಾರಣೆಯಲ್ಲಿದ್ದವು. ಅವನಿಗೆ ಅಶ್ವವಿದ್ಯೆ ತಿಳಿದಿತ್ತು. ನೋಟಮಾತ್ರ ದಿಂದ ಉಚ್ಚ ನೀಚ ಕುದುರೆಗಳನ್ನು ವರ್ಗೀಕರಿಸುವ ಕಲೆ ತಿಳಿದಿತ್ತು. ಹೀಗಾಗಿ ಕುದುರೆ ವ್ಯಾಪಾರದಲ್ಲಿ ಸೇಟನಿಗೆ ಅವನು ಅಮೂಲ್ಯವಾದ ಆಸ್ತಿಯಾಗಿದ್ದನು. ಸೇಟನು ಅವನನ್ನು ಆಪ್ತಮಿತ್ರನಂತೆ ನೋಡಿಕೊಳ್ಳುತ್ತಿದ್ದನು.

ಶತ್ರುಸೈನಿಕರು ಕ್ಯಾಂಬೆಯು ತಮ್ಮ ವಶವಾದ ಮೇಲೆ ನಗರವನ್ನು ಸುಲಿಯಲು ಆರಂಭಿಸಿದರು. ಅವರು ಕಣ್ಣಿಗೆ ಬಿದ್ದ ಮನೆಗೆ ನುಗ್ಗಿ, ಕೈಗೆ ಸಿಕ್ಕಿದ ಬೆಲೆ ಬಾಳುವ ವಸ್ತುವನ್ನು ಅಪಹರಿಸುತ್ತಾ ನಡೆದರು. ಪ್ರತಿಭಟಿಸಿ ದವರನ್ನು ಕೊಲ್ಲುತ್ತಲೂ, ಅವರ ಮನೆಗಳಿಗೆ ಬೆಂಕಿ ಇಡುತ್ತಲೂ ಹೊರಟರು. ಅವರ ಕಣ್ಣಿಗೆ ಸೇಟನು ಬೀಳದೆ ಇರಲಿಲ್ಲ. ಅವನು ಶತ್ರುಗಳಿಗೆ ಸುಟ್ಟು ಹೋಗಿದ್ದ ಮಾಳಿಗೆಯನ್ನು ತೋರಿಸಿ, ತನ್ನ ಸಂಪತ್ತೆಲ್ಲವೂ ನಾಶವಾಗಿ ತಾನು ನಿರ್ಗತಿಕನಾಗಿರುವುದಾಗಿ ಹೇಳಿಕೊಂಡು ಅತ್ತನು. ಅವನ ಕಣ್ಣೀರನ್ನು ಸೈನಿಕರು ನಂಬಲಿಲ್ಲ. ಅವನು ಬೆಲೆಬಾಳುವ ವಸ್ತುವನ್ನು ಎಲ್ಲೋ ಅಡಗಿಸಿರ

ಬೇಕೆಂದು ಆಲೋಚಿಸಿ ಅವನ ಮನೆಯನ್ನು ನೆಲಸಮ ಮಾಡಿದರು. ಕಡೆಗೆ ಏನೊಂದು ಬೆಲೆಬಾಳುವ ವಸ್ತುವೂ ದೊರೆಯದೆ ಇರಲು, ಅವನ ಕುದುರೆಗಳನ್ನೇ ಕಿತ್ತುಕೊಂಡು ಹೊರಟುಹೋದರು. ಆ ಸಮಯದಲ್ಲಿ ಮಲ್ಲಿಕಾಫೂರನ್ನು ಅವರನ್ನು ಪ್ರತಿಭಟಿಸಿದನು. ನೂರು ಕುದುರೆಗಳಲ್ಲಿ ತನ್ನ ಸ್ವಂತ ಕುದುರೆಯೊಂದು ಸೇರಿರುವುದಾಗಿಯೂ ಅದನ್ನು ಕಿತ್ತುಕೊಳ್ಳಬಾರದೆಂದು ಅಲೂಫ್‌ಖಾನನಿಗೆ ಮೊರೆಯಿಟ್ಟನು. ಆದರೆ ಅವನ ಮೊರೆಯನ್ನು ಖಾನನು ತಿರಸ್ಕರಿಸಿದನು.

ಆ ದಿನ ರಾತ್ರಿ ಸೇಟನಿಂದ ಕಿತ್ತುಕೊಂಡಿದ್ದ ಕುದುರೆಗಳನ್ನೆಲ್ಲಾ ತಮ್ಮ ಲಾಯದಲ್ಲಿ ಕಟ್ಟಿ, ಸೈನಿಕರು ಸುಖವಾಗಿ ನಿದ್ರಿಸುತ್ತಿದ್ದರು. ಮಲ್ಲಿಕಾಫೂರನು ಕೈಲಿ ಕತ್ತಿಹಿಡಿದು, ಕುದುರೆಲಾಯಕ್ಕೆ ಬಂದನು. ಕಳ್ಳತನದಲ್ಲಿ ತನ್ನ ಕುದುರೆಯನ್ನು ಕದ್ದೊಯ್ಯಲು ಪ್ರಯತ್ನಿಸಿದನು. ಆದರೆ ಅವನ ದುರಾದೃಷ್ಟದಿಂದ ಅಲ್ಲಿದ್ದ ಕಾವಲು ಸೈನಿಕರಿಗೆ ಎಚ್ಚರವಾಗಿ, ಅವರು ಕಾಫೂರನ ಮೇಲೆ ಬಿದ್ದರು. ಅವರು ಬಹು ಸಂಖ್ಯಾತರಾಗಿದ್ದರೂ ಹಿಂಜರಿಯದೆ ಕಾಫೂರನು ಪ್ರಾಣದ ಹಂಗು ತೊರೆದು ಅವರ ಮೇಲೆ ಯುದ್ಧಮಾಡಿ, ನಾಲ್ಕಾರು ಸೈನಿಕರನ್ನು ನೆಲಕ್ಕೆ ಉರುಳಿಸಿದನು. ಆದರೆ ಬಹು ಸಂಖ್ಯೆಯಲ್ಲಿದ್ದ ಯವನ ಸೈನಿಕರು ಸುಲಭವಾಗಿ ಕಾಫೂರನನ್ನು ನಿಶಸ್ತ್ರಗೊಳಿಸಿ ಸೆರೆಹಿಡಿದರು. ಅವನನ್ನು ಅಲೂಫ್‌ಖಾನನ ಮುಂದೆ ನಿಲ್ಲಿಸಿದರು.

ಖಾನನು ಏಕಾಂಗಿಯಾಗಿ ಇಂತಹ ಅಪಾಯಕರ ಸಾಹಸಕ್ಕೆ ಎಳಸಿದ್ದ ಮಲ್ಲಿಕಾಫೂರನನ್ನು ವಿಸ್ಮಯದಿಂದ ನೋಡಿ,

"ನಿನ್ನ ಹೆಸರು ಏನು ?" ಎಂದು ದರ್ಪದಿಂದ ಕೇಳಿದ ಅಲೂಫ್‌ಖಾನ್.

"ಮಲ್ಲಿಕಾಫೂರ್ !"

"ನೀನು ಹಿಂದುವೋ, ಮುಸಲ್ಮಾನನೋ ?"

"ಜಾತಿ ಕೆಟ್ಟ ಹಿಂದು !"

"ಒಳ್ಳೆಯದು, ನೀನು ಏಕೆ ಕುದುರೆಯನ್ನು ಕದಿಯಲು ನಮ್ಮ ಲಾಯಕ್ಕೆ ಬಂದೆ ?"

"ನಾನು ಕದಿಯಲು ಬರಲಿಲ್ಲ ಹುಜೂರ್ ! ನನ್ನ ಕುದುರೆಯೊಂದನ್ನು ಮೋಸದಿಂದ ಕಿತ್ತುಕೊಂಡು ಇಲ್ಲಿ ಕಟ್ಟಿದ್ದರು. ಆದನ್ನು ಬಿಡಿಸಿಕೊಂಡು ಹೋಗಲು ಬಂದೆ !"

"ಯಾವುದು ನಿನ್ನ ಕುದುರೆ? ಇಲ್ಲಿರುವುದೆಲ್ಲಾ ನಮ್ಮ ಕುದುರೆಗಳು ! ನಮಗೆ ಊರಿನಲ್ಲಿ ದೊರೆತ ಸೂರೆ ! ನೀನು ನಮ್ಮ ಕುದುರೆಗಳನ್ನು ಕದಿಯಲು ಬಂದುದಲ್ಲದೆ, ನಾಲ್ವರು ಸೈನಿಕರನ್ನು ಕೊಂದಿರುವೆ ! ಇದು ಎಂತಹ ಅಪರಾಧ ವೆಂದು ತಿಳಿದಿದೆಯೆ ?"

"ತಿಳಿದಿದೆ ಹುಜೂರ್ ! ಮರಣದಂಡನೆ !"

"ಇದನ್ನು ತಿಳಿದೂ ತಿಳಿದು – ಈ ಸಾಹಸಕ್ಕೆ ಎಳೆಸಿದೆಯಾ ?"

"ಹೌದು !"

"ಏಕೆ ? ನಿನಗೆ ಪ್ರಾಣದ ಮೇಲೆ ಆಸೆ ಇಲ್ಲವೆ ?"

"ಆ ನನ್ನ ಕುದುರೆ ಇಲ್ಲದ ಮೇಲೆ ನಾನು ಬದುಕಿದ್ದೂ ಸತ್ತಂತೆ ಹುಜೂರ್ !"

ಈ ಮಾತು ಕೇಳಿ ಅಲೂಫ್‌ಖಾನನು ಚಕಿತನಾದನು. ತನ್ನ ಪ್ರಶ್ನೆ ಗಳಿಗೆ ದಿಟ್ಟತನದಿಂದ ಉತ್ತರ ಕೊಟ್ಟ ಅವನನ್ನು ನೋಡಿ ಬೆರಗಾದನು.

"ಇಲ್ಲಿರುವ ಸಾವಿರಾರು ಕುದುರೆಗಳಲ್ಲಿ ನಿನ್ನ ಕುದುರೆ ಯಾವುದು, ಅದನ್ನು ಗುರುತಿಸಬಲ್ಲೆಯಾ ?"

"ಗುರುತಿಸಬಲ್ಲೆ ಹುಜೂರ್ !" ಎಂದು ಹೇಳಿ ತನ್ನ ಬಲಗೈಯ ಎರಡು ಬೆರಳುಗಳನ್ನು ಭೂಮಿಯಲ್ಲಿ ಇಟ್ಟುಕೊಂಡು ಎರಡು ಬಾರಿ ಶಿಲ್ಲು ಹೊಡೆದನು. ಆ ಧ್ವನಿಯನ್ನು ಕೇಳಿದ ಮಾತ್ರಕ್ಕೆ ಅವನ ಕುದುರೆ ತನ್ನ ಹಗ್ಗವನ್ನು ಕಿತ್ತು ಕೊಂಡು, ಅವನ ಬಳಿಗೆ ಬಂದು ನಿಂತಿತು. ಈ ದೃಶ್ಯವನ್ನು ಅಲೂಫ್‌ಖಾನನು ನೋಡಿ ಬೆರಗಾದನು.

"ಅಯ್ಯಾ ಕಾಫೂರ್ ! ಕುದುರೆಯ ಮೇಲೆ ನಿನಗೆ ಇಷ್ಟೊಂದು ಪ್ರೀತಿ ಇಲ್ಲದೆ ಇದ್ದಿದ್ದರೆ ಆದರಸಲುವಾಗಿ ನೀನು ಪ್ರಾಣವನ್ನೇ ಲೆಕ್ಕಿಸದೆ ಈ ಅಪಾಯ ಕರ ಸಾಹಸಕ್ಕೆ ತೊಡಗುತ್ತಿರಲಿಲ್ಲ. ನಿನ್ನ ಅಭಿಮಾನಕ್ಕೆ ಈ ಕುದುರೆ ನಿಜಕ್ಕೂ ತಕ್ಕುದಾಗಿದೆ ! ಇದನ್ನು ನಿನಗೇ ಮತ್ತೆ ಹಿಂದಿರುಗಿಸುತ್ತೇನೆ. ಇದನ್ನು

ನೀನು ಬೆಲೆಗೆ ಮಾರುತ್ತೀಯಾ? ಇಂತಹ ಶ್ರೇಷ್ಠ ಕುದುರೆಗಳು ನಮ್ಮ ಸುಲ್ತಾನರಲ್ಲಿ ಇದ್ದರೆ ಭೂಷಣ!"

"ಹುಜೂರ್, ನನ್ನ ಮಾತನ್ನು ತಾವು ಅನ್ಯಥಾ ತಿಳಿಯದಿದ್ದರೆ, ಒಂದು ಮಾತನ್ನು ನಾದು ಬಿನ್ನವಿಸಿಕೊಳ್ಳುತ್ತೇನೆ. ಈ ಕುದುರೆ ನನ್ನಲ್ಲಿ ಪ್ರಾಣ ವಿಟ್ಟುಕೊಂಡಿದೆ, ನನ್ನ ಪ್ರಾಣ ಅದರಲ್ಲಿದೆ. ನಾವು ಇಬ್ಬರೂ ಈ ಜನ್ಮದಲ್ಲಿ ಅಗಲಿರಲು ಸಾಧ್ಯವಿಲ್ಲ – ಅಗಲಿದಾಗಲೇ ನಮ್ಮ ಸಾವು. ಆದುದರಿಂದ ಹೇಳುತ್ತೇನೆ. ನನಗೆ ಒಂದು ಲಕ್ಷ ವರಹ ಕೊಟ್ಟರೂ ಈ ಕುದುರೆಯನ್ನು ನಾನು ಯಾರಿಗೂ ಮಾರಲಾರೆ! ತಾವು ನನ್ನನ್ನು ಒತ್ತಾಯಪಡಿಸುವುದ ರಿಂದ ಪ್ರಯೋಜನವಿಲ್ಲ!"

"ಹಾಗಾದರೆ ಕುದುರೆಗೆ ಅಷ್ಟೊಂದು ಬೆಲೆಯೆ?"

"ಇದು ಕೇವಲ ಕುದುರೆಯಲ್ಲ ಹುಜೂರ್! ನನ್ನ ಗೆಳೆಯ, ಬಂಧು, ಒಡಹುಟ್ಟಿದುದು – ಎಲ್ಲಾ ಆಗಿದೆ. ಇದೂ ಒಂದು ಅಪೂರ್ವ ಸೃಷ್ಟಿ. ಇದಕ್ಕೆ ಮಾತೊಂದು ಬರುವುದಿಲ್ಲ – ಆದರೆ ಎಲ್ಲವೂ ತಿಳಿಯುತ್ತದೆ. ಇದು ಎಲ್ಲೂ ನಿಲ್ಲದೆ ನೂರು ಮೈಲಿಯನ್ನಾದರೂ ಓಡುತ್ತದೆ. ತನ್ನ ಒಡೆಯನ ಸಲುವಾಗಿ ಪ್ರಾಣವನ್ನು ಕೊಡುತ್ತದೆ!"

"ಹೋಗಲಿ, ಈ ಕುದುರೆಯನ್ನು ನಿನಗೆ ಮಾರಲು ಇಚ್ಛೆಯಿಲ್ಲದಿದ್ದರೆ ನೀನಾದರೂ ಈ ಕುದುರೆಯ ಜತೆಯಲ್ಲೇ ನಮ್ಮ ಸೇವೆಗೆ ನಿಲ್ಲುತ್ತೀಯಾ? ನಿನ್ನಂಥ ಅಸಾಧಾರಣವೀರನನ್ನೂ, ನಿನ್ನ ಅಸಾಧಾರಣ ಕುದುರೆಯನ್ನೂ ನೋಡಿದರೆ ನಮ್ಮ ಸುಲ್ತಾನರು ತುಂಬಾ ಸಂತೋಷ ಪಡುತ್ತಾರೆ. ನೀನು ಹೇಗೂ ಮುಸ್ಲಿಮನಾಗಿದ್ದಿ. ಸುಲ್ತಾನನ ಸೇವೆಯನ್ನು ಸ್ವೀಕರಿಸುವುದಾದರೆ, ನಿಷ್ಠೆ ಯಿಂದ ನಮ್ಮನ್ನು ಸೇವಿಸುವುದಾಗಿ ಖುರಾನು ಮುಟ್ಟಿ ಪ್ರಮಾಣ ಮಾಡಿದರೆ, ನಿನ್ನ ಸರ್ವಾಪರಾಧಗಳನ್ನು ಮನ್ನಿಸಿ, ನಿನ್ನನ್ನು ನಿನ್ನ ಕುದುರೆಯ ಸಮೇತ ನಮ್ಮ ಸೇವೆಗೆ ತೆಗೆದುಕೊಳ್ಳುತ್ತೇವೆ!"

"ಹುಜೂರ್! ತಮ್ಮ ಮಾತಿಗೆ ಹೇಗೆ ಉತ್ತರ ಹೇಳಬೇಕೋ ತಿಳಿಯ ದಾಗಿದೆ! ಇದು ನನಗೆ ಮಹಾ ಪ್ರಸಾದ! ಗುಲಾಮನ ಮೇಲೆ ತಮ್ಮ ಅನು ಗ್ರಹ ಹೆಚ್ಚಾಯಿತು! ಇದನ್ನು ಈ ಜನ್ಮದಲ್ಲಿ ತೀರಿಸಲಾರೆ!

ಅಂದೇ ಖಾನನು ಮಲ್ಲಿಕಾಪೂರನ ಕೈಯಲ್ಲಿ ಪ್ರಮಾಣ ವಚನ ಸ್ವೀಕರಿಸಿ ಅವನನ್ನು ನೂರು ಕುದುರೆಗಳ ದಳಪತಿಯನ್ನಾಗಿ ಮಾಡಿ, ಗುಜರಾತಿನಲ್ಲಿ ತಮಗೆ ದೊರೆತ ಸೂರೆಯನ್ನು ಸುರಕ್ಷಿತವಾಗಿ ದೆಹಲಿಗೆ ಮುಟ್ಟಿಸುವ ಮಹತ್ವದ ಹೊಣೆಗಾರಿಕೆಯನ್ನು ಅವನಿಗೆ ಒಪ್ಪಿಸಿ, ಅವನನ್ನು ಕಳುಹಿಸಿಕೊಟ್ಟನು.

ಮಲ್ಲಿಕಾಪೂರನು ತನಗೆ ದೊರೆತ ಸನ್ಮಾನದಿಂದ ಹಿಗ್ಗದೆ, ಅಲೂಫ್ ಖಾನನ ನಂಬಿಕೆಗೆ ತಾನು ಎಷ್ಟರಮಟ್ಟಿಗೆ ಪಾತ್ರನೋ ಎಂದು ಶಂಕಿಸುತ್ತಲೇ ತನ್ನ ಹೊಣೆಗಾರಿಕೆಗೆ ಹೆಗಲನ್ನು ಕೊಟ್ಟಿದ್ದನು. ಅವನಿಗೆ ಗುಲಾಮನಾಗಿದ್ದ ತಾನು ಒಮ್ಮೆಲೇ ನೂರು ಕುದುರೆಗಳ ಸರದಾರನಾದುದು ಆಶ್ಚರ್ಯವನ್ನುಂಟು ಮಾಡಿತ್ತು. ಇದೆಲ್ಲ ಕನಸೆಂಬಷ್ಟು ದಿಗ್ಭ್ರಮೆಯುಂಟಾಗಿತ್ತು. ಅವನು ತನ್ನ ಭಾಗ್ಯೋದಯಕ್ಕೆ ಕಾರಣವಾದ ಕುದುರೆಯನ್ನು ಅಭಿನಂದಿಸುತ್ತಾ ತನ್ನ ಹೊಸ ಪದವಿಗೆ ಹೊಂದಿಕೊಳ್ಳಲು ಪ್ರಯತ್ನಿಸುತ್ತಾ, ದಿಲ್ಲಿಯ ದಾರಿ ತುಳಿದಿದ್ದನು. ಅವನು ಕಂಭಟ ಕೋಟೆಯ ಬಳಿ ಬಿಡು ಬಿಟ್ಟಿದ್ದಾಗ, ಇನ್ನೊಂದು ವಿಜಯ ಮಾಲೆ ತಾನಾಗಿ ಬಂದು ಅವನ ಕೊರಳಿಗೆ ಬಿತ್ತು. ಅದು ಕಮಲಾದೇವಿಯ ಕೈಸೆರೆ.

## ೧೫

ಅನ್ಹಿಲವಾಡವನ್ನು ಯವನ ಸೈನಿಕರು ಮುತ್ತುವ ಸೂಚನೆ ಬಂದ ಕೂಡಲೇ ಕಮಲಾದೇವಿಯು ಎಚ್ಚೆತ್ತುಕೊಂಡಿದ್ದಳು. ಮಾಧವನ ದ್ರೋಹ ಚಿಂತನೆಗಳು ಒಂದೊಂದೇ ಅವಳಿಗೆ ತಿಳಿಯಲಾರಂಭಿಸಿದವು. ಅವಳಿಗೆ ಕರ್ಣ, ಹಾಗೂ ಬಡಾ ಮಹಾರಾಜರು ಮತ್ತು ವನಮೆಹತ, ಮಾಧವ ಅಮಾತ್ಯರ ನಡುವೆ ನಡೆದ ಮಾತುಕತೆಗಳು ತಿಳಿದಿದ್ದವು. ಮಾಧವನು ಯವನರ ಧಾಳಿ ಸಧ್ಯಕ್ಕೆ ಅಸಂಭವವೆಂದು ಹೇಳಿದ್ದರೂ ಬೇರೆ ಕಡೆಗಳಿಂದ ಖಚಿತವಾದ ವಾರ್ತೆ ಬಂದಿತ್ತು. ಯಾವ ಗಳಿಗೆ ಯಲ್ಲಾದರೂ ಅನ್ಹಿಲವಾಡದ ಮೇಲೆ ಶತ್ರುಗಳು

ಬೀಳಬಹುದಿತ್ತು. ಕರ್ಣನು ಆಶಾಪಲ್ಲಿಯು ರಕ್ಷಣೆಗೆ ಹೋಗುವ ಮುನ್ನ ಕಮಲಾದೇವಿಗೆ ಮುನ್ನೆಚ್ಚರಿಕೆ ಕೊಟ್ಟಿದ್ದನು. ಅವನು ರಾಜಧಾನಿಯಿಂದ ಹೊರಟು ಹೋದ ಅಲ್ಪ ಸಮಯದಲ್ಲೇ ಶತ್ರುಗಳು ಬಂದು ಅನ್ಹಿಲವಾಡವನ್ನು ಮುತ್ತಿದರು. ಅಂತಹ ಪ್ರಸಂಗದಲ್ಲಿ ಏನು ಮಾಡಬೇಕೆಂದು ಮೊದಲೇ ನಿರ್ಧರಿಸಿದ್ದ ಕಮಲಾದೇವಿಯು ರಹಸ್ಯವಾಗಿ ಅರಮನೆಯಿಂದ ತಪ್ಪಿಸಿಕೊಂಡಳು. ಅವಳು ಬೆಲೆ ಬಾಳುವ ತನ್ನ ವಸ್ತ್ರಾಭರಣಗಳನ್ನು ತೆಗೆದುಕೊಂಡು ಮಗಳ ಜತೆಯಲ್ಲಿ ಪುರುಷ ವೇಷದಲ್ಲಿ ರಾಜಧಾನಿಯಿಂದ ಹೊರಬಿದ್ದು ಪ್ರಭಾಸ ಪಟ್ಟಣಕ್ಕೆ ಹೋದಳು. ಅಲ್ಲಿ ಸೋಮನಾಥ ದೇವಾಲಯದ ರಕ್ಷಣೆಯ ಭಾರ ಹೊತ್ತಿದ್ದ ಬಡಾ ಮಹಾರಾಜರನ್ನು ಅವರ ಕುಟೀರದಲ್ಲಿ ಭೇಟಿ ಮಾಡಿದಳು.

ಮೊದಲು ಪುರುಷರಂತೆ ಕಾಣುವ ಇಬ್ಬರು ಆಗಂತುಕರ ಗುರುತು ಅವರಿಗೆ ಸಿಕ್ಕಲಿಲ್ಲ. ಅವರ ಮುಖವನ್ನು ಎಲ್ಲೋ ನೋಡಿದಂತೆ ಇತ್ತು.

"ತಾವು ಯಾರೋ ತಿಳಿಯಲಿಲ್ಲ ! ಆದರೂ ಎಲ್ಲೋ ನೋಡಿದ್ದ ನೆನಪು!" ಎಂದರು ಬಡಾ ಮಹಾರಾಜರು ತಾವು ಓದುತ್ತಿದ್ದ ರಾಮಾಯಣವನ್ನು ಮುಚ್ಚಿ, ಮಬ್ಬುಗತ್ತಲೆಯಲ್ಲಿ ಆಗಂತುಕರ ಮುಖವನ್ನು ದಿಟ್ಟಿಸಿ ನೋಡುತ್ತಾ.

"ಏಕೆ ಸ್ವಾಮಿ, ನಮ್ಮ ಗುರುತು ತಮಗೆ ಮರೆತುಹೋಯಿತೆ" ಎಂದಳು, ಮಂಜುಳ ಕಂಠದಲ್ಲಿ ಕಮಲಾದೇವಿ. ಅದನ್ನು ಕೇಳಿ, ಬಡಾ ಸಹೇಬರು.

"ಓಹೋ ತಿಳಿಯಿತು ! ಮಹಾರಾಣಿ ಕಮಲಾದೇವಿಯೆ ? ಈ ಅಪರಾತ್ರಿಯಲ್ಲಿ ನೀವು ಬಂದಿರುವುದು ನೋಡಿದರೆ ಗಾಬರಿಯಾಗುತ್ತಿದೆ ! ಕರ್ಣದೇವರು ಆರೋಗ್ಯದಿಂದ ಇದ್ದಾರೆ ತಾನೆ ? ರಾಜಧಾನಿಗೆ ಯವನರಿಂದ ಬಾಧೆ ಇಲ್ಲ ತಾನೆ ?" ಒಮ್ಮೆಲೇ ನಾಲ್ಕಾರು ಪ್ರಶ್ನೆಗಳನ್ನು ಕೇಳಿದರು.

"ಅದರ ಕಥೆಯನ್ನು ಹೇಳಲೆಂದೇ ತಮ್ಮಲ್ಲಿಗೆ ನಾವು ಬಂದುದು. ಮೊದಲು ನಮಗೆ ನಿಮ್ಮ ಕುಟೀರದಲ್ಲಿ ಆಶ್ರಯ ಬೇಕು. ಈ ಪುರುಷ ವೇಶವನ್ನು ಬದಲಿಸಬೇಕಾಗಿದೆ. ದಣಿದ ಕುದುರೆಗಳಿಗೆ ನೀರು ತೋರಿಸಬೇಕಾಗಿದೆ, ಅನಂತರ ನಮ್ಮ ಕಥೆ ! ಗೋಳಿನ ಕಥೆ !" ಎಂದಳು ಕಮಲಾದೇವಿ— ನಿಟ್ಟುಸಿರುಬಿಡುತ್ತಾ.

ಕೂಡಲೇ ಬಡಾ ಮಹಾರಾಜರು ಕಂದೀಲನ್ನು ಕೈಗೆ ತೆಗೆದುಕೊಂಡು ಅವರನ್ನು ಒಳಗೆ ಕರೆದೊಯ್ದರು. ಅವರು ಉಡುಪು ಬದಲಾಯಿಸಿ, ಕೈ ಕಾಲು ತೊಳೆದುಕೊಂಡು ಆಯಾಸ ಪರಿಹರಿಸಿಕೊಂಡರು. ಅವರು ಏರಿ ಬಂದ ಕುದುರೆಗಳನ್ನು ಅವರ ಒಬ್ಬ ಶಿಷ್ಯನು ವಿಚಾರಿಸಿಕೊಂಡನು. ಮತ್ತೊಬ್ಬ ಶಿಷ್ಯನು ಪೂಜಾರಿಯ ಮನೆಯ ಹೆಂಗಸರನ್ನು ಕರೆತಂದನು.

ಕಮಲಾದೇವಿ ಊಟೋಪಚಾರಗಳನ್ನು ಮುಗಿಸಿ, ವಿಶ್ರಾಂತಿ ತೆಗೆದು ಕೊಂಡ ಮೇಲೆ ತನ್ನ ಕರುಣ ಕತೆಯನ್ನು ಸವಿಸ್ತಾರವಾಗಿ ತಿಳಿಸಿದಳು.

"ಗುರುಗಳೇ, ಈ ವೇಳೆಗೆ ದ್ರೋಹಿ ಮಾಧವನ ಪಿತೂರಿಯಿಂದ ಅನ್ಹಿಲ ವಾಡವು ಶತ್ರುಗಳ ವಶವಾಗಿದ್ದರೆ ನೀವು ಆಶ್ಚರ್ಯ ಪಡಬೇಕಾಗಿಲ್ಲ. ಈ ಘಟನೆ ನಡೆಯುವುದರೊಳಗೆ ನಾವು ಪುರುಷ ವೇಶದಿಂದ ಉಪಾಯವಾಗಿ ತಪ್ಪಿಸಿಕೊಂಡು ಬಂದೆವು ! ಈಗ ನೀವಲ್ಲದೆ ನಮಗೆ ಬೇರೆ ದಿಕ್ಕಿಲ್ಲ ! ಸಾಮ್ರಾಟರು ರಾಜಧಾನಿಯಿಂದ ಹೊರಗೆ ಇದ್ದಾರೆ. ಅವರು ರಾಜಧಾನಿಯ ರಕ್ಷಣೆಗೆ ಬರುವವರೆಗೆ ಅಲ್ಲೇ ಉಳಿದಿರಲು ನಮಗೆ ಧೈರ್ಯವಾಗಲಿಲ್ಲ ! ಆ ನೀಚ ಮಾಧವನನ್ನು ನಂಬಿ ನಮಗೆ ಇಂಥ ಗತಿ ಒದಗಿತು ! ಇನ್ನು ಪ್ರಭುಗಳ ಕಥೆ ಏನಾಗಿದೆಯೋ ? ಅವರು ಆಶಾಪಲ್ಲಿಗೆ ಹೋದ ಮೇಲೆ ಅವರ ಸುದ್ಧಿಯೇ ಇಲ್ಲ. ಮೇಲಿಂದಮೇಲೆ ದುಃಶಕುನಗಳೇ ತೋರುತ್ತಿವೆ. ಗುರ್ಜರ ಸಾಮ್ರಾಜ್ಯ ಲಕ್ಷ್ಮಿಗೆ ಯಾವ ಗಂಡಾಂತರ ಒದಗುವುದೋ ಆ ಸೋಮನಾಥನಿಗೇ ಗೊತ್ತು ! ಅಂತೂ ಧೈರ್ಯಮಾಡಿ ತಪ್ಪಿಸಿಕೊಂಡು ಬಂದೆ ! ನಿಮ್ಮನ್ನು ನೋಡುವ ತನಕ ಜೀವದಲ್ಲಿ ಜೀವ ಇರಲಿಲ್ಲ ! ನಿಮ್ಮನ್ನು ನೋಡಿದ ಮೇಲೆ ಇನ್ನು ಭಯವಿಲ್ಲ....

ಎಂದು ನಿಟ್ಟುಸಿರುಬಿಟ್ಟಳು ಕಮಲಾದೇವಿ.

"ಮಗಳೇ, ನೀನು ಚಿಂತಿಸುವ ಕಾರಣವಿಲ್ಲ. ಈ ಬಡಾ ಮಹಾರಾಜನು ಇರುವವರೆಗೆ ಕರ್ಣರಾಯರಿಗೆ ಯಾವ ವಿಪತ್ತೂ ಇಲ್ಲ. ಗುರ್ಜರ ಸಾಮ್ರಾಜ್ಯ ಲಕ್ಷ್ಮಿಗೆ ಯಾವುದೇ ಗಂಡಾಂತರವಿಲ್ಲ. ಆ ದ್ರೋಹಿ ಮಾಧವನಂತಹವರು ಸಾವಿರಮಂದಿ ಹುಟ್ಟಿದರೂ ನಮ್ಮಗುಜರಾತನ್ನು ಯವನರು ಪಾದಾಕ್ರಾಂತ ಗೊಳಿಸಿ ಕೊಳ್ಳಲಾರರು. ನೀನು ಅಂಜಬೇಡ ಮಗಳೇ ! ನಿನಗೆ ಇಲ್ಲಿ ಎಲ್ಲ ಅನು ಕೂಲಗಳನ್ನೂ ಕಲ್ಪಿಸಿಕೊಡುತ್ತೇನೆ. ನೀನು ನಿಶ್ಚಿಂತೆಯಿಂದ ಇಲ್ಲಿಯೇ ಇರು !

ಪ್ರಭುಗಳ ಸಮಾಚಾರವನ್ನು ತಿಳಿದುಬರಲು ದೂತರನ್ನು ಅಟ್ಟುತ್ತೇನೆ." ಎಂದು ಕಮಲಾದೇವಿಗೆ ಸಮಾಧಾನ ಹೇಳಿದನು.

ಅದರಂತೆ ವಾಘೇಲ ಕರ್ಣನ ಬಳಿಗೆ ಒಬ್ಬ ಧೂತನನ್ನೂ, ಮತ್ತೊಬ್ಬ ನನ್ನು ಅನ್ಹಿಲವಾಡಕ್ಕೂ ಕಳುಹಿಸಿಕೊಟ್ಟನು. ದೂತರು ಕೆಲವೇ ದಿನಗಳಲ್ಲಿ ಹಿಂತಿರುಗಿಬಂದು ಆಶಾಪಲ್ಲಿಯ ಯುದ್ಧದಲ್ಲಿ ಕರ್ಣನು ಸೋತು ಓಡಿ ಹೋದ ನೆಂದು–ಅವನ ಗತಿ ಏನಾಯಿತೆಂದು ಯಾರಿಗೂ ತಿಳಿಯದೆಂದೂ, ಅನ್ಹಿಲ ವಾಡವನ್ನು ಮಾಧವನ ದ್ರೋಹದಿಂದ ಶತ್ರುಗಳು ರಕ್ತಪಾತವಿಲ್ಲದೆ ಆಕ್ರಮಿಸಿ ಕೊಂಡಿರುವರೆಂದೂ ತಿಳಿಸಿದರು. ರಾಜಧಾನಿಯ ಸಮಸ್ತ ಸಂಪತ್ತೂ ಯವ ನರಿಗೆ ಸೂರೆಯಾಗಿ, ಅಲ್ಲಿ ಅಮಾನುಷವಾದ ಪೈಶಾಚಿಕ ಪ್ರಭುತ್ವವೇ ನಡೆದಿದೆ ಎಂದೂ ತಿಳಿಸಿದರು. ಅದಕ್ಕಿಂತ ಭಯಂಕರ ವಾರ್ತೆ ಎಂದರೆ ವಿಜಯೋ. ನ್ಮತ್ತರಾದ ಯವನರು ಪ್ರಭಾಸ ಪಟ್ಟಣದ ಮೇಲೆ ದಂಡೆತ್ತಿ ಬರುತ್ತಿರುವರೆಂದೂ, ಸೋಮನಾಥ ದೇವಾಲಯವನ್ನು ನೆಲಸಮ ಮಾಡಿ, ಅಲ್ಲಿನ ಲಿಂಗವನ್ನು ಭಗ್ನ, ಗೊಳಿಸಿ, ದೇವಾಲಯದ ಬೆಳ್ಳಿ ಬಂಗಾರವನ್ನೆಲ್ಲ ಸೂರೆಮಾಡಲು ಬರುತ್ತಿರುವ ರೆಂದೂ ತಿಳಿಸಿದರು.

ಈ ವಾರ್ತೆಯನ್ನು ಕೇಳಿ ಕಮಲಾದೇವಿಯು ಭೂಮಿಗೆ ಇಳಿದು ಹೋದಳು. ಬಡಾ ಮಹಾರಾಜರು ಹೇಳಿದ ಯಾವ ಮಾತೂ ಸಮಾಧಾನ ನೀಡ ದಾಯಿತು. ಕಡೆಗೆ ಪ್ರಭಾಸವು ಯವನರ ದಾಳಿಗೆ ಬಲಿಯಾಗುವ ಮುನ್ನ ಅಲ್ಲಿಂದ ತಲೆ ತಪ್ಪಿಸಿಕೊಳ್ಳುವುದೇ ಯೋಗ್ಯ ಎನಿಸಿತು. ಅದೇ ಮಾತನ್ನು ಬಡಾ ಮಹಾರಾಜರು ಹೇಳಿದರು.

"ತಾಯಿ, ಯವನರು ಪ್ರಭಾಸದ ಮೇಲೆ ದಂಡೆತ್ತಿ ಬರುತ್ತಿದ್ದಾರಂತೇ ಹಿಂದೆ ಘಜನಿ ಮಹಮದನು ಪ್ರಭಾಸ ಪಟ್ಟಣವನ್ನು ನೆಲಸಮಮಾಡಿ, ಸೋಮ ನಾಥನ ಹೆಸರನ್ನು ಇತಿಹಾಸದಿಂದಲೇ ತೊಡೆದುಹಾಕಲು ಅನೇಕ ಬಾರಿ ಪ್ರಯ ತ್ನಿಸಿ ವಿಫಲನಾದ. ಇದೀಗ ಅಲ್ಲಾವುದ್ದೀನನು ಈ ಕೆಲಸಕ್ಕೆ ಕೈಯಿಕ್ಕಿದ್ದಾನೆ ದೇವಾಲಯದ ರಕ್ಷಣೆಗೆ ನಾವು ಕಂಕಣ ತೊಟ್ಟು ನಿಂತಿದ್ದೇವೆ. ನಮ್ಮ ಸರ್ವಸ್ವ ವನ್ನಾದರೂ ಬಿಟ್ಟುಕೊಟ್ಟು ದೇವಾಲಯದ ಪಾವಿತ್ರ್ಯವನ್ನು ಉಳಿಸಿ ಕೊಳ್ಳಲು ಹೋಗುತ್ತೇವೆ. ನಮ್ಮ ಶವಗಳ ಮೇಲೆ ನಡೆದುಕೊಂಡು ಹೋದರೆ ಮಾತ್ರ ಸೋಮನಾಥನು ಶತ್ರುಗಳಿಗೆ ವಶನಾಗುತ್ತಾನೆ !– ತನ್ನನ್ನು ತಾನ

ಹೇಗೆ ರಕ್ಷಿಸಿಕೊಳ್ಳಬೇಕೆಂಬುದು ಜಗದೊಡೆಯನಾದ ಆ ಪ್ರಭುವಿಗೆ ಸೇರಿದೆ ನಾವು ಅವನ ಇಚ್ಛಾಮಾತ್ರರು. ತಾವು ಈ ಸಮಯದಲ್ಲಿ ಗುಜರಾತಿನಲ್ಲಿ ಉಳಿದರೆ, ತಮ್ಮ ಜೀವಕ್ಕೆ ಅಪಾಯ ಉಂಟು. ಆದುದರಿಂದ ನೀವು ಕಂಭಟರಲ್ಲೋ ಅಥವಾ ರಾಜಪುತ್ರಸ್ಥಾನದ ಕಣ್ಮಣಿಯಾದ ಚಿತ್ತೂರಿನ ರಾಣ ಭೀಮಸಿಂಗನ ಬಳಿಯೋ ಆಶ್ರಯವನ್ನು ಪಡೆಯುವುದು ಲೇಸು. ತಾವು ತಡಮಾಡಿದರೆ ಈಗ ಸರ್ವನಾಶವಾಗುತ್ತದೆ" ಎಂದನು.

"ನನ್ನ ಪ್ರಾಣಕ್ಕಿಂತ ಪ್ರಿಯವಾದ ಪತಿಯನ್ನು ಅಪಾಯಕ್ಕೆ ನೂಕಿ ನಾನು ಮಾತ್ರ ಹೇಡಿಯಂತೆ ತಲೆ ತಪ್ಪಿಸಿಕೊಳ್ಳಲೆ ?"

"ತಾಯಿ, ನೀವು ಇಲ್ಲಿದ್ದರೆ ತಾನೇ ಬರುವ ಭಾಗ್ಯವೇನು ? ನೀವೂ ಅವರಂತೆ ಅಪಾಯಕ್ಕೆ ಸಿಲುಕುತ್ತೀರಿ ? ಈಗ ನೀವು ಇಲ್ಲಿಂದ ತಪ್ಪಿಸಿಕೊಂಡು, ಯವನರ ಕೈಯಿಂದ ಪಾರಾದರೆ, ನಾಳೆ ಪ್ರಭುಗಳನ್ನು ಸಂದರ್ಶಿಸಬಹುದು ! ಅವರು ಜೀವದಿಂದ ಇದ್ದರೆ, ಇಂದಲ್ಲ ನಾಳೆ ನಿಮ್ಮನ್ನು ಖಂಡಿತ ಭೇಟಿ ಮಾಡುತ್ತಾರೆ ! ಅಲ್ಲಿಯವರೆಗೆ ನೀವು ಎಲ್ಲಾದರೂ ಆಶ್ರಯ ಪಡೆಯುವುದು ಲೇಸು!"

"ನಿಮ್ಮ ಆಶಯದಂತೆಯೇ ಆಗಲಿ, ನಾವು ಇಂದೇ ಇಲ್ಲಿಂದ ಪ್ರಯಾಣ ಬೆಳೆಸಿ, ಕಂಭಟಕ್ಕೆ ಹೋಗುತ್ತೇವೆ. ಅಲ್ಲಿ ರಕ್ಷಣೆ ದೊರೆಯದಿದ್ದರೆ ಚಿತ್ತೂರಿಗೆ ಹೋಗುತ್ತೇವೆ. ನೀವು ಪ್ರಭುಗಳನ್ನು ಸಂದರ್ಶಿಸಿದರೆ, ನಮ್ಮ ಕಥೆಯನ್ನು ತಿಳಿಸಿ ! ಅವರು ಒಬ್ಬರು ಜೀವದಿಂದ ಉಳಿದಿದ್ದರೆ–ಇಂತಹ ನೂರು ರಾಜ್ಯ ಕೋಶಗಳನ್ನು ಗೆಲ್ಲಬಹುದು!" ಎಂದು ಹೇಳಿ ಕಮಲಾದೇವಿ ಅದೇ ದಿನ ದೇವಲದೇವಿಯೊಂದಿಗೆ ಪ್ರಬಾಸವನ್ನು ಬಿಟ್ಟು, ಕಂಭಟದ ದಾರಿ ಹಿಡಿದಳು.

ಕಂಭಟವು ಸಣ್ಣ ರಾಜ್ಯ. ಅಲ್ಲಿನ ಪ್ರತಾಪಸಿಂಹನು ಸ್ವಾಭಿಮಾನಿಯಾದ ದೊರೆ. ಅಲ್ಲದೆ ಶೂರ. ಅವನಿಗೂ ಕರ್ಣರಾಯನಿಗೂ ದೂರದ ಸಂಬಂಧವಿತ್ತು. ಅವನ ಪತ್ನಿ ಶ್ಯಾಮಲದೇವಿಗೆ ಕಮಲಾದೇವಿಯನ್ನು ಕಂಡರೆ ಪ್ರಾಣ. ಅವರು ಒಡಹುಟ್ಟಿದವರಂತೆ ಪ್ರೀತಿಸುತ್ತಿದ್ದರು. ಈ ಸಮಯದಲ್ಲಿ ತನಗೆ ಅವರು ಆಶ್ರಯ ಕೊಡಬಹುದೆಂದು ಕಮಲಾದೇವಿ ಯೋಚಿಸಿ, ಅಲ್ಲಿಗೆ ಹೊರಟಿದ್ದಳು. ಆದರೆ ಅವಳ ದುರ್ದೈವ ಅವಳ ಬೆನ್ನು ಬಿಡಲಿಲ್ಲ. ಅವಳು ಕಂಭಟದ ಬಳಿಗೆ ಬರುವುದರೊಳಗಾಗಿ, ಕಂಭಟವನ್ನು ಶತ್ರುಗಳು ಮುತ್ತಿ

ವಶಪಡಿಸಿಕೊಂಡಿರುವರೆಂದೂ, ದೊರೆ ಪ್ರತಾಪಸಿಂಹನು ರಣರಂಗದಲ್ಲಿ ಮಡಿದಿರುವನೆಂದೂ, ಶ್ಯಾಮಲದೇವಿಯು ತಲೆ ತಪ್ಪಿಸಿಕೊಂಡಿರುವಳೆಂದೂ, ತಿಳಿಯಿತು. ಅವರ ಸ್ಥಿತಿಯೇ ಹಾಗೆ ಆದ ಮೇಲೆ, ತಮಗೆ ಈಗ ರಕ್ಷಣೆ ಕೊಡಲು ಚಿತ್ತೂರಿನ ಭೀಮಸಿಂಹನೊಬ್ಬನೇ ಗತಿ ಎಂದು ಅವರು ಚಿತ್ತೂರಿನ ಮಾರ್ಗ ಹಿಡಿದರು.

ಅಷ್ಟರಲ್ಲಿ ಕಂಭಟದ ಬಳಿ ಬೀಡು ಬಿಟ್ಟಿದ್ದ ಮಲ್ಲಿಕಾಫೂರನ ಸೈನ್ಯದ ತಂಡದ ಕಣ್ಣಿಗೆ ಬಿದ್ದಳು. ಅವಳು ವಾಘೇಲ ಕರ್ಣನ ಪತ್ನಿ ಕಮಲಾದೇವಿ ಎಂದು ತಿಳಿದುದೇ ತಡ ಅವಳನ್ನು ಸೆರೆಹಿಡಿದು ದಿಲ್ಲಿಗೆ ತೆಗೆದುಕೊಂಡು ಹೋಗಲು ಮಲ್ಲಿಕಾಫೂರನು ನಿಶ್ಚಯಿಸಿದನು.

ಇದಾವುದರ ಅರಿವಿಲ್ಲದೆ ಕಮಲಾದೇವಿಯು ಮಾರ್ಗ ಮಧ್ಯೆ ಒಂದು ಹಳ್ಳಿಯಲ್ಲಿ ಆ ರಾತ್ರಿಯನ್ನು ಕಳೆಯಲು ತಂಗಿದಳು. ಅವಳ ರಕ್ಷಣೆಗೆ ಬಂದಿದ್ದ ಸೈನಿಕರು ಊಟ ತಿಂಡಿಗಳನ್ನು ಮುಗಿಸಿ, ನಿಶ್ಚಿಂತೆಯಿಂದ ಮಲಗಿದರು. ನಡು ರಾತ್ರಿಯ ವೇಳೆಗೆ ಇದ್ದಕ್ಕಿದ್ದಂತೆ ಅವರ ಶಿಬಿರದಲ್ಲಿ ಗದ್ದಲವಾಯಿತು.

ಮಲ್ಲಿಕಾಫೂರನ ದಳದವರು ಕಮಲಾದೇವಿಯನ್ನು ಕೈಸೆರೆ ಹಿಡಿಯಲು ಹಠಾತ್ತನೆ ಧಾಳಿ ಇಟ್ಟಿದ್ದರು. ಈ ಗೊಂದಲದಲ್ಲಿ ನಡೆದುದೇನೆಂದು ಯಾರಿಗೂ ತಿಳಿಯಲಿಲ್ಲ. ಕಮಲಾದೇವಿಯ ಸೈನಿಕರು ಅಪಾಯವರಿತು ಕೈಗೆ ಶಸ್ತ್ರಾಸ್ತ್ರಗಳನ್ನು ತೆಗೆದುಕೊಳ್ಳುವುದರೊಳಗೆ ಅವರಲ್ಲಿ ಬಹುಮಂದಿ ಶತ್ರುಗಳ ಕತ್ತಿಗೆ ಬಲಿಯಾಗಿ ನೆಲಕ್ಕೆ ಉರುಳಿದ್ದರು. ಉಳಿದವರು ಕಮಲಾದೇವಿಯ ರಕ್ಷಣೆಗೆ ಹೋಗುವುದರೊಳಗೆ, ಅವಳನ್ನು ಶತ್ರುಗಳು ಕೈಸೆರೆ ಹಿಡಿದಿದ್ದರು.

ಈ ಗದ್ದಲದಲ್ಲಿ ಬೇರೆ ಗುಡಾರದಲ್ಲಿ ಮಲಗಿದ್ದ ದೇವಲ ದೇವಿಯು ಹೇಗೋ ಅಲ್ಲಿಂದ ಪಾರಾಗಿದ್ದಳು. ಅವಳು ಯವನರ ಆಕ್ರಮಣ ತಿಳಿದ ಕೂಡಲೇ ತಾಯಿಯ ಗುಡಾರದ ಕಡೆ ಹೊರಟಳು. ಅವಳ ಗುಡಾರವು ಶತ್ರುಗಳಿಂದ ಸುತ್ತುಗಟ್ಟಲ್ಪಟ್ಟಿರುವುದನ್ನು ನೋಡಿ, ತಾಯಿಯ ರಕ್ಷಣೆಗೆ ಹೋದರೆ, ತನಗೂ ಅಪಾಯವೆಂದರಿತು, ಅಲ್ಲಿದ್ದ ಕುದುರೆಯೊಂದನ್ನು ಏರಿ, ಕತ್ತಲೆಯಲ್ಲಿ ತಪ್ಪಿಸಿಕೊಂಡು ಹೋಗಿದ್ದಳು. ಮಲ್ಲಿಕಾಫೂರನು ಕಮಲಾದೇವಿಯನ್ನು ಸೆರೆ ಹಿಡಿದು, ದೇವಲ ದೇವಿಯನ್ನು ಸೆರೆಹಿಡಿಯಬೇಕೆಂದು ಅವಳ ಡೇರೆಗೆ ಬಂದಾಗ ಅದು ಬರಿದಾಗಿತ್ತು.

ಮಲ್ಲಿಕಾಫೂರನು ದೇವಲ ದೇವಿಗಾಗಿ ಬಹಳ ಶೋಧೆ ಮಾಡಿದನು. ಎಲ್ಲೂ ಅವಳ ಸುಳಿವು ತಿಳಿಯಲಿಲ್ಲ. ಕಡೆಗೆ ಅವಳ ಯೋಚನೆಯನ್ನು ಬಿಟ್ಟು ಕೈಗೆ ದೊರೆತ ಸೌಂದರ್ಯ ನಿಧಿಯಾದ ಕಮಲಾದೇವಿಯನ್ನೇ ದೆಹಲಿಗೆ ಕರೆದೊಯ್ದನು. ಅವಳನ್ನೂ, ಜತೆಯಲ್ಲಿ ತಂದಿದ್ದ ಗುಜರಾತಿನ ಸಂಪತ್ತನ್ನೂ ಅಲ್ಲಾವುದ್ದೀನನಿಗೆ ಕಾಣಿಕೆಯಾಗಿ ಅರ್ಪಿಸಿದನು.

ಇದರಿಂದ ಅಲ್ಲಾವುದ್ದೀನನು ಹಿರಿ ಹಿರಿ ಹಿಗ್ಗಿದನು. ಅವನು ಮಲ್ಲಿಕಾಫೂರನನ್ನು ಅವನ ಕುದುರೆಯ ಸಮೇತ ತನ್ನ ವಶಕ್ಕೆ ತೆಗೆದುಕೊಂಡು, ಅವನನ್ನು ಸಾವಿರ ಕುದುರೆಗಳ ದಳಪತಿಯಾಗಿ ಮಾಡಿ ಗೌರವಿಸಿದನು. ರಾಣಿ ಕಮಲಾದೇವಿಯನ್ನು ತನ್ನ ಅಂತಃಪುರಕ್ಕೆ ಸೇರಿಸಿಕೊಂಡನು. ಗುಜರಾತಿನಲ್ಲಿ ದೊರೆತ ಅಪೂರ್ವ ಸಂಪತ್ತನ್ನು ತನ್ನ ರಾಜಭಂಡಾರಕ್ಕೆ ಸಾಗಿಸಿದನ್ನು ಇಷ್ಟೆಲ್ಲಾ ವಿಜಯವನ್ನು ಸಿದ್ಧಿಸಿಕೊಟ್ಟ ಅಲೂಫ್ ಖಾನನಿಗೆ ಗುಜರಾತಿನ ಮಾಂಡಲೀಕ ಪದವಿಯನ್ನು ಅನುಗ್ರಹಿಸಿದನು.

ಕಮಲಾದೇವಿಯು ಮೊದಲು ಅಲ್ಲಾವುದ್ದೀನನ ಪತ್ನಿಯಾಗಲು ಪ್ರತಿಭಟಿಸಿದಳು. ಆದರೆ ತನ್ನ ಪ್ರತಿಭಟನೆಯಿಂದ ಪ್ರಯೋಜನವಿಲ್ಲವೆಂದು ತಿಳಿದ ಮೇಲೆ ಅವನಿಗೆ ಸಂತೋಷದಿಂದಲೇ ಒಲಿದಳು. ಅವಳಿಗೆ ಕರ್ಣನ ಮೇಲೆ ಪ್ರೇಮವಿತ್ತಾದರೂ—ಈಗ ಕರ್ಣನು ಅವಳ ಸ್ಮೃತಿಪಥದಿಂದ ಮರೆಯಾಗಿದ್ದನು. ಅವನು ರಾಜ್ಯಕೋಶಗಳನ್ನು ಕಳೆದುಕೊಂಡು ಪರದೇಶಿಯಾಗಿದ್ದನು. ಅವನ. ಬದುಕಿರುವನೋ ಮಡಿದಿರುವನೋ ತಿಳಿಯದಾಗಿತ್ತು. ಇಂತಹವನನ್ನು ನಂಬಿ, ಅವನ ಚಿಂತೆಯಲ್ಲಿ ಕೊರಗಿ ಕಾಲಿನ ಬಳಿ ಬಂದು ಬಿದ್ದ ಭೋಗ ಭಾಗ್ಯಗಳನ್ನು ಮರೆಯುವುದು ಮೂಢತನವೆಂದು ಅವಳು ತಿಳಿದಳು.

ಹಿಂದೆ ಕೇಶವ ಸೋಮಯಾಜಿಯನ್ನು ಮರೆತಂತೆ, ಈಗ ಅವಳು ಕರ್ಣರಾಯನನ್ನೂ ಮರೆಯಲೆತ್ನಿಸಿದಳು. ಆದರೆ ಅವಳಿಂದ ಮರೆಯಲಾಗದ ಸಂಗತಿ ಎಂದರೆ—ತನ್ನ ಮಗಳು ದೇವಲದೇವಿ! ಅವಳು ಏನಾದಳೋ! ಅವಳ ಗತಿ ಏನಾಗಿದೆಯೋ ಎಂಬ ಕಳವಳ ಮಾತ್ರ ಹೃದಯವನ್ನು ಸುಡುವ ಬೆಂಕಿಯಾಗಿತ್ತು. ಪರಿಸ್ಥಿತಿಗೆ ಒಗ್ಗಿಕೊಂಡಮೇಲೆ ತನ್ನ ಮಗಳನ್ನು ಶೋಧಿಸಿ, ಕರೆಸಿಕೊಳ್ಳಬೇಕೆಂದು ಕಮಲಾದೇವಿಯು ನಿಶ್ಚಯಿಸಿದಳು.

ಸ್ವಭಾವತಃ ವಿಲಾಸಿಯೂ, ಭೋಗಾಕಾಂಕ್ಷಿಯೂ ಆಗಿದ್ದ ಕಮಲಾದೇವಿಯು ತನ್ನ ಸ್ಥಿತಿಗಾಗಿ ಮರುಗದೆ, ಬಂದುದನ್ನು ಧೈರ್ಯವಾಗಿ ಎದುರಿಸಿದ್ದಳು. ಆರಂಭದಲ್ಲಿ ಒಂದೆರಡು ಬಾರಿ, ಅವಳು ತನ್ನ ದುಸ್ಥಿತಿಗಾಗಿ ಮರುಗಿ ಆತ್ಮಹತ್ಯೆ ಮಾಡಿಕೊಳ್ಳುವ ಯೋಚನೆ ಮಾಡಿದ್ದಳು. ಆದರೆ ಇದರಿಂದ ಯಾವ ಪುರುಷಾರ್ಥವನ್ನು ಸಾಧಿಸಿದಂತೆ ಆಗುವುದಿಲ್ಲವೆಂದು ಜೀವನವನ್ನು ಧೈರ್ಯವಾಗಿ ಎದುರಿಸಿದ್ದಳು. ಅಲ್ಲದೆ ಆತ್ಮಹತ್ಯೆ ಮಾಡಿಕೊಳ್ಳುವಷ್ಟು ಧೈರ್ಯ ಅವಳಿಗಿರಲಿಲ್ಲ. ಈ ಸುಂದರವಾದ ದೇಹಕ್ಕೆ ಆಘಾತ ಮಾಡಿಕೊಳ್ಳುವುದು ಹೇಗೆಂಬುದು ಅವಳ ಚಿಂತೆ! ಅವಳಿಗೆ ಅಧಿಕಾರ, ವೈಭವಗಳ ವ್ಯಾಮೋಹವಿತ್ತು. ಅವಳು ಅಲ್ಲಾವುದ್ದೀನನ ಅಂತಃಪುರಕ್ಕೆ ಸೇರಿದಮೇಲೆ, ಅವನ ಹೃದಯ ಸಾಮ್ರಾಜ್ಞಿಯಾದ ಮೇಲೆ ಅವುಗಳಿಗೆ ಯಾವ ಕೊರತೆಯೂ ಇರಲಿಲ್ಲ.

ದಿನ ಕಳೆದಂತೆ ಅವಳು ತನ್ನ ಹೊಸ ಪರಿಸ್ಥಿತಿಗೆ ಹೊಂದಿಕೊಂಡಳು. ಈಗ ತಾನು ವಾಘೇಲ ಕರ್ಣನ ಪತ್ನಿ ಕಮಲಾದೇವಿಯಲ್ಲ–ಅಲ್ಲಾವುದ್ದೀನನ ಪತ್ನಿ ನೂರ್‌ಜಹಾನ್ ಬೇಗಂ. ಕಮಲಾದೇವಿಯು ಎಂದು ಕರ್ಣನ ಅಂತಃಪುರ ಸೇರಿದಳೋ ಅಂದೇ ಸತ್ತಳು! ಈಗ ಉಳಿದಿರುವುದು ಅವಳ ಛಾಯಾ ರೂಪಮಾತ್ರ!

ಈಗ ಕಮಲಾದೇವಿ ಅಲ್ಲಾವುದ್ದೀನನ ಮೋಹದ ರಾಣಿ! ಅವನ ಹೃದಯದ ಸಾಮ್ರಾಜ್ಞಿ! ದಿಲ್ಲಿ ಸಿಂಹಾಸನದ ಅನಭಿಷಿಕ್ತ ಸಾಮ್ರಾಜ್ಞಿ!

ಕಮಲಾದೇವಿಯ ವಿಷಯದಲ್ಲಿ ಅಲ್ಲಾವುದ್ದೀನನು ಕಟ್ಟಿದ್ದ ಹೊಂಗನಸು ನಿಜವಾಗಿತ್ತು. ಅವನು ಅವಳ ರೂಪಾತಿಶಯಗಳನ್ನು ಕೇಳಿ ಅವಳನ್ನು ತನ್ನ ಅಂತಃಪುರಕ್ಕೆ ಸೇರಿಸಬೇಕೆಂಬ ಕನಸು ಈಗ ನೆರವೇರಿತ್ತು. ಈಗ ಅವನು ಅವಳ ಶೀಲಹರಣಮಾಡಿ, ತನ್ನ ಅಂತಃಪುರಕ್ಕೆ ಸೇರಿಸಿಕೊಂಡಮೇಲೆ, ಅವನ ಕಾಮ ಪಿಪಾಸೆ ಅಡಗಿತು; ಆದರೆ ಅವನ ಸೌಂದರ್ಯ ಪಿಪಾಸೆ ಮಾತ್ರ ಅಡಗಲಿಲ್ಲ.

ಅವನದು ಒಂದು ಹೂವಿನಲ್ಲಿ ತೃಪ್ತಿಹೊಂದದ ಭೃಂಗದಂತೆ, ಹೊಸ ಹೊಸ ಹೂಗಳನ್ನು ಹುಡುಕುವ ಪ್ರವೃತ್ತಿ. ಅಂತಹವನಿಗೆ ಕಮಲಾದೇವಿಗಿಂತಲೂ ಅನೇಕ ಪಾಲು ಹೆಚ್ಚು ಚಲುವೆಯಾದ ಚಿತ್ತೂರಿನ ರಾಣಿ ಭೀಮ

ಸಿಂಹನ ಪತ್ನಿ ಪದ್ಮಿನಿಯ ಕೀರ್ತಿ ಕೇಳಿದಾಗ, ಅವನ ಮನಸ್ಸು ಅತ್ತ ಹರಿದಿತ್ತು.

ಈಗ ಅವನಿಗೆ ಸ್ವರ್ಗಲೋಕದ ಅಪ್ಸರೆಯಂತೆ ಇದ್ದ ಪದ್ಮಿನಿಯನ್ನು ಪಡೆಯುವುದೇ ಜೀವನದ ಪರಮ ಗುರಿಯಾಯಿತು. ಅವಳನ್ನು ಗೆದ್ದು ತನ್ನ ಅಂತಃಪುರಕ್ಕೆ ಸೇರಿಸುವ ಹೊರತೂ ಅವನಿಗೆ ಆಹಾರ ನಿದ್ರೆಗಳು ಸೇರದಾದವು.

ಅಲ್ಲಾವುದ್ದೀನನಿಗೆ ಒಂದು ವಿಷಯ ಮನಸ್ಸಿಗೆ ಬಂದರೆ, ಅದು ಕೂಡಲೇ ನಡೆದು ಹೋಗಬೇಕು ! ಎಷ್ಟೇ ಕಷ್ಟವಾಗಲೀ, ಅದನ್ನು ಸಾಧಿಸಿಯೇ ತೀರಬೇಕು. ಇಂದು ಪದ್ಮಿನಿಯ ಹುಚ್ಚು ಹತ್ತಿದ ಕೂಡಲೇ ಅವಳನ್ನು ವಶಪಡಿಸಿಕೊಳ್ಳುವುದು ಹೇಗೆಂದು ಯೋಚಿಸತೊಡಗಿದನು. ಅವಕ್ಕೆ ತಕ್ಕ ಕಾರ್ಯಸ್ಥಾನ ಸಿದ್ಧಗೊಳ್ಳಲು ಹೆಚ್ಚು ಕಾಲ ಬೇಕಾಗಲಿಲ್ಲ.

## ೧೭

ಅಲ್ಲಾವುದ್ದೀನನಿಗೆ ಪದ್ಮಿನಿಯ ಹುಚ್ಚು ಹಿಡಿದುದೇ ತಡ ಅದು ಬೃಹದಾಕಾರವಾಗಿ ಬೆಳೆದು—ಆ ಒಂದು ಚಿಂತೆಯಲ್ಲೇ ಅವನು ಮುಳುಗಿದನು. ಅವಳನ್ನು ತನ್ನವಳಾಗಿ ಮಾಡಿಕೊಳ್ಳಲು ಚಿತ್ತೂರಿನ ಮೇಲೆ ದಂಡೆತ್ತಿ ಹೋಗುವುದು ಅನಿವಾರ್ಯವಾಗಿತ್ತು. ಇದಕ್ಕೆ ಒಂದು ಕುಂಟು ಕಾರಣವು ಬೇಕಾಗಿತ್ತು. ಅಂತಹ ಕಾರಣವೊಂದು ತಾನಾಗಿ ದೊರೆತಿತ್ತು.

ಕಮಲಾದೇವಿಯು ಶತ್ರುಗಳ ಕೈಗೆ ಸೆರೆಸಿಕ್ಕಿದಮೇಲೆ ದೇವಲದೇವಿಯು ಕುದುರೆಯನ್ನೇರಿ ತಪ್ಪಿಸಿಕೊಂಡು ಹೋಗಿದ್ದಳಷ್ಟೇ. ಅವಳು ಆ ರಾತ್ರಿ ಎಲ್ಲೂ ನಿಲ್ಲದೆ ಬಹುದೂರ ಪ್ರಯಾಣ ಮಾಡಿದಳು.

ರಾತ್ರಿ ಎಲ್ಲಾ ಪ್ರಯಾಣ ಹೀಗೆಯೇ ಸಾಗಿತು. ಬೆಳಗಾದಮೇಲೆ ತಾನು ಹೊರಟಿರುವ ದಿಕ್ಕನ್ನು ಗುರುತಿಸಿಕೊಂಡಳು.

ತಾನು ಹೋಗಬೇಕೆಂದು ನಿರ್ಧರಿಸಿಕೊಂಡಿದ್ದ ಚಿತ್ತೂರಿನ ದಿಕ್ಕಿನಲ್ಲೇ ತನ್ನ ಕುದುರೆ ಮುಂದೆ ಸಾಗಿದುದನ್ನು ಅರಿತಾಗ ಸಮಾಧಾನವಾಯಿತು. ಅವಳು ಹಲವಾರು ಮಜಲುಗಳು ಪ್ರಯಾಣಮಾಡಿ ಕಡೆಗೆ ಚಿತ್ತೂರನ್ನು ತಲುಪಿದಳು. ಅಲ್ಲಿನ ದೊರೆ ಭೀಮಸಿಂಗನು ಅವಳ ಕರುಣ ಕತೆಯನ್ನು ಕೇಳಿ ಅವಳಿಗೆ ತನ್ನ ಬಳಿ ಆಶ್ರಯ ನೀಡಿದನು. ಕರ್ಣ ರಾಯನನ್ನು ಹುಡುಕಿಸಿ, ಕಳೆದುಕೊಂಡ ರಾಜ್ಯಕೋಶಗಳನ್ನು ಮತ್ತೆ ದೊರಕಿಸಿಕೊಡಲು ತನ್ನಿಂದಾಗುವ ಸಹಾಯ ಮಾಡುವ ಆಶ್ವಾಸನವನ್ನೂ ನೀಡಿದನು. ಯವನರ ಸೆರೆಯಲ್ಲಿರುವ ಕಮಲಾ ದೇವಿಯನ್ನು ಆದಷ್ಟು ಬೇಗ ಬಂಧಮುಕ್ತಳಾಗಿ ಮಾಡುವ ಭರವಸೆಯನ್ನು ಕೊಟ್ಟನು.

ಈ ಎಲ್ಲ ಸುದ್ದಿ ಕರ್ಣಾಕರ್ಣಿತವಾಗಿ ಹರಡಿ, ಅಜ್ಞಾತವಾಸದಲ್ಲಿದ್ದ ವಾಘೇಲ ಕರ್ಣನ ಕಿವಿಗೂ ಬಂದು ಮುಟ್ಟಿತು. ಅವನು ರಾಜ್ಯಕೋಶಗಳನ್ನು ಕಳೆದುಕೊಂಡು ದೇಸಿಗನಂತೆ ಅಲೆಯುತ್ತಿದ್ದನು. ಬಡಾ ಮಹಾರಾಜರಿಂದ ಅವನಿಗೆ ಕಮಲಾದೇವಿಯು ಕಂಭಟಕ್ಕೆ ಹೋದ ಸಂಗತಿ ತಿಳಿದಿತ್ತು. ಆದರೆ ಮುಂದಾದ ಸಂಗತಿ ತಿಳಿದಿರಲಿಲ್ಲ. ತನ್ನ ಪತ್ನಿ ಪುತ್ರಿಯರ ಶೋಧನೆಯಲ್ಲಿ ತೊಡಗಿದ್ದ ಅವನಿಗೆ ಚಿತ್ತೂರಿನ ಕಡೆಯಿಂದ ಬಂದ ಯಾರೋ ಪ್ರಯಾಣಿಕರು ದೇವಲದೇವಿಯ ವಾರ್ತೆಯನ್ನು ತಿಳಿಸಿದರು. ಈ ಸಮಯದಲ್ಲಿ ತನಗೆ ಆಶ್ರಯ ನೀಡಬಲ್ಲ ದೊರೆ ಚಿತ್ತೂರಿನ ಭೀಮಸಿಂಹನೆಂದು ಅರಿತು ಕರ್ಣನೂ ಚಿತ್ತೂರಿಗೆ ಬಂದು, ಅವನ ಆಶ್ರಯ ಬೇಡಿದನು.

ತನಗಿಂತಲೂ ವಿಸ್ತಾರವಾದ ಭೂಭಾಗಕ್ಕೆ ಸಾಮ್ರಾಟನಾಗಿದ್ದ ವಾಘೇಲ ಕರ್ಣನು ನನ್ನ ಬಳಿ ಆಶ್ರಯಬೇಡಬೇಕಾಗಿ ಬಂದುದಕ್ಕೆ ಅವನಿಗೆ ವ್ಯಥೆಯಾಯಿತು. ಯವನರನ್ನು ಭಾರತದಿಂದ ಹೊರಗಟ್ಟದ ಹೊರತು ಭಾರತಾಂಬೆಗೆ ವೈಧವ್ಯ ತಪ್ಪದೆಂದು ಭಾವಿಸಿದ್ದ ಭೀಮಸಿಂಗ ಕರ್ಣನಿಗೆ ಸಹಾಯ ಮಾಡುವುದರಿಂದ ಯವನರೊಡನೆ ಯುದ್ಧ ಸನ್ನಿಹಿತವಾಗುವುದೆಂಬುದನ್ನು ಅರಿತೂ, ಅವನಿಗೆ ಆಶ್ರಯ ನೀಡಿದನು.

ಇದೆಲ್ಲ ಸುದ್ದಿಯನ್ನು ಅಲ್ಲಾವುದ್ದೀನನ ಗೂಢಚಾರರು ಸಂಗ್ರಹಿಸಿಕೊಂಡು ಬಂದು ಅವನಿಗೆ ತಿಳಿಸಿದ್ದರು. ತನ್ನ ಶತ್ರುವಾದ ಕರ್ಣ ಹಾಗೂ ದೇವಲದೇವಿಯರಿಗೆ ಆಶ್ರಯ ನೀಡಿದ ಚಿತ್ತೂರಿನ ಮೇಲೆ ದಂಡೆತ್ತಿಹೋಗಲು

ಇದಕ್ಕಿಂತ ಬೇರೆ ಕಾರಣ ಬೇಕಾಗಲಿಲ್ಲ. ಕೂಡಲೇ ಅಲ್ಲಾವುದ್ದೀನನು ತನ್ನ ಸೈನ್ಯಕ್ಕೆ ಮತ್ತೊಂದು ದಂಡೆಯಾತ್ರೆಗೆ ಸಿದ್ಧವಾಗಲು ಆಜ್ಞೆ ಮಾಡಿದನು.

ಅಲ್ಲಾವುದ್ದೀನನು ಪದ್ಮಿನಿಯ ಸಲುವಾಗಿ ಚಿತ್ತೂರಿನಮೇಲೆ ದಂಡೆತ್ತಿ ಹೋಗಲಿರುವ ಸಂಗತಿ ರಹಸ್ಯವಾಗಿ ಇರಿಸಿದ್ದರೂ, ಅದು ಕಮಲಾದೇವಿಯ ಕಿವಿಗೆ ಬೀಳದೆ ಇರಲಿಲ್ಲ. ಈ ಸುದ್ದಿ ಕೇಳಿ ಅವಳು ಕಳವಳಗೊಂಡಳು. ತನ್ನಂತಹ ಹಿಂದೂ ಸತಿಯರ ಪಾತಿವ್ರತ್ಯ ಹರಣ ಮಾಡುವುದು ಅವನ ವಿನೋದಗಳಲ್ಲಿ ಒಂದೆಂದು ತಿಳಿದಾಗ ಅಲ್ಲಾವುದ್ದೀನನ ಮೇಲೆ ಭಯಂಕರ ಸಿಟ್ಟು ಬಂದಿತು. ಆ ನೀಚನು-ಕಾಮಾಂಧನು ಇನ್ನೆಷ್ಟು ಜನ ನಾರೀಮಣಿಗಳನ್ನು ಹೀಗೆ ಶೀಲಹರಣಮಾಡಿ ಅಂತಃಪುರಕ್ಕೆ ಸೇರಿಸಿಕೊಳ್ಳಲು ಆಶಿಸಿದ್ದಾನೋ ! ಆದರೆ ಈ ಬಗ್ಗೆ ಅವಳು ಏನೂ ಮಾಡುವ ಸ್ಥಿತಿಯಲ್ಲಿ ಇರಲಿಲ್ಲ. ಆದರೂ ಅಲ್ಲಾವುದ್ದೀನನಿಗೆ ಒಂದು ಎಚ್ಚರಿಕೆ ನೀಡಬೇಕೆಂದು ನಿರ್ಧರಿಸಿದಳು. ತನ್ನನ್ನು ಬಲಿಕೊಟ್ಟಾದರೂ ಸರಿ, ಅಲ್ಲಾವುದ್ದೀನನು ಮಾಡುವ ಹಿಂದೂ ವನಿತೆಯರ ಪಾತಿವ್ರತ್ಯದ ವಿಡಂಬನೆಯನ್ನು ನಿಲ್ಲಿಸಲು ನಿಶ್ಚಯಿಸಿದಳು. ಅಲ್ಲದೆ ಚಿತ್ತೂರಿನ ದಂಡೆಯಾತ್ರೆಯನ್ನು ತಡೆಯುವುದರಲ್ಲಿ ಅವಳದೊಂದು ಸ್ವಾರ್ಥವೂ ಇತ್ತು. ಅಲ್ಲಿ ಆಶ್ರಯ ಪಡೆದಿದ್ದ ತನ್ನ ಪತಿ ಹಾಗೂ ಪುತ್ರಿಯರನ್ನು ಹೇಗಾದರೂ ಯವನರ ಕೈಯಿಂದ ಪಾರುಮಾಡಬೇಕೆಂದು ಆಸೆಯಿತ್ತು. ಅಂತಲೇ, ಅವಳು ಈ ವಿಷಯದಲ್ಲಿ ತಾನಾಗಿ ಅಲ್ಲಾವುದ್ದೀನನ ಜತೆಯಲ್ಲಿ ಮಾತು ತೆಗೆದಳು.

"ಜಹಾಪನ, ತಮ್ಮಲ್ಲಿ ಒಂದು ಕೋರಿಕೆ ಇದೆ. ನೀವು ನಡೆಸಿಕೊಡುವುದಾಗಿ ವಾಗ್ದಾನವಿತ್ತರೆ ಹೇಳುತ್ತೇನೆ !"

ಉಲ್ಲಾಸಿತನಾಗಿದ್ದ ಅಲ್ಲಾವುದ್ದೀನನು ಕಮಲಾದೇವಿಯ ಮುಂಗುರುಳುಗಳೊಂದಿಗೆ ಆಟವಾಡುತ್ತಾ, ಕೇಳಿದ.

"ಅದೇನು ಕೋರಿಕೆ ಹೇಳು, ಪ್ಯಾರಿ !"

"ನೀವು ಚಿತ್ತೂರಿನ ಮೇಲೆ ದಂಡೆತ್ತಿ ಹೋಗಲು ನಿಶ್ಚಯಿಸಿರುವಿರಂತೆ ಹೌದೆ !"

"ಹೌದು ! ಇದನ್ನು ನಿನಗೆ ಯಾರು ಹೇಳಿದರು ?"

ಅಚ್ಚರಿಯಿಂದ ಕೇಳಿದ.

" ಹೀಗೆಯೇ ತಿಳಿಯಿತು, ನಿಮ್ಮ ಅರ್ಧಾಂಗಿ ಎನಿಸಿಕೊಂಡ ನನಗೆ ನೀವು ಹೇಳದಿದ್ದರೂ ಹೇಗೋ ತಿಳಿಯಿತು. ನೀವು ಈ ದಂಡಯಾತ್ರೆಯನ್ನು-ನನ್ನ ಸಲುವಾಗಿ ಮುಂದೆ ಹಾಕಲು ಸಾಧ್ಯವಿಲ್ಲವೆ ?"

" ಏಕೆ, ಪ್ಯಾರಿ ?"

" ನೀವು ಚಿತ್ತೂರಿನ ಮೇಲೆ ದಾಳಿ ಇಟ್ಟರೆ ಅಲ್ಲಿ ತಲೆಮರೆಸಿಕೊಂಡಿರುವ ದೇವಲದೇವಿಗೆ ತೊಂದರೆಯಾಗುವ ಸಂಭವವಿದೆ ! ಅವಳಿಗೆ ಯಾವುದೇ ಬಗೆಯ ವಿಪತ್ತು ಒದಗಿದರೂ ನಾನು ಕ್ಷಣಕಾಲ ಜೀವಿಸಿರಲಾರೆ !"

"ಹಾಗಿದ್ದರೆ, ಅವಳನ್ನು ಸೆರೆಹಿಡಿದುತಂದು ನಿನಗೆ ಒಪ್ಪಿಸುತ್ತೇನೆ· ನೀನು ಈ ಬಗ್ಗೆ ಚಿಂತಿಸಬಾರದು ಪ್ರಿಯೆ !"

" ನೀವು ದಂಡೆತ್ತಿ ಹೋಗುವುದರಿಂದ ಈ ಕಾರ್ಯ ಸಾಧಿಸುವುದೆಂದು ನನಗೆ ಅನಿಸುವುದಿಲ್ಲ. "

" ಹಾಗಾದರೆ ಏನು ಮಾಡಬೇಕು ?"

"ನೀವು ಸಂಧಾನದಿಂದ ಅವಳನ್ನು ಉಪಾಯವಾಗಿ ಮರಳಿ ಪಡೆಯ ಲೆತ್ನಿಸಬೇಕು. "

ಇದನ್ನು ಕೇಳಿ ಅಲ್ಲಾವುದ್ದೀನನು ಮನಸ್ಸಿನಲ್ಲೇ ಹಿಗ್ಗಿದ. ಹೌದು. ಪದ್ಮಿನಿಯನ್ನು ಸಂಧಾನದ ಮೂಲಕವೇ ಏಕೆ ಸಾಧಿಸಬಾರದು ? ಒಂದೇ ಬಾಣದಿಂದ ಎರಡು ಹಕ್ಕಿಯನ್ನು ಏಕೆ ಹೊಡೆಯಬಾರದು ?

" ಹುಜೂರ್, ಏಕೆ ಮೌನವಾದಿರಿ? ನನ್ನಮಾತು ಪ್ರಿಯವಾಗಲಿಲ್ಲವೆ ?"

" ಆಗಲಿ ಪ್ಯಾರಿ, ನೀನು ಹೇಳಿದಂತೆಯೇ ಸಂಧಾನದಿಂಪ ಎರಡು ಹಕ್ಕಿ ಗಳನ್ನು ಹಿಡಿಯುತ್ತೇನೆ !" ಎಂದನು. ಇದನ್ನು ಕೇಳುತ್ತಿದ್ದಂತೆ ಕಮಲಾ ದೇವಿಯ ಮುಖ ವಿವರ್ಣವಾಯಿತು.

" ಎರಡು ಹಕ್ಕಿಗಳೆಂದರೆ ?"

" ಒಂದು ರಾಜಹಂಸೆ ಪದ್ಮಿನಿ, ಇನ್ನೊಂದು ನಿನ್ನ ಮಗಳು ದೇವಲ ದೇವಿ. " ಅಲ್ಲಾವುದ್ದೀನನು ನಕ್ಕನು. ಇದನ್ನು ಕೇಳಿ ಕಮಲಾದೇವಿಯ ದೇಹಾಂತ್ಯ ಚಳಿಹಿಡಿದಂತೆ ಆಗಿ ಅವಳು ಗಡಗಡ ನಡುಗಿದಳು.

" ಹುಜೂರ್ ಹದಾ ಅವರಿಬ್ಬರನ್ನೂ ತಾವು ಏನು ಮಾಡುತ್ತೀರಿ ?"

"ಮಾಡುವುದೇನು? ಪದ್ಮಿನಿಯನ್ನು ಅಂತಃಪುರಕ್ಕೆ ಸೇರಿಸುತ್ತೇನೆ. ದೇವಲದೇವಿಯನ್ನು ಷಹಜಾದ ಕಜೀರಖಾನನಿಗೆ ಕೊಟ್ಟು ಮದುವೆ ಮಾಡುತ್ತೇನೆ." ಈ ಮಾತು ಕೇಳಿ ಕಮಲಾದೇವಿ ಯೋಚಿಸುತ್ತಾ ಕುಳಿತಳು.

"ಹುಜೂರ್, ಪದ್ಮಿನಿಯು ಸವತಿಯಾದರೆ ನಾನು ಅಸೂಯೆಪಡುವುದಿಲ್ಲ. ಆದರೆ ದೇವಲದೇವಿಯು ಷಹಜಾದರಿಗೆ ತಕ್ಕವಳಲ್ಲ. ಅವಳನ್ನು ಅವಳ ಪಾಡಿಗೆ ಬಿಟ್ಟುಬಿಡಿ."

"ಏಕೆ? ಅವಳನ್ನೂ ನಿನ್ನಂತೆ ಜಾತಿ ಕೆಡಿಸುತ್ತೇನೋ ಎಂದು ಹೆದರಿಕೆಯೆ? ಚಿನ್ನ, ಆ ಹೆದರಿಕೆ ಬೇಡ. ನಿನಗೆ ಈ ವಿವಾಹ ಇಷ್ಟವಿಲ್ಲದಿದ್ದರೆ ಅವಳು ನಿನ್ನ ಮಗಳಾಗಿ–ನಿನ್ನ ಬಳಿಯಲ್ಲೇ ಇರಲಿ. ಅವಳು ನಿನಗೆ ಮಗಳಾದ ಮೇಲೆ ನನಗೂ ಮಗಳೇ ಅಲ್ಲವೆ?"

ಎಂದು ಹೇಳಿ ಅರ್ಥಪೂರ್ಣವಾಗಿ ನಕ್ಕನು.

"ಹುಜೂರ್, ತಮ್ಮ ಔದಾರ್ಯಕ್ಕೆ ನಾನು ಕೃತಜ್ಞಳು. ಆದರೆ, ತಮ್ಮಲ್ಲಿ ಮತ್ತೊಂದು ಬೇಡಿಕೆ. ಆ ಪದ್ಮಿನಿಯ ಬಗೆಗೂ ಇದೇ ಔದಾರ್ಯವನ್ನು ಪ್ರಕಟಿಸುವ ಕೃಪೆ ಮಾಡಬೇಕು."

"ಏಕೆ?"

"ತಾವು ಈ ಕೆಲಸಕ್ಕೆ ಕೈಹಾಕಿದರೆ ಇದರಿಂದ ತಮಗೆ ಕೇಡುಂಟಾಗುವುದೆಂಬ ಹೆದರಿಕೆ."

"ಅಯ್ಯೊ, ಹುಚ್ಚಿ ನನಗೇ ಕೇಡೆ? ಆ ಹೆಣ್ಣನ್ನು ಗೆದ್ದು ತರಲು ನನ್ನ ಕೈಯ್ಯಲ್ಲಿ ಅಸಧ್ಯವೆಂದು ತಿಳಿದಿರುವೆಯಾ? ಹಾಗಿದ್ದರೆ ನಿನಗೆ ಅಲ್ಲಾವುದ್ದೀನನ ವಿಷಯ ಚನ್ನಾಗಿ ತಿಳಿದಿಲ್ಲ. ನಾನು ಯಾರು ಗೊತ್ತೆ?"

ಅಹಂಕಾರದಿಂದ ಕೇಳಿದ.

"ಗೊತ್ತು. ಇಮ್ಮಡಿ ಸಿಕಂದರ ಬಾದಷಹರು!"

"ಈ ಮಾತನ್ನು ತಿಳಿದೂ ಪದ್ಮಿನಿಯ ತಂಟೆಗೆ ಹೋಗಬಾರದೆಂದು ಹೇಳುತ್ತೀಯಾ?"

"ಹೌದು!"

"ಏಕೆ?"

" ಇದರಿಂದ ನಿಮ್ಮ ಸರ್ವನಾಶ ಖಂಡಿತ. ನಾನು ನಿಮ್ಮನ್ನು ಒಲಿದಂತೆ ಅವಳು ಎಂದಿಗೂ ನಿಮ್ಮನ್ನು ಒಲಿಯುವುದಿಲ್ಲ. ಈ ಮಾತು ಸತ್ಯ. "

" ಆಗಲಿ, ನೋಡೋಣ. ನನ್ನನ್ನು ತಿರಸ್ಕರಿಸುವ ಹೆಣ್ಣು ಈ ಜಗತ್ತಿನಲ್ಲಿ ಇದ್ದರೆ, ಅದನ್ನು ನೋಡಿಬಿಡೋಣ !"

" ಹುಜೂರ್, ಇದು ವೃಥಾಸಾಹಸ. ನೆಲಗುದ್ದಿ ಕೈನೋಯಿಸಿಕೊಳ್ಳುವ ಅರ್ಥವಿಲ್ಲದ ಶ್ರಮ. ಇದರಿಂದ ಯಾರಿಗೂ ಒಳ್ಳೆಯದಾಗುವುದಿಲ್ಲ. ನಿಮಗೆ ಆ ವೀರನಾರಿ ಒಲಿಯುವುದಿಲ್ಲ "

" ಏಕೆ ?"

" ರಾಜಪುತ್ರ ಸ್ತ್ರೀಯರು ಕುಲಸ್ತ್ರೀಯರು. ತಮ್ಮ ಪಾತಿವ್ರತ್ಯದ ರಕ್ಷಣೆಗಾಗಿ ಅವರು ಯಾವ ತ್ಯಾಗಕ್ಕಾದರೂ ಸಿದ್ಧರಾಗುತ್ತಾರೆ. "

" ನೀನು ನನಗೆ ಒಲಿಯಲಿಲ್ಲವೆ ? ನಿನ್ನಂತೆ ಅವಳೂ ಒಲಿಯುತ್ತಾಳೆ "

" ನಾನು ರಾಜಪುತ್ರಿಯಲ್ಲ. ಜಾತಿಗೆಟ್ಟ ಬ್ರಾಹ್ಮಣಿ. ನಾನು ತಮಗೆ ಒಲಿದಂತೆ ಕ್ಷತ್ರಿಯರ ಮಹಿಳೆಯರು ಒಲಿಯಲಾರರು. ಅವರಿಗೆ ಯವನರ ಹೆಸರು ಎತ್ತಿದಕೂಡಲೇ ನಖಶಿಖಾಂತ ಉರಿಯುತ್ತದೆ. ನೀವು ಪದ್ಮಿನಿಯ ತಂಟೆಗೆ ಹೋದರೆ ನಿಮ್ಮ ಸರ್ವನಾಶವಾಗುವುದು ಖಂಡಿತ !"

" ನನಗೆ ಹೆಣ್ಣುಗಳ ವಿಷಯ ತಿಳಿದಿದೆ. ಅದರಲ್ಲೂ ಸುಂದರ ರಾಜಪುತ್ರ ಸ್ತ್ರೀಯರಿಗೆ ಬದುಕಲು ಇರುವ ಆಸೆ, ಅಧಿಕಾರ, ಶ್ರೀಮಂತಿಕೆ, ಪದವಿಗಳ ಲಲಾಸೆ ಎಷ್ಟೆಂಬುದು ತಿಳಿದಿದೆ. ನನ್ನನ್ನು-ದಿಲ್ಲೀಶ್ವರನನ್ನು ಕೈಹಿಡಿಯಲು ಅವಳು ಪುಣ್ಯಮಾಡಿರಬೇಕು. ನಾನು ಬಯಸಿದರೆ ನಾಳೆ ಬೆಳಗಾಗುವುದರೊಳಗೆ ಅವಳು ನನ್ನ ಕಾಲಮೇಲೆ ಬಿದ್ದಿರುತ್ತಾಳೆ. ಸಿಕಂದರನನ್ನು ತಿರಸ್ಕರಿಸುವ ಹೆಣ್ಣು ಈ ಲೋಕದಲ್ಲಿ ಹುಟ್ಟಿಲ್ಲ. ತಿಳಿಯಿತೆ ?"

" ಹುಜೂರ್, ಒಲಿದರೆ ನಾರಿ, ಮುನಿದರೆ ಮಾರಿ. ಈ ಮಾತನ್ನು ತಾವು ತಿಳಿದಿರಬೇಕು. ಇದನ್ನು ಪರೀಕ್ಷಿಸುವ ಧೈರ್ಯವಿದ್ದರೆ ಈ ಸಾಹಸಕ್ಕೆ ಕೈಹಾಕಿರಿ. ಇಲ್ಲದಿದ್ದರೆ ಈಗಲೇ ಈ ಉದ್ಯಮಕ್ಕೆ ಶರಣು ಹೊಡೆಯಿರಿ. ಈಗಲೂ ನೀವು ದುಡುಕಬಾರದೆಂದು ಎಚ್ಚರಿಸುತ್ತೇನೆ. ನೀವು ಮಲಗಿರುವ ಸರ್ಪವನ್ನು ಎಬ್ಬಿಸಬೇಡಿ. ರಾಜಪುತ್ರ ಮಹಿಳೆಯರು ತಮ್ಮ ದೇಹವನ್ನು

ಬೆಂಕಿಗೆ ಬಲಿಗೊಡುವರೇ ಹೊರತು ತಮ್ಮ ಪಾತಿವ್ರತ್ಯ ಹರಣವಾಗುವುದನ್ನು ಸಹಿಸರು.''

"ಆಗಲಿ, ನೀನೇ ನೋಡುತ್ತಿರು. ಆ ಪದ್ಮಿನಿಯನ್ನು ಸೆರೆ ಹಿಡಿದು ತಂದು ನಿನ್ನ ಸವತಿಯಾಗಿ ಮಾಡದಿದ್ದರೆ ನಾನು ಅಲ್ಲಾವುದ್ದೀನನಲ್ಲ. ಅವಳನ್ನು ನನ್ನ ಚರಣದಾಸಿಯನ್ನಾಗಿ ಮಾಡಿಕೊಳ್ಳದಿದ್ದರೆ ನೀನು ನನ್ನನ್ನು ಸಿಕಂದರನೆಂದು ಕರೆಯಬೇಡ" ಎಂದು ಗರ್ಜಿಸಿ, ಸಿಟ್ಟಿನಿಂದಲೇ ಅಲ್ಲಿಂದ ಕಾಲ್ತೆಗೆದನು.

ಅಲ್ಲಾವುದ್ದೀನನಿಗೆ ಇದುವರೆಗೆ ಇದ್ದ ಪದ್ಮನಿಯ ಮೋಹವು ಈಗ ಹಠವಾಗಿ ಮಾರ್ಪಟ್ಟಿತ್ತು. ಏನೇ ಆಗಲಿ, ಅವಳನ್ನು ವಶಪಡಿಸಿಕೊಂಡು ರಾಜಪುತ್ರರ ಆತ್ಮ ಗೌರವಕ್ಕೆ ಬರೆ ಇಡಬೇಕು ಎಂದು ಸಂಕಲ್ಪಿಸಿ ಕೂಡಲೇ ಮಲ್ಲಿಕಾಪೂರನನ್ನು ಬರಮಾಡಿಕೊಂಡು, ಚಿತ್ತೂರಿನ ದಂಡಯಾತ್ರೆಗೆ ಸಿದ್ಧವಾಗಲು ತಿಳಿಸಿದನು.

ಈ ಸಮಯದಲ್ಲಿ ಚಿತ್ತೂರಿನಲ್ಲಿ ಲಕ್ಷ್ಮಣಸಿಂಗನೆಂಬ ಬಾಲಕನು ಸಾಮ್ರಾಟನಾಗಿದ್ದನು. ಅವನ ಪೂರ್ವಿಕರು ಸ್ವದೇಶವನ್ನು ಮುಸಲ್ಮಾನರಿಂದ ಉಳಿಸಿಕೊಳ್ಳುವುದರಲ್ಲಿ ಸರ್ವಸ್ವವನ್ನೂ ಬಲಿಕೊಟ್ಟಿದ್ದರು. ರಣರಂಗವೇ ಮನೆಯಾಗಿದ್ದ ಇವರಿಗೆ ರಾಣಾ ಎಂಬ ಹೆಸರು ಇತ್ತು. ಈ ಹಿಂದೆ ಚಿತ್ತೂರನ್ನು ಆಳಿದ ಪೃಥ್ವೀಮಲ್ಲನು ತನ್ನ ದೇಹದ ರಕ್ತವನ್ನು ಬಸಿದು, ಹಿಂದೂ ಬೌದ್ಧರ ಪುಣ್ಯ ಕ್ಷೇತ್ರವಾದ ಗಯೆಯು ಮುಸಲ್ಮಾನರ ಹಸ್ತಗತವಾಗುವುದನ್ನು ತಪ್ಪಿಸಿದ್ದನು. ಇದೇ ಪೀಳಿಗೆಯಲ್ಲಿ ಬಂದ ಲಕ್ಷ್ಮಣಸಿಂಗನು ಇನ್ನೂ ಬಾಲಕನಾಗಿದ್ದರೂ ಅವನು ಸಿಂಹದ ಮರಿಯೇ ಆಗಿದ್ದನು. ಅವನು ಪ್ರಾಪ್ತ ವಯಸ್ಕನಾಗುವವರೆಗೆ ಅವನ ಪರ ಭೀಮಸಿಂಗನು ರಾಜ್ಯವಾಳುತ್ತಿದ್ದನು.

ಭೀಮಸಿಂಗನು ಸ್ವಾಭಿಮಾನಿಯೂ, ಪ್ರಜಾವತ್ಸಲನೂ, ಧರ್ಮಿಷ್ಠನೂ ಆಗಿದ್ದನು. ಇವನಿಗೆ ಭುವನಮೋಹಿನಿ ರೂಪವುಳ್ಳ ಪದ್ಮಿನಿ ಎಂಬ ರಾಣಿ ಇದ್ದಳು. ಅವಳ ಮೇಲಿನ ಮೋಹದಿಂದ ದುರಾತ್ಮನೂ, ಸ್ವೇಚ್ಛಾಚಾರಿಯೂ, ಕಾಮಾಂಧನೂ ಆಗಿದ್ದ ಅಲ್ಲಾವುದ್ದೀನನು ತಾನೇ ಚಿತ್ತೂರಿನಮೇಲೆ ದಂಡೆತ್ತಿ ಹೋಗಲು ನಿಶ್ಚಯಿಸಿದ್ದನು. ಆದರೂ ಕಮಲಾದೇವಿಯ ಸಲಹೆಯಂತೆ,

ಭೀಮಸಿಂಹನನ್ನು ಬೆದರಿಸಿ, ಕಾರ್ಯ ಸಾಧಿಸಿಕೊಳ್ಳಲು ಒಂದು ಪತ್ರ ಬರೆದನು.

ಆ ಪತ್ರವನ್ನು ದೂತರು ತೆಗೆದುಕೊಂಡು ಹೋಗಿ ಭೀಮಸಿಂಹನಿಗೆ ತಲುಪಿಸಿದರು. ಅದನ್ನು ಅವನು ಓದಿಕೊಂಡು ಕೆರಳಿದ ಕೇಸರಿಯಂತಾದನು. ಆ ಪತ್ರದಲ್ಲಿ ಅಲ್ಲಾವುದ್ದೀನನು ಈ ಮಾತುಗಳನ್ನು ಬರೆದಿದ್ದನು.

"ಭೀಮಸಿಂಹರೇ, ನಿಮ್ಮಲ್ಲಿ ಮುಚ್ಚುಮರೆ ಏಕೆ ? ನಾನು ಚಿತ್ತೂರಿನ ಮೇಲೆ ದಂಡೆತ್ತಿ ಬರುತ್ತಿರುವ ಉದ್ದಿಶ್ಯವನ್ನು ಒಂದೇ ಮಾತಿನಲ್ಲಿ ತಿಳಿಸಿ ಬಿಡುತ್ತೇನೆ.

ನೀವು ನನಗೆ ದ್ರೋಹ ಬಗೆದು ತಲೆ ತಪ್ಪಿಸಿಕೊಂಡಿರುವ ಗುಜರಾತಿನ ವಾಘೇಲ ಕರ್ಣನಿಗೂ ಅವನ ಮಗಳು ದೇವಲದೇವಿಗೂ ಆಶ್ರಯ ಕೊಟ್ಟಿದ್ದೀರಿ. ಅವರನ್ನು ಯಾವುದೇ ಶರತ್ತಿಲ್ಲದೆ ನನಗೆ ಒಪ್ಪಿಸಬೇಕು. ಅಲ್ಲದೆ ನಮ್ಮೆರಡು ರಾಷ್ಟ್ರಗಳ ಚಿರಸ್ನೇಹದ ಗುರುತಾಗಿ ನೀವು ರಾಜಪುತ್ರ ಸ್ತ್ರೀಯರ ಶಿರೋ ರತ್ನದಂತಿರುವ ಪದ್ಮಿನಿಯನ್ನು ನನಗೆ ವಿಜಯ ವಧುವಾಗಿ ನೀಡಬೇಕು. ಅಪೂರ್ವ ನಾರೀರತ್ನವಾದ ಪದ್ಮಿನಿಯು ದಿಲ್ಲಿ ಸಾಮ್ರಾಟನ ಮಡದಿಯಾದರೆ ಅವಳ ರೂಪ, ಯೌವನ, ಸೌಂದರ್ಯಗಳು ಸಾರ್ಥಕವಾಗುವುದೆಂದು ನಮ್ಮ ಗ್ರಹಿಕೆ. ನಮ್ಮ ಕೋರಿಕೆಯನ್ನು ತಿರಸ್ಕರಿಸಿದರೆ, ನೀವು ನಮ್ಮ ದ್ವೇಷದಿಂದ ಖಂಡಿತ ನಾಶವಾಗುವಿರೆಂದು ಈ ಮೂಲಕ ಎಚ್ಚರಿಸುತ್ತೇನೆ."

ಪತ್ರವನ್ನು ಓದಿಕೊಂಡು,

"ಆ ಮದೋನ್ಮತ್ತ ಸುಲ್ತಾನನಿಗೆ ಅದೆಷ್ಟು ದುರಹಂಕಾರ ? ನಮ್ಮ ಕುಲವಧುವಾದ ಪದ್ಮಿನಿಯನ್ನು ಬಯಸುವಷ್ಟು ಧೈರ್ಯ ಬಂದಿದೆಯೆ ? ಆ ದುಷ್ಟನಿಗೆ ತಕ್ಕ ಬುದ್ಧಿ ಕಲಿಸದೆ ಇದ್ದರೆ ನಾನು ಭೀಮಸಿಂಹನಲ್ಲ !" ಎಂದು ಉದ್ಗಾರ ತೆಗೆದು ಔಡುಗಚ್ಚಿದನು ಭೀಮಸಿಂಹ. ಅವನು ಅಂದೇ, ಅದೇ ಪತ್ರವಾಹಕನ ಕೈಲಿ ಸೂಕ್ತ ಉತ್ತರವನ್ನು ಬರೆದು ಕಳುಹಿಸಿಕೊಟ್ಟನು

ಆ ಪತ್ರದಲ್ಲಿ ಬೆಂಕಿಯ ಮಾತುಗಳನ್ನು ಬರೆದಿದ್ದನು :

" ದಿಲ್ಲಿಯ ಸುಲ್ತಾನನ ಮುಂದೆ ಚಿತ್ತೂರು ಸಣ್ಣದಿರಬಹುದು ! ಆದರೆ ಅದು ವೀರಭೂಮಿ ಎಂಬುದನ್ನು ನೀವು ಮರೆಯಬಾರದು ! ಅಲ್ಲಿ ಹುಟ್ಟಿದ

ಒಂದು ಕುನ್ನಿಯೂ ಕ್ಷಾತ್ರತೇಜದಿಂದ ತುಂಬಿ ತುಳುಕುತ್ತಿದೆ. ಅದು ವೀರ ವನಿತೆಯರ ಬೀಡು. ಒಂದು ಮಾತನ್ನು ಚೆನ್ನಾಗಿ ನೆನಪಿನಲ್ಲಿಡಿ. ಎಂತಹ ಪ್ರಸಂಗವಲ್ಲೂ ನಿಮ್ಮ ಮನಸ್ಸಿನ ದುಷ್ಟ ಆಸೆ ಈಡೇರದು !

ಆದರೂ ಒಂದು ಎಚ್ಚರಿಕೆ. ಇದು ನಿಮ್ಮಂತಹ ಸಾಮ್ರಾಟರಿಗೆ ಸಲ್ಲದ ವರ್ತನೆ. ಇದು ನಿಮಗೆ ಗೌರವ ತರುವ ಕೆಲಸವಲ್ಲ. ಪರವನಿತೆಯರನ್ನು ಬಯಸಿದವರ ಕತೆ ಏನಾಯಿತೆಂದು ಪುರಾಣೇತಿಹಾಸಗಳು ತೋರಿಸಿಕೊಟ್ಟಿವೆ. ಇದನ್ನು ಅರಿಯದಿದ್ದರೆ ನಿಮ್ಮ ದೌರ್ಭಾಗ್ಯ. ಒಂದು ಮಾತು ಮಾತ್ರ ಸತ್ಯ. ನೀವು ಪದ್ಮಿನಿಯನ್ನು ಮಾತ್ರವಲ್ಲ—ರಾಜಪುತ್ರಸ್ಥಾನದ ಒಬ್ಬ ಕುಲೀನ ರಮಣಿಯನ್ನು ಕೆಣಕಿದರೂ ನೀವು ಉಳಿಯುವುದಿಲ್ಲ, ಎಂಬುದನ್ನು ಚೆನ್ನಾಗಿ ನೆನಪಿನಲ್ಲಿಡಿ.

ಒಂದುವೇಳೆ ನೀವು ನಿಮ್ಮ ದುಷ್ಟ ಲಲಾಸೆಯನ್ನು ಈಡೇರಿಸಿಕೊಳ್ಳಲು ಚಿತ್ತೂರಿನ ಮೇಲೆ ದಂಡೆತ್ತಿಬಂದರೆ ಅದಕ್ಕೆ ನಾವು ಹೆದರುವವರಲ್ಲ. ನಮ್ಮ ಕಡೆ ಉಸಿರು ಇರುವವರೆಗೂ, ದೇಹದಲ್ಲಿ ತೊಟ್ಟು ರಕ್ತವಿರುವವರೆಗೂ ನಾವು ನಮ್ಮ ಸ್ವದೇಶ, ಸ್ವಧರ್ಮ, ಗೋಬ್ರಾಹ್ಮಣ ಸ್ತ್ರೀಯರ ಮಾನ ಸಂರಕ್ಷಣೆಯ ಸಲುವಾಗಿ ಹೋರಾಡುತ್ತೇವೆಯೇ ಹೊರತು ಶತ್ರುಗಳಿಗೆ ಶರಣು ಬರುವುದಿಲ್ಲ. ಒಂದುವೇಳೆ ನಮಗೆ ಸೋಲಾದರೂ ಸರಿ, ನಿಮಗೆ ಮಾತ್ರ ನಮ್ಮ ಕುಲಸ್ತ್ರೀಯರು ದಕ್ಕುವುದಿಲ್ಲ. ಅವರಿಗೆ ಅಂತಹ ಪ್ರಸಂಗದಲ್ಲಿ ತಮ್ಮಮಾನಸಂರಕ್ಷಣೆ ಮಾಡಿಕೊಳ್ಳುವುದು ಹೇಗೆಂಬುದು ಚನ್ನಾಗಿ ತಿಳಿದಿದೆ ! ನಿಮಗೆ ಇಲ್ಲಿಗೆ ಬಂದರೆ, ಸಿಗುವುದು ಹಿಡಿ ಬೂದಿಯೇ ಹೊರತು—ಪದ್ಮಿನಿಯಲ್ಲ ! ಇನ್ನು ನಮ್ಮಲ್ಲಿ ಆಶ್ರಯಪಡೆದಿರುವ ಕರ್ಣರಾಯರ ಮಾತು. ಅವರು ನಮ್ಮಲ್ಲಿ ಆಶ್ರಯ ಪಡೆದಿದ್ದಾರೆ. ನಾವು ಅಭಯವನ್ನು ಕೊಟ್ಟಿದ್ದೇವೆ. ಪ್ರಾಣ ಹೋದರೂ ನಾವು ಕೊಟ್ಟ ವಚನ ಮುರಿಯುವುದಿಲ್ಲ. ಈ ಕಾರ್ಯದಲ್ಲಿ ನಮ್ಮ ಸರ್ವಸ್ವವನ್ನು ಬಲಿಗೊಡಬೇಕಾದರೂ ನಾವು ಸಿದ್ಧರಾಗಿರುವೆವೇ ಹೊರತು, ನಂಬಿದವರನ್ನು ಶತ್ರುಗಳಿಗೆ ಒಪ್ಪಿಸುವುದಿಲ್ಲ. ಈ ಮಾತನ್ನು ಚನ್ನಾಗಿ ತಿಳಿದಿರುವುದು ಒಳ್ಳೆಯದು.

ಈಗಲೂ ಕಾರ್ಯವಿಂಚಿಲ್ಲ. ನಿಮ್ಮ ದುಷ್ಟ ಯೋಚನೆಗಳನ್ನು ಬಿಟ್ಟುಕೊಟ್ಟು, ನಿಮ್ಮ ಸೆರೆಯಲ್ಲಿರುವ ಕಮಲಾದೇವಿಯನ್ನೂ, ಅವರಿಂದ ಅಪಹರಿ

ಸಿದ ಸಂಪತ್ತನ್ನೂ ಹಿಂದಿರುಗಿಸಿಕೊಟ್ಟರೆ, ನಿಮ್ಮನ್ನು ಗೌರವದಿಂದಲೇ ನಡೆಸಿ ಕೊಳ್ಳುತ್ತೇವೆ. ಪ್ರಾಜ್ಞರಾದ ತಾವು ಯಃಕಶ್ಚಿತ ಒಂದು ಹೆಣ್ಣಿನ ಸಲುವಾಗಿ ಸಹಸ್ರಾರು ನಿರಪರಾಧಿಗಳ ರಕ್ತ ಹರಿಸುವುದಿಲ್ಲವೆಂದು ನಂಬಿದ್ದೇವೆ.

ಇಂತು ನಿಮ್ಮ ಸ್ನೇಹಾಕಾಂಕ್ಷಿ

**ಭೀಮಸಿಂಗ.**

ಈ ಪತ್ರವನ್ನು ಓದಿಕೊಂಡು ಅಲ್ಲಾವುದ್ದೀನನು ಉಗುಳು ನುಂಗಿದ. ಪ್ರಥಮಬಾರಿಗೆ ಅವನ ಮುಖ ಅಪಮಾನದಿಂದ ನಿಸ್ತೇಜವಾಯಿತು.

## ೧೭

ಅಲ್ಲಾವುದ್ದೀನನಿಗೆ ಭಯಂಕರ ಸಿಟ್ಟು ಬಂದಿತು. ತನ್ನ ಆಜ್ಞೆಯನ್ನು ತಿರಸ್ಕರಿಸುವ ಎದೆಗಾರಿಕೆ ಯಾರಿಗೂ ಇಲ್ಲವೆಂದು ಅವನು ಬಗೆದಿದ್ದನು. ಅವನ ಅಹಂಕಾರಕ್ಕೆ ಭೀಮಸಿಂಗನು. ಬರೆ ಇಟ್ಟಿದ್ದನು. ಮಾತ್ರವಲ್ಲ, ಅಲ್ಲಾವುದ್ದೀನನಿಗೆ ಎಚ್ಚರಿಕೆ ಹೇಳಿದ್ದನು. ಇದರಿಂದ ಕುಪಿತವಾಗಿ ಅವನು ತನ್ನ ಸೈನ್ಯ ಚಿತ್ತೂರಿನ ಮೇಲೆ ಏರಿಹೋಗಲು ಆಜ್ಞೆಮಾಡಿ ತಾನೇ ಪ್ರಧಾನ ದಂಡನಾಯಕನಾಗಿ ಮುಂದೆ ನಡೆದನು. ಪದ್ಮಿನಿಯನ್ನು ತಾನೇ ಕೈಸೆರೆ ಹಿಡಿದು, ಭೀಮಸಿಂಗನ ಎದುರಿಗೇ ಅವಳಿಗೆ ಅಪಮಾನ ಮಾಡಬೇಕೆಂಬುದೇ ಅವನ ಸಂಕಲ್ಪವಾಗಿತ್ತು.

ಭೀಮಸಿಂಗನೂ ತಾನು ಪತ್ರ ಬರೆದಮಾತ್ರಕ್ಕೆ ಅಲ್ಲಾವುದ್ದೀನನು ತನ್ನ ದುಷ್ಟ ಆಲೋಚನೆಗಳನ್ನು ಬಿಟ್ಟು, ತನಗೆ ಸ್ನೇಹ ಹಸ್ತವನ್ನು ನೀಡುವನೆಂದು ತಿಳಿದಿರಲಿಲ್ಲ. ಅವನು ಶತ್ರುದಾಳಿ ಇಟ್ಟರೆ ಅದನ್ನು ಎದುರಿಸಲು ಸಿದ್ಧತೆಯನ್ನು ಮಾಡಿಕೊಂಡಿದ್ದನು.

ಚಿತ್ತೂರು ಕೋಟೆಯು ರಾಜಪುತ್ರ ಸ್ಥಾನದಲ್ಲೆಲ್ಲಾ ದುರ್ಗಮವಾದ ಕೋಟೆ ಎನಿಸಿತ್ತು. ಅದನ್ನು ಬೆಟ್ಟಗುಡ್ಡಗಳ ಮೇಲೆ ಕಡಿದಾಗಿ ನಿರ್ಮಿಸಲಾಗಿತ್ತು. ಅದರ ರಕ್ಷಣೆಗೆ ಹತ್ತು ಸಾವಿರ ರಾಜಪುತ್ರ ಯೋಧರು ಸಿದ್ಧವಾಗಿ ನಿಂತಿದ್ದರು. ನಗರದಲ್ಲಿ ಸಂವೃದ್ಧವಾದ ನೀರಿನ ವಸತಿಯೂ, ಆಹಾರ ಸಾಮಗ್ರಿಗಳೂ, ಶಸ್ತ್ರಾಸ್ತ್ರಗಳೂ ಹೇರಳವಾಗಿದ್ದವು. ಇದನ್ನು ಅಲ್ಲಾವುದ್ದೀನನು ಮುತ್ತಿಗೆ ಹಾಕಿದಾಗ, ದೇವಗಿರಿಯ ಯಾದವರೂ, ಗುರ್ಜರದ ವಾಘೇಲ ಕರ್ಣನೂ ತನಗೆ ಸೋತಂತೆ, ಭೀಮಸಿಂಗನೂ ಸುಲಭವಾಗಿ ಸೋಲಬಹುದು ಎಂದು ತಿಳಿದಿದ್ದನು.

ಆದರೆ ಮುತ್ತಿಗೆ ಹಾಕಿ ಆರು ತಿಂಗಳಾದರೂ ಕೋಟೆಯ ಒಂದು ಕಲ್ಲು ಕಪಲಿಸಲು ಅವನ ಸೈನಿಕರಿಗೆ ಸಾಧ್ಯವಾಗಲಿಲ್ಲ. ಅಲ್ಲಾವುದ್ದೀನನ ಸೈನಿಕರು ಕೋಟೆಯ ಬಳಿ ಬರಲು ಅಂಜುತ್ತಿದ್ದರು. ರಾಜಪುತ್ರ ಸೈನಿಕರು ಮೇಲೆ ನಿಂತು ಅಂಬಿನ ಮಳೆಗರೆಯುತ್ತಿದ್ದರು. ಸಿಡಿಮದ್ದನ್ನು ಸುರಿಯುತ್ತಿದ್ದರು. ಕಾದ ಎಣ್ಣೆ, ಕಲ್ಲುಮುಳ್ಳುಗಳನ್ನೂ ವಿಷಪ್ರಾಣಿಗಳನ್ನೂ ಕೆಳಗಿದ್ದ ಶತ್ರುಗಳ ಮೇಲೆ ಎಸೆಯುತ್ತಿದ್ದರು. ಹೀಗಾಗಿ ಕೋಟೆಯ ಬಳಿ ಸುಳಿಯಲು ಅವರಿಗೆ ಧೈರ್ಯವಿರಲಿಲ್ಲ. ಈ ಸ್ಥಿತಿಯಲ್ಲಿ ಚಿತ್ತೂರು ತನಗೆ ವಶವಾಗಲು ಹಲವಾರು ವರ್ಷಗಳು ಹಿಡಿಯಬಹುದೆಂದು ಅಲ್ಲಾವುದ್ದೀನನು ಭಾವಿಸಿದನು.

ಮುತ್ತಿಗೆ ತಡವಾದಷ್ಟು ಅವನಿಗೆ ನಿರಾಶೆ ಹೆಚ್ಚುತ್ತಾ ಹೋಗಿತ್ತು. ಪದ್ಮಿನಿಯ ಮೇಲೂ ಮೋಹ ಹೆಚ್ಚಿದಂತೆ, ಮುತ್ತಿಗೆಯು ದೀರ್ಘವಾಗುತ್ತಾ ಹೋಗಿತ್ತು. ಅವನಿಗೆ ಕಮಲಾದೇವಿಯ ಮಾತುಗಳು ಮುಳ್ಳಿನಂತೆ ಹೃದಯವನ್ನು ಚುಚ್ಚುತ್ತಿದ್ದವು. ಭೀಮಸಿಂಗನ ಮಾತುಗಳು ಬೆಂಕಿಯ ಉಂಡೆಗಳಂತೆ ಸುಡುತ್ತಿದ್ದವು. ಏನೇ ಆಗಲಿ ಚಿತ್ತೂರನ್ನು ಮುತ್ತಿ ವಶಪಡಿಸಿಕೊಳ್ಳಲೇಬೇಕು, ಪದ್ಮಿನಿಯ ಮಾನಾಪಹರಣ ಮಾಡಲೇಬೇಕೆಂಬ ಛಲ ಹೆಚ್ಚಾದಂತೆ, ಅವನ ಚಿತ್ತವೂ ಚಂಚಲವಾಗುತ್ತಾ ಹೋಗಿತ್ತು. ಕಡೆಗೆ ಮುತ್ತಿಗೆಯಿಂದ ತಾನು ನಿರೀಕ್ಷಿಸಿದ ಫಲ ದೊರೆಯುವುದಿಲ್ಲವೆಂದು ತಿಳಿದಮೇಲೆ ಅವನು ಕುತಂತ್ರದಿಂದಲಾದರೂ ತನ್ನ ದುಷ್ಟಯೋಚನೆಯನ್ನು ಕಾರ್ಯರೂಪಕ್ಕೆ ತರಲು ಒಂದು ಕಾರಾಗಾರವನ್ನು ಸಿದ್ಧಗೊಳಿಸಿದನು.

ಅವನು ಒಂದು ಪತ್ರವನ್ನು ಬರೆದು ಅದನ್ನು ಭೀಮಸಿಂಗನಿಗೆ ತಲುಪಿಸಿದನು. ಆ ಪತ್ರದಲ್ಲಿ ಈ ಮಾತುಗಳನ್ನು ಬರೆದಿದ್ದನು.

" ಭೀಮಸಿಂಗರೇ, ನೀವು ನನ್ನ ಬೆದರಿಕೆಗೆ ಸೊಪ್ಪು ಹಾಕದೆ, ಧೈರ್ಯದಿಂದ ಚಿತ್ತೂರನ್ನು ನಮ್ಮ ಕೈಯಿಂದ ಉಳಿಸಿಕೊಳ್ಳಲು ನೀವು ಮಾಡುತ್ತಿರುವ ಸಾಹಸವನ್ನು ಕಂಡ ಮೇಲೆ ನಿಮ್ಮ ವಿಷಯದಲ್ಲಿ ನಮಗೆ ಗೌರವ ಉಂಟಾಗಿದೆ. ನಮ್ಮ ಹೃದಯ ಬಿಚ್ಚಿ ಹೇಳುವುದಾದರೆ, ನಮ್ಮ ಇದಿರು ಧೈರ್ಯವಾಗಿ ನಿಂತು ಯುದ್ಧಮಾಡಬಲ್ಲ ಹಿಂದೂ ದೊರೆ ಈ ಹಿಂದೂಸ್ತಾನದಲ್ಲಿ ಇಲ್ಲವೆಂದು ತಿಳಿದಿದ್ದೆ. ನೀವು ಈ ಮಾತನ್ನು ಸುಳ್ಳುಮಾಡಿದ್ದೀರಿ. ನಿಮ್ಮ ಕಲಿತನ, ಧೈರ್ಯ ಸ್ಥೈರ್ಯಗಳೂ, ಸ್ವಾಭಿಮಾನ, ಸ್ವದೇಶಪ್ರೇಮಗಳೂ ನನ್ನ ಮನಸ್ಸನ್ನು ಸೂರೆ ಮಾಡಿವೆ. ನಿಮ್ಮ ವಿಷಯದಲ್ಲಿ ನಿಜವಾದ ಗೌರವ ಉಂಟಾಗಿದೆ. ನನಗೆ ಯಃಕಶ್ಚಿತ ಹೆಣ್ಣಿಗಾಗಿ ನಿಮ್ಮಂತಹ ವೀರಪುರುಷರ ವೈರವನ್ನು ವೃಥಾ ಕಟ್ಟಿಕೊಂಡೆನಲ್ಲಾ ಎಂದು ವ್ಯಥೆಯಾಗುತ್ತಿದೆ. ಆದರೆ ಮಿಂಚಿಹೋದ ಕಾರ್ಯಕ್ಕಾಗಿ ಚಿಂತಿಸಿ ಪ್ರಯೋಜನವಿಲ್ಲ.

ಈಗ ಈ ಪತ್ರವನ್ನು ತಮಗೆ ಬರೆಯುತ್ತಿರುವ ಉದ್ದಿಶ್ಯವಿಷ್ಟು. ನನಗೆ ಬೇಕಾಗಿರುವುದು ನಿಮ್ಮೊಡನೆ ಮೈತ್ರಿ. ಇದನ್ನು ಸ್ಪಷ್ಟವಾಗಿ ಬರೆದಿರುವುದರಲ್ಲಿ ಯಾವುದೋ ಮೋಸ ಅಡಗಿರುವುದೆಂದಾಗಲೀ ನಾನು ನಿಮಗೆ ಹೆದರಿರುವೆನೆಂದಾಗಲೀ ತಾವು ಭಾವಿಸಬಾರದು! ನಾನು ವೀರ ಪಕ್ಷಪಾತಿ. ಗುಣಕ್ಕೆ ಮತ್ಸರವೇಕೆ? ನಿಮ್ಮ ಪೌರುಷ, ಸ್ವಾಭಿಮಾನ, ದೇಶಪ್ರೇಮಗಳು ನನ್ನನ್ನು ಮನ್ಮೋಹನನ್ನಾಗಿ ಮಾಡಿವೆ. ನಿಮ್ಮ ವಿಷಯದಲ್ಲಿ ನನಗೆ ಅಭಿಮಾನ, ಗೌರವಗಳನ್ನು ತಳೆಯುವಂತೆ ಮಾಡಿವೆ. ಅಂತಲೇ ನನ್ನ ಹೃದಯವನ್ನು ಬಿಚ್ಚಿ ನಿಮ್ಮೆದುರು ಇಡುತ್ತಿದ್ದೇನೆ. ಇದನ್ನು ನಂಬುವುದೂ ಬಿಡುವುದೂ ತಮ್ಮ ಚಿತ್ತ.

ಈಗ ತಮ್ಮ ಮೈತ್ರಿ ಲಾಭಕ್ಕಾಗಿ ತಮ್ಮಲ್ಲಿ ನಾನು ಬೇಡುವುದು ಇಷ್ಟು. ಪದ್ಮಿನಿಯನ್ನು ನನಗೆ ವಶಪಡಿಸಿರೆಂದು ನಾನು ಕೇಳುವುದಿಲ್ಲ. ನನಗೆ ದ್ರೋಹ ಬಗೆದ ವಾಘೇಲಕರ್ಣನನ್ನೂ, ಅವನ ಮಗಳನ್ನೂ ನನಗೆ ವಶಪಡಿಸಿರೆಂದು ಕೇಳುವುದಿಲ್ಲ. ನಿಮ್ಮೊಡನೆ ಗೌರವರೀತಿಯ ಒಪ್ಪಂದವನ್ನು ಮಾಡಿಕೊಂಡು.

ನಿಮ್ಮ ಸ್ನೇಹ ಹಸ್ತವನ್ನು ಸ್ವೀಕರಿಸಿ ಇಲ್ಲಿಂದ ಗೌರವ ರೀತಿಯಲ್ಲಿ ಕಾಲ್ತೆಗೆಯುವುದು. ಇದಕ್ಕೆ ನೀವು ಸಮ್ಮತಿಸುವಿರೆಂದು ನಂಬಿರುತ್ತೇನೆ.

ಕಡೆಯದಾಗಿ ತಮ್ಮಲ್ಲಿ ಒಂದು ವಿಶೇಷ ಕೋರಿಕೆಯನ್ನು ಬಿನ್ನವಿಸಲು ಮನಸಾಗುತ್ತಿದೆ. ಇದನ್ನು ಚಪಲವೆಂದು ಬೇಕಾದರೂ ತಿಳಿಯಿರಿ! ನನ್ನ ದುರಾಸೆ ಎಂದು ಬೇಕಾದರೆ ತಿಳಿಯಿರಿ! ಪ್ರಲೋಭವೆಂದು ಬೇಕಾದರೂ ಕರೆಯಿರಿ! ನಾನು ತಮ್ಮ ಪತ್ನಿ ಪದ್ಮಿನಿಯವರ ರೂಪ ಸೌಂದರ್ಯದ ಬಗ್ಗೆ ಅನೇಕರ ಬಾಯಲ್ಲಿ ಕೇಳಿದ್ದೇನೆ. ಅಂತಹ ಅಪೂರ್ವ ಸ್ತ್ರೀರತ್ನವನ್ನು ಪಡೆದ ನೀವೇ ಧನ್ಯರು!

ಈಗ ನಿಮ್ಮ ಶಕ್ತಿ ಸಾಮರ್ಥ್ಯಗಳನ್ನು ಕಂಡ ಮೇಲೆ ಅವಳನ್ನು ಪತ್ನಿಯಾಗಿ ಪಡೆಯಲು ನೀವು ಎಲ್ಲ ರೀತಿಯಲ್ಲೂ ಅರ್ಹರಾಗಿರುವಿರೆಂಬ ಅಭಿಪ್ರಾಯ ತಳೆದಿದ್ದೇನೆ. ಈಗ ನಾನು ನಿಮ್ಮಲ್ಲಿ ಬೇಡುವುದೇನೆಂದರೆ, ಆ ಸೌಂದರ್ಯ ನಿಧಿಯನ್ನು ಒಮ್ಮೆ – ಒಂದೇ ಒಂದು ಬಾರಿ ದರ್ಶನ ಮಾಡುವ ಭಾಗ್ಯ ವಿಶೇಷವನ್ನು ಕರುಣಿಸಿದರೆ ನಾನು ಇಲ್ಲಿಗೆ ಬಂದುದಕ್ಕೆ ಕೃತಾರ್ಥನೆಂದು ತಿಳಿಯುತ್ತೇನೆ. ಒಂದು ವೇಳೆ ನಿಮ್ಮ ಸಂಪ್ರದಾಯದ ಕಟ್ಟಳೆ ಈ ಸಂದರ್ಶನಕ್ಕೆ ಅಡ್ಡಿಪಡಿಸುವುದಾದರೆ, ಪದ್ಮಿನಿಯನ್ನು ನಾನು ಕನ್ನಡಿಯಲ್ಲಾದರೂ ನೋಡಿ, ಹಿಂದಿರುಗುತ್ತೇನೆ. ಸಹೋದರಭಾವದಲ್ಲಿ ಈ ಕೋರಿಕೆಯನ್ನು ತಾವು ಈಡೇರಿಸಿಕೊಡುವಿರೆಂದು ನಂಬುತ್ತೇನೆ.

ಇಂತು ತಮ್ಮ ವಿಶ್ವಾಸಿ,
ಅಲ್ಲಾವುದ್ದೀನ್.

ಈ ಪತ್ರವನ್ನು ಓದಿಕೊಂಡು ಭೀಮಸಿಂಗನಿಗೆ ತನ್ನ ಕಣ್ಣನ್ನು ತಾನೇ ನಂಬಲು ಸಾಧ್ಯವಾಗಲಿಲ್ಲ. ಇದು ದಿಲ್ಲೀಶ್ವರನಿಂದ ಬಂದ ಪತ್ರವೇ ಎಂದು ಶಂಕಿಸಿದನು. ಮರುಕ್ಷಣದಲ್ಲಿ ಅವನಿಗೆ ಈ ಪತ್ರದಲ್ಲಿ ಯಾವುದಾದರೂ ಮೋಸ ಅಡಗಿರಬಹುದೇ ಎಂದೆನಿಸಿತು! ಹಾಗಿದ್ದರೆ ಅವನೇಕೆ ಹೀಗೆ ವಿನಯದಿಂದ ಬರೆಯುತ್ತಿದ್ದ? ತನ್ನೊಡನೆ ಗೌರವಯುತವಾದ ಒಪ್ಪಂದ ಮಾಡಿಕೊಂಡು ಹಿಂದಿರುಗುವುದಾಗಿ ತಿಳಿಸುತ್ತಿದ್ದ? ತಾನು ಯಾವ ಉದ್ದಿಶ್ಯ ಸಾಧನೆಗಾಗಿ ಬಂದಿದ್ದನೋ ಅದನ್ನು ಬಿಟ್ಟುಕೊಟ್ಟು, ಸ್ನೇಹಿತನಂತೆ ತೆರಳಬಯಸುತ್ತಿದ್ದ? ಬಹುಶಃ ಚಿತ್ತೂರನ್ನು ಗೆಲ್ಲುವುದು ಅಸಾಧ್ಯವೆಂದು ತೋರಿರಬೇಕು!

ಅವನ ಪೊಳ್ಳು ಬೆದರಿಕೆಗಳಿಗೆ ನಾವು ಬೆದರುವುದಿಲ್ಲವೆಂದು ಮನವರಿಕೆಯಾಗಿರಬೇಕು – ಇಲ್ಲದಿದ್ದರೆ ಅವನು ಎಂದೂ ಇಂತಹ ಪತ್ರವನ್ನು ಬರೆಯುತ್ತಿರಲಿಲ್ಲ.

ಹೀಗೆ ಯೋಚಿಸಿದ ಕೂಡಲೇ ಭೀಮಸಿಂಗನ ಮುಖದಲ್ಲಿ ಮುಗುಳುನಗೆ ಮೂಡಿತು. ಹೇಗಾದರೂ ಇರಲಿ. ಈ ಪತ್ರವನ್ನು ಮಂತ್ರಿ ಪರಿಷತ್ತಿಗೂ, ಪದ್ಮಿನಿಗೂ, ಕರ್ಣರಾಯನಿಗೂ ಇನ್ನಿತರ ಆಪ್ತರಿಗೂ ತೋರಿಸಿ, ಈ ಬಗ್ಗೆ ನಿರ್ಧಾರ ಕೈಗೊಳ್ಳಬೇಕೆಂದು ನಿರ್ಧರಿಸಿದನು.

ಸಚಿವರ ಹಾಗೂ, ದಂಡನಾಯಕರ ಅಭಿಪ್ರಾಯ ಕೇಳಿದಾಗ ಅವರು "ಪ್ರಭು, ಇದರಲ್ಲಿ ಒಂದು ವೇಳೆ ಮೋಸವಿದ್ದರೂ, ನಮಗೆ ಯಾವುದೇ ತೊಂದರೆ ಇಲ್ಲ. ಅವನು ಮಹಾರಾಣಿ ಪದ್ಮಿನಿದೇವಿಯವರನ್ನು ನೋಡುವ ಸಲುವಾಗಿ ಇಲ್ಲಿಗೆ ಬಂದುಹೋಗುವುದರಿಂದ ನಮಗೆ ಅಪಾಯವಿಲ್ಲ. ಅವನು ಇಲ್ಲಿಗೆ ಬಂದಾಗ, ದುರುದ್ದೇಶವಿಟ್ಟುಕೊಂಡು ಬಂದಿದ್ದರೆ, ಇಲ್ಲಿಂದ ಅವನು ಜೀವಂತ ಹಿಂದಿರುಗಲಾರ. ಹಾಗಿಲ್ಲದೆ, ಸದುದ್ದೇಶಪ್ರೇರಿತನಾಗಿ ಬಂದಿದ್ದರೆ, ಮಹಾರಾಣಿ ಪದ್ಮಿನಿದೇವಿಯವರನ್ನು ಒಮ್ಮೆ ಸಂದರ್ಶಿಸಿ ಹೋಗಲಿ. ಇದರಿಂದ ನಮ್ಮೆರಡು ರಾಷ್ಟ್ರಗಳಿಗೆ ಸ್ನೇಹ ಉಂಟಾಗುವುದು! ನಮ್ಮಲ್ಲಿ ಆಶ್ರಯ ಪಡೆದವರನ್ನು ನಾವು ಉಳಿಸಿದಂತೆ ಆಗುವುದು. ನಮ್ಮ ಘನತೆ ಗೌರವಗಳು ದಿಗಂತ ವಿಶ್ರಾಂತವಾಗುವುವು! ಇಷ್ಟರ ಮೇಲೆ ಪ್ರಭುಗಳ ಚಿತ್ತ!" ಎಂದು ಹೇಳಿದರು.

ಕರ್ಣರಾಯನು ಮಾತ್ರ "ಭೀಮಸಿಂಗರೇ, ನನ್ನ ಸ್ವಂತ ಅಭಿಪ್ರಾಯ ತಿಳಿಸುವುದಾದರೆ, ಆ ದೇಶದ್ರೋಹಿಯ ಮಾತನ್ನು ನಂಬಿ ನಾವು ಮೋಸ ಹೋಗಬಾರದು. ಅವನು ಕಪಟಿ, ಮೋಸಗಾರ, ಸ್ವಾರ್ಥಸಾಧನೆಗಾಗಿ ಏನನ್ನು ಮಾಡಲೂ ಹೇಸದ ನೀಚ. ತನಗೆ ಅನ್ನವಿಟ್ಟು ಸಾಕಿದ ಮಾವನನ್ನು ಕೊಂದು ಪಟ್ಟಕ್ಕೆ ಬಂದಿದ್ದಾನೆ. ಪರಸತಿಯರ ಮೇಲೆ ಮನಸ್ಸು ಕೊಡುವ ಕಾಮಿ. ವಿಷಯಾಸಕ್ತ ಪಶು ಅವನು! ಅಂತಹವನ ಮಾತಿಗೆ ನಾವು ಬೆಲೆ ಕೊಡಬಾರದು! ಅವನು ಪದ್ಮಿನಿದೇವಿಯವರನ್ನು ನೋಡಲು ಬಯಸುವುದು– ಇಂದ್ರಿಯ ಚಾಪಲ್ಯ ತೀರಿಸಿಕೊಂಡು ಹೊರಡುವುದಕ್ಕಾಗಿ ಅಲ್ಲ–ನಮ್ಮ ಬಲಾಬಲಗಳನ್ನು ತಿಳಿಯುವ ಸಲುವಾಗಿ! ನಾವು ಈಗ ಅವನ ಕೋರಿಕೆಯನ್ನು ತಿರಸ್ಕರಿಸುವುದೇ ಒಳ್ಳೆಯದು. ಅವನ ಸವಿಮಾತುಗಳಿಗೆ ನಾವು ಮರುಳಾಗಿ ಸರ್ವನಾಶ ಮಾಡಿಕೊಳ್ಳಬಾರದು" ಎಂದನು.

ಭೀಮಸಿಂಗನಿಗೆ ಈ ಮಾತಿನಿಂದ ಉತ್ಸಾಹ ಭಂಗವಾಯಿತು. ಅವನು ಯಾವುದೇ ತೀರ್ಮಾನ ಕೈಗೊಳ್ಳದೆ, ಪದ್ಮಿನಿಯ ಅಭಿಪ್ರಾಯದಂತೆ ನಡೆಯಲು ನಿರ್ಧರಿಸಿದನು. ಅವಳ ಅಂತಃಪುರಕ್ಕೆ ಬಂದು, ಪದ್ಮಿನಿಗೆ ನಡೆದ ಸಂಗತಿಯನ್ನೆಲ್ಲಾ ಹೇಳಿ, ಅಲ್ಲಾವುದ್ದೀನನ ಪತ್ರವನ್ನು ಕೊಟ್ಟನು. "ಪದ್ಮಿನಿ, ಚಿತ್ತೂರನ್ನು ಯವನರ ದಾಳಿಯಿಂದ ಉಳಿಸುವುದೂ–ಬಿಡುವುದೂ–ನಿನ್ನ ನಿರ್ಧಾರದ ಮೇಲೆ ನಿಂತಿದೆ. ನಿನ್ನ ಮನಸ್ಸಿನ ಅಭಿಪ್ರಾಯವನ್ನು ಸ್ಪಷ್ಟವಾಗಿ ತಿಳಿಸಬೇಕು. ಯಾವುದೇ ಸಂಕೋಚ ಬೇಡ ಎಂದನು.

"ಪ್ರಭು, ಅಂತಃಪುರ ನಿವಾಸಿನಿಯಾದ ನನಗೆ ಈ ಎಲ್ಲ ರಾಜಕೀಯವೇನು ತಿಳಿಯುತ್ತದೆ? ನೀವು ಹೇಗೆ ಆಜ್ಞೆಮಾಡುತ್ತೀರೋ ಅದರಂತೆ ನಡೆಯುವಳು ನಾನು. ನನಗೆ ತಿಳಿದಿರುವುದು ಇಷ್ಟೆ–ತಮ್ಮ ಪಾದಧೂಳಿಯನ್ನು ಶಿರದಲ್ಲಿ ಹೊತ್ತು ನಡೆಯುವುದು" ಎಂದಳು ಪದ್ಮಿನಿ.

"ಈಗ ನನ್ನ ಮಾತಿನಂತೆ ನಡೆದರೆ, ನಿನ್ನ ಕೀರ್ತಿಗೆ ಕಳಂಕ ಬರಬಹುದು!"

"ನಾಡಿನ ಕ್ಷೇಮ ಚಿಂತನೆ ಅದರಿಂದ ಸಾಧಿಸುವುದಾದರೆ, ಒಂದು ದಿನದ ಮಟ್ಟಿಗೆ ಪರಪುರುಷನಿಗೆ ದರ್ಶನ ಕೊಡುವುದರಿಂದ ನನ್ನ ಕೀರ್ತಿಗೆ ಕಳಂಕ ಬರುವುದಿದ್ದರೆ ಬರಲಿ!"

"ಹಾಗಿದ್ದರೆ ನಾಡಿನ ಕಲ್ಯಾಣಕ್ಕಾಗಿ ನೀನು ಇಷ್ಟು ತ್ಯಾಗಮಾಡಬಲ್ಲೆಯಾ?"

"ರಾಷ್ಟ್ರಕಲ್ಯಾಣವಾಗುವುದಾದರೆ, ನನ್ನನ್ನು ಬೇಕಾದರೆ ಬಲಿಗೊಡಬಲ್ಲೆ! ನೀವು ನನ್ನಿಂದ ಏನು ಕಾರ್ಯವಾಗಬೇಕೆಂದು ಆಜ್ಞೆಮಾಡಬೇಕೇ ಹೊರತು, ತಾವು ಪ್ರಾರ್ಥಿಸಬಾರದು, ಪ್ರಭು!"

"ಹಾಗಿದ್ದರೆ, ರಾಷ್ಟ್ರಕಲ್ಯಾಣದ ದೃಷ್ಟಿಯಿಂದ ಅಲ್ಲಾವುದ್ದೀನನಿಗೆ ಒಮ್ಮೆ ಕನ್ನಡಿಯಲ್ಲಿ ದರ್ಶನಕೊಡುತ್ತೀಯಾ?"

"ನಿಮ್ಮ ಇಷ್ಟ ಹಾಗಿದ್ದರೆ, ಅದನ್ನು ತಿರಸ್ಕರಿಸುವವಳು ನಾನಲ್ಲ!"

"ನನ್ನ ಇಚ್ಛೆಯ ಸಂಗತಿ ಹಾಗಿರಲಿ, ನಿನ್ನ ಅಭೀಷ್ಟ ಹೇಳು?"

"ನನ್ನ ಸ್ಪಷ್ಟ ಅಭಿಪ್ರಾಯ ಹೇಳುವುದಾದರೆ, ಆ ನೀಚನ ಹೆಸರು ನೆನೆದರೇ ನನಗೆ ಹೇಸಿಗೆಯಾಗುತ್ತದೆ. ಇನ್ನು ದರ್ಶನವೆ?"

"ಹಾಗಿದ್ದರೆ ಬೇಡ, ನಿನ್ನ ಸ್ನೇಹಹಸ್ತವನ್ನು ಸ್ವೀಕರಿಸಲು ನಾನು ಸಿದ್ಧವಿಲ್ಲವೆಂದು ಅಲ್ಲಾವುದ್ದೀನನಿಗೆ ತಿಳಿಸುತ್ತೇನೆ."

ಪದ್ಮಿನಿ ಮಾತನಾಡದೆ ಮೌನವಾಗಿ ಕುಳಿತಳು. ಕಡೆಗೆ ದೈನ್ಯದಿಂದ ಭೀಮಸಿಂಗನ ಮುಖವನ್ನು ನೋಡಿದಳು.

"ಈ ಬಗ್ಗೆ ಅಮಾತ್ಯರೂ, ದಂಡನಾಯಕರೂ ಏನು ಹೇಳುತ್ತಾರೆ?"

"ಎಲ್ಲರ ಅಭಿಪ್ರಾಯವೂ ಯವನರ ಯಃಕಶ್ಚಿತ ಕೋರಿಕೆಯನ್ನು ಈಡೇರಿಸುವುದರಲ್ಲಿ ನಮ್ಮ ಕಲ್ಯಾಣವಿದೆ ಎಂಬುದೇ ಆಗಿದೆ."

"ಹಾಗಿದ್ದರೆ, ನೀವು ಅಲ್ಲಾವುದ್ದೀನನಿಗೆ ಕಾಗದ ಬರೆಯಿರಿ. ಅವನ ಕೋರಿಕೆಯಂತೆ, ಪದ್ಮಿನಿಯು ದರ್ಶನಕೊಡಲು ಸಿದ್ಧವಿರುವುದಾಗಿ ತಿಳಿಸಿ."

"ಪದ್ಮಿನಿ ನೀನು ನಾಡಿನ ಭಾಗ್ಯದೇವಿ! ನಿನ್ನಂತಹವಳಿಗೆ ನಾನು ಯೋಗ್ಯಪತಿಯಲ್ಲ" ಎಂದು ಹೇಳಿ ಪದ್ಮಿನಿಯನ್ನು ಅಪ್ಪಿಕೊಂಡು, ಅಶ್ರು ಭಾಷ್ಪ ಸುರಿಸಿದನು.

ಯವನರ ದಾಳಿಯಿಂದ ಚಿತ್ತೂರನ್ನು ರಕ್ಷಿಸಲು ನಿರ್ವಾಹವಿಲ್ಲದೆ, ಭೀಮಸಿಂಗ ಹಾಗೂ ಪದ್ಮಿನಿಯರು ಈ ಕಾರ್ಯಕ್ಕೆ ಒಪ್ಪಿಗೆಯನ್ನು ಸೂಚಿಸಿದರು. ಈ ಸುದ್ದಿಯು ಪತ್ರಮುಖೇನ ಅಲ್ಲಾವುದ್ದೀನನಗೆ ತಿಳಿದಾಗ ಅವನಿಗೆ ಆದ ಸಂತೋಷಕ್ಕೆ ಪಾರವೇ ಇಲ್ಲ. ಅವನಿಗೆ ಸ್ವರ್ಗ ಮೂರು ಗೇಣು ಉಳಿಯಿತು. ಅವನಿಗೆ ತನ್ನ ಬಹುಕಾಲದ ಕನಸು ಈಡೇರಿದಂತೆ ತೋರಿತು. ಇಷ್ಟು ಸುಲಭವಾಗಿ ಭೀಮಸಿಂಗನು ತನ್ನ ಕೋರಿಕೆಗೆ ಒಪ್ಪುವನೆಂದು ಅವನು ತಿಳಿದಿರಲಿಲ್ಲ. ಅವನನ್ನು ವಂಚಿಸಿದ ತನ್ನ ಜಾಣ್ಮೆಗಾಗಿ, ಬುದ್ಧಿಕುಶಲತೆಗಾಗಿ ಹೆಮ್ಮೆಯಾಯಿತು. ಅವನು ಕೂಡಲೇ ಶಾಂತಿಸೂಚಕವಾಗಿ ಬಿಳಿನಿಶಾನೆಯನ್ನು ಏರಿಸಿ, ಸೈನಿಕರಿಗೆ ತಮ್ಮ ಶಿಬಿರಗಳಿಗೆ ಹಿಂತಿರುಗಲು ಕಹಳೆಯನ್ನು ಊದಿಸಿದನು.

ಅಲ್ಲಾವುದ್ದೀನ ಹಾಗೂ ಪದ್ಮಿನಿಯರ ಭೆಟ್ಟಿಗೆ ಎಲ್ಲವೂ ಸಿದ್ಧವಾದವು. ನಿಶ್ಚಿತವಾದ ದಿನ ಅಲ್ಲಾವುದ್ದೀನನು ಸೂಕ್ತ ಪರಿವಾರದೊಡನೆ ಹೊರಟು ಕೋಟೆಯ ಬಳಿಗೆ ಬಂದಿಳಿದನು. ಅಲ್ಲಿಗೆ ಬಂದಿದ್ದ ಭೀಮಸಿಂಗನು ಅವನನ್ನು ಸಕಲ ರಾಜಮರ್ಯಾದೆಯಿಂದ ಸ್ವಾಗತಿಸಿ, ಕರಲಾಘವವನ್ನಿತ್ತು ಅರಮನೆಗೆ ಕರೆದೊಯ್ದನು.

ದಾರಿಯುದ್ದಕ್ಕೂ ರಾಜಧಾನಿಯ ನಿವಾಸಿಗಳು ವೈಭವದ ಸ್ವಾಗತವನ್ನೇ ಅವನಿಗೆ ನೀಡಿದರು. ಜನರು ಬೀದಿಗಳಲ್ಲೂ, ಮಹಡಿಗಳ ಮೇಲೂ ನಿಂತು ಜಯಕಾರಮಾಡಿ ಅವನನ್ನು ಆದರದಲ್ಲಿ ಬರಮಾಡಿಕೊಂಡರು. ಅಲ್ಲಾವುದ್ದೀನನ ಪರಿವಾರ ಮದುವೆಯ ದಿಬ್ಬಣದಂತೆ ಮುಂದುವರೆಯಿತು.

ಅರಮನೆಯ ಮಹಾ ದ್ವಾರದಲ್ಲಿ ರಾಜಪುರೋಹಿತರೊಡನೆ ಸಾಮ್ರಾಟ ಲಕ್ಷ್ಮಣಸಿಂಗನೇ ಅವನನ್ನು ಎದುರುಗೊಂಡನು. ಕಳಶಕನ್ನಡಿ ಹಿಡಿದ ಮುತ್ತೈದೆಯರೂ, ಪಂಚಮಹಾವಾದ್ಯಗಳೂ, ಸ್ತುತಿಪಾಠಕರೂ, ಅತಿಥಿಯನ್ನು ರಾಜೋಚಿತವಾಗಿ ನಡೆಸಿಕೊಂಡರು. ಅನಂತರ ಅಲ್ಲಾವುದ್ದೀನನೂ, ಅವನ ಪರಿವಾರದವರೂ ಕುದುರೆಯಿಂದ ಇಳಿದು ರಾಜಮಂದಿರಕ್ಕೆ ಹೊರಟರು. ರಾಜಮಂದಿರವನ್ನು ಪ್ರವೇಶಿಸುತ್ತಿದ್ದಂತೆ ಅರಮನೆಯ ಬತೇರಿಗಳಿಂದ ಇಪ್ಪತ್ತೊಂದು ತೋಪುಗಳು ಹಾರಿದವು.

ಭೀಮಸಿಂಗನು ತನ್ನ ಮಂತ್ರಿಪುರೋಹಿತರೊಡಗೂಡಿ, ಮರ್ಯಾದೆಯಿಂದ ಅಲ್ಲಾವುದ್ದೀನನನ್ನು ಅರಮನೆಯ ಚಂಪ್ರಶಾಲೆಗೆ ಕರೆದೊಯ್ದನು ಅಲ್ಲಿ ಅವರಿಗೆ ಕುಳಿತುಕೊಳ್ಳಲು ಆಸನಗಳನ್ನು ತೋರುತ್ತಾ, ಆತ್ಮೀಯಧ್ವನಿಯಲ್ಲಿ "ಸುಲ್ತಾನರು ನಮ್ಮ ಅರಮನೆಗೆ ದಯಮಾಡಿಸಿದುದು ನಮ್ಮ ಭಾಗ್ಯವಿಶೇಷ. ಇಲ್ಲಿ ತಾವು ಯಾವುದಕ್ಕೂ ಸಂಕೋಚಪಟ್ಟುಕೊಳ್ಳಬಾರದು" ಎಂದನು.

"ತಮ್ಮಂತಹ ಕ್ಷಾತ್ರ ತೇಜಸಂಪನ್ನರ ಪರಿಚಯುವಾದುದು ನಮ್ಮ ಸೌಭಾಗ್ಯ! ನೀವು ನಿಜವಾಗಿಯೂ ಭೀಮಸಿಂಗರೇ ಸರಿ! ನಿಮ್ಮ ವಿಷಯದಲ್ಲಿ ನನಗೆ ಹೆಮ್ಮೆಯುಂಟಾಗಿದೆ" ಕೃತಕ ವಿನಯವನ್ನು ತೋರಿಸುತ್ತಾ ಹೇಳಿದ ಅಲ್ಲಾವುದ್ದೀನ್.

"ನಿಮ್ಮ ಪರಾಕ್ರಮದ ಮುಂದೆ ನನ್ನ ಪರಾಕ್ರಮವೇ? ಆದರೂ ನೀವು ಗುಣಪಕ್ಷಪಾತಿಗಳೆಂಬುದಕ್ಕೆ ಆ ಮಾತುಸಾಕ್ಷಿ. ನೀವು ಸ್ವತಃ ವೀರರಾಗಿರುವುದರಿಂದ ವೀರಪೂಜೆ ಮಾಡುತ್ತಿದ್ದೀರಿ, ಅಷ್ಟೇ. ಇದರಲ್ಲಿ ನನ್ನ ಯಾವುದೇ ಹೆಗ್ಗಳಿಕೆ ಇಲ್ಲ" ಎಂದ ಭೀಮಸಿಂಗ ನಗುತ್ತಾ.

"ಇದರಲ್ಲಿ ಹೊಗಳುವಂತಹದು ಏನೂ ಇಲ್ಲ. ಸೂಜಿಗಲ್ಲಿನಂತೆ ನೀವು ನನ್ನ ಹೃದಯವನ್ನೂ ನಿಮ್ಮ ಸ್ವದೇಶಾಭಿಮಾನ, ಸ್ವಾಭಿಮಾನ, ಪರಾಕ್ರಮ

ಗಳಿಂದ ಸೆರೆ ಹಿಡಿದಿದ್ದೀರಿ. ಇದರಲ್ಲಿ ನನ್ನ ಹಿರಿಮೆ ಯಾವುದೂ ಇಲ್ಲ."

"ಆದರೂ ಸೂಜಿಗಲ್ಲು ಕಬ್ಬಿಣದ ರಜೆಗಳನ್ನು ಆಕರ್ಷಿಸುವುದೇ ಹೊರತು, ಮರದ ತುಂಡನ್ನು ಆಕರ್ಷಿಸುವುದೆ? ನೀವು ಸ್ವತಃ ವೀರ ಪಕ್ಷಪಾತಿಗಳಾಗಿಲ್ಲದಿದ್ದರೆ, ನನ್ನನ್ನು ಈ ರೀತಿಯಲ್ಲಿ ಸನ್ಮಾನಿಸುತ್ತಿದ್ದಿರಾ?" ಎಂದು ಹೇಳಿ ತಾನೇ ಚನ್ನಾಗಿ ಕಳಿತ ಫಲಗಳನ್ನೂ, ಇನ್ನಿತರ ತಂಪಾದ ಪಾನೀಯಗಳನ್ನೂ ಇತ್ತನು. ಅಲ್ಲಾವುದ್ದೀನನು ಒಂದೆರಡು ದ್ರಾಕ್ಷಿ ಹಣ್ಣನ್ನು ಬಾಯಿಗೆ ಹಾಕಿಕೊಂಡು ಫಲಾಹಾರದ ಶಾಸ್ತ್ರ ಮುಗಿಸಿದನು. ಪಾನೀಯಗಳಲ್ಲಿ ವಿಷ ಬೆರತಿರಬಹುದೆಂಬ ಶಂಕೆಯಿಂದ ಅವುಗಳನ್ನು ಮುಟ್ಟಲಿಲ್ಲ. ಇದನ್ನು ಅರಿತ ಭೀಮಸಿಂಗನೂ ಆ ಬಗ್ಗೆ ಒತ್ತಾಯ ಮಾಡಲಿಲ್ಲ.

ಇಬ್ಬರೂ ಹತ್ತಿರದಲ್ಲಿ ಕುಳಿತು ಬಹುಕಾಲ ಅಗಲಿದ್ದ ಮಿತ್ರರಂತೆ, ಆತ್ಮೀಯವಾಗಿ ಅನೇಕ ವಿಷಯಗಳನ್ನು ಕುರಿತು ಸಂಭಾಷಿಸಿದರು. ಇಬ್ಬರೂ ಪರಸ್ಪರ ಹೃದಯಗಳನ್ನು ಬಿಚ್ಚಿ ಆಡಿದರು. ಅಲ್ಲಾವುದ್ದೀನನು ಭೀಮಸಿಂಗನನ್ನು ಸ್ನೇಹಿತನಂತೆ ನಡೆಸಿಕೊಂಡು, ದೆಹಲಿಗೆ ಹಿಂತಿರುಗಲು ಒಪ್ಪಿದನು. ವಾಘೇಲಕರ್ಣ ಮುಂತಾದವರಿಗೆ ಕ್ಷಮೆ ನೀಡಲು ಸಮ್ಮತಿಸಿದನು. ಸೆರೆಯಲ್ಲಿರುವ ಕಮಲಾದೇವಿಯನ್ನು ಹಿಂದಕ್ಕೆ ಮರ್ಯಾದೆಯಿಂದ ಕಳುಹಿಸಿಕೊಡಲು ಒಪ್ಪಿಕೊಂಡನು. ಇದರಿಂದ ಭೀಮಸಿಂಗನು ಸುಪ್ರೀತನಾದನು.

"ಇನ್ನು ಶಿಬಿರಕ್ಕೆ ಹಿಂದಿರುಗಲು ವೇಳೆಯಾಗಬಹುದು!" ಎಂದು ಅವನು ಎದ್ದಾಗ, ಭೀಮಸಿಂಗನು ಅವನ ಮನಸ್ಸಿನಲ್ಲಿರುವ ಬಯಕೆಯನ್ನು ಗ್ರಹಿಸಿ,

"ಇಂದು ನಮ್ಮಲ್ಲೇ ನೀವು ಬೀಡಾರ ಮಾಡಿದ್ದರೆ ಆಗುತ್ತಿತ್ತು!" ಎಂದನು.

"ಆಗಲಿ, ಇನ್ನೊಮ್ಮೆ ನಿಮ್ಮ ಆಮಂತ್ರಣ ಸ್ವೀಕರಿಸಿ, ಇಲ್ಲೇ ನಿಲ್ಲುತ್ತೇವೆ. ಈ ಬಾರಿ ಕ್ಷಮಿಸಬೇಕು" ಎಂದು ಹೊರಡಲು ಅನುವಾದನು.

"ಹಾಗಾದರೆ ನೀವು ನಿಮ್ಮ ಸಹೋದರಿಯನ್ನು ನೋಡಿಕೊಂಡು ಹೋಗುವುದಿಲ್ಲವೇನು?" ಎಂದು ಭೀಮಸಿಂಗನೇ ಕೇಳಿದ.

ಈ ಮಾತಿಗೆ ಅಲ್ಲಾವುದ್ದೀನನು ಅರ್ಥರಹಿತ ನಗೆ ನಕ್ಕು ಮರು ಮಾತಿಲ್ಲದೆ ಭೀಮಸಿಂಗನನ್ನು ಹಿಂಬಾಲಿಸಿದನು. ಭೀಮಸಿಂಗನು ಅಲ್ಲಾವುದ್ದೀನ

ನನ್ನು ಆಳೆತ್ತರದ ಪುರುಷ ಪ್ರಮಾಣದ ಕನ್ನಡಿಯ ಬಳಿಗೆ ಕರೆದೊಯ್ದನು. ಅದಕ್ಕೆ ಹೊದೆಸಿದ್ದ ತೆರೆಯನ್ನು ಸರಿಸಿದನು.

ಅಲ್ಲಾವುದ್ದೀನನು ಕುತೂಹಲದಿಂದ ಕನ್ನಡಿಯಲ್ಲಿ ದಿಟ್ಟಿಸಿದನು. ಕನ್ನಡಿಯಲ್ಲಿ ಉಪ್ಪರಿಗೆಯಲ್ಲಿ ಕುಳಿತಪದ್ಮಿನಿಯಮುಖ ಚಂದ್ರಬಿಂಬದಂತೆ ಹೊಳೆಯಿತು ದರ್ಪಣದಲ್ಲಿ ಕಂಡ ಪದ್ಮಿನಿಯ ರೂಪಿಗೆ ಅಲ್ಲಾವುದ್ದೀನನು ಮಾರುಹೋದನು ಅವಾಕ್ಕಾಗಿ ಅವನು ಪದ್ಮಿನಿಯ ಮುಖವನ್ನು ನೋಡಿದನು – ಅವಳ ಸ್ವರ್ಗ ಸೌಂದರ್ಯವನ್ನು ಹೀರುವಂತೆ, ಆಶಾದೃಷ್ಟಿಯಿಂದ ನೋಡಿದನು.

ಪದ್ಮಿನಿಯು ಉಪ್ಪರಿಗೆಯಲ್ಲಿ ಹೊನ್ನಿನ ಪುತ್ಥಳಿಯಂತೆ ಕುಳಿತಿದ್ದಳು. ಅವಳು ಕುಳಿತಿದ್ದ ಭಂಗಿಯಲ್ಲಿ ಅವಳ ಚಲವು ಇನ್ನಷ್ಟು ಎದ್ದು ಕಾಣಿಸುತ್ತಿತ್ತು. ಅವಳದು ಅಷ್ಟು ಎತ್ತರವಿಲ್ಲದ, ದಪ್ಪವಿಲ್ಲದ ಸುಭಗವಾದ ಆಕೃತಿ. ಬಾಳೆಯ ದಿಂಡಿನಂತೆ ಸೊಂಪಾದ ದೇಹ. ಅವಳ ಬಂಗಾರದ ಮೈ ಬಣ್ಣಕ್ಕೆ ಉಟ್ಟ ಉಡಿಗೆ ? ತೊಟ್ಟ ಆಭರಣಗಳು ಮನೋಹರವಾಗಿ ಒಪ್ಪುತ್ತಿತ್ತು.

ಅವಳು ತೆಳುವಾದ ನೀಲಿ ರೇಶಿಮೆಯ ಸೀರೆಯನ್ನು ಉಟ್ಟು ಬಿಗಿಯಾದ ಹಸಿರು ಕಂಚುಕ ತೊಟ್ಟಿದ್ದಳು. ಅದರ ಮೇಲೆ ಕೆಂಪು ಸೆರಗು ಹಾದು ಹೋಗಿತ್ತು. ಅವಳ ದೇಹದ ಭಾಗಗಳು ಅವುಗಳ ಮೂಲಕ ಸ್ಫುಟವಾಗಿ ಕಾಣುತ್ತಿದ್ದವು. ಆಕ್ಷಣಕ್ಕೆ ಅವಳು ಅವನಿಗೆ ಸ್ವರ್ಗಲೋಕದ ಅಪ್ಸರೆಯಂತೆ ಕಂಗೊಳಿಸಿದಳು. ಇನ್ನೊಂದು ಕ್ಷಣದಲ್ಲಿ ಅವಳು ಅಲ್ಲಿಂದ ಕಣ್ಮರೆಯಾಗಿದ್ದಳು. ಅಂತೂ ಅಲ್ಲಾವುದ್ದೀನನಿಗೆ ಪದ್ಮಿನಿಯ ದರ್ಶನವಾಗಿತ್ತು. ಅಲ್ಲಿಗೆ ಅವನು ಬಂದ ಕೆಲಸ ಮುಗಿಯಿತು.

ಅರಮನೆಯನ್ನು ಬಿಟ್ಟು ಹೊರಡುವಾಗ, ಅಲ್ಲಾವುದ್ದೀನನು ಭೀಮಸಿಂಗನನ್ನು ಪ್ರೀತಿಯಿಂದ ಆಲಿಂಗಿಸಿ,

"ನಿಮ್ಮ ಸೋದರ ಪ್ರೇಮಕ್ಕೆ ವಂದನೆಗಳು. ಇಂದಿನಿಂದ ನಮ್ಮೆರಡು ರಾಷ್ಟ್ರಗಳ ಸ್ನೇಹಕ್ಕೆ ಅಡಿಪಾಯ ನಿರ್ಮಿಸಿದಂತೆ ಆಯಿತು! ಇದೇ ವಿಶ್ವಾಸವನ್ನು ನೀವು ಕಡೆ ತನಕ ಇಟ್ಟುಕೊಂಡಿರಬೇಕು !" ಎಂದನು.

"ಇದು ನಿಮ್ಮನ್ನೇ ಕುರಿತಿದೆ. ನಾನಂತೂ ನಿಮ್ಮನ್ನು ನಮ್ಮ ಮಿತ್ರರೆಂದು ತಿಳಿದು, ನಡೆಸಿಕೊಂಡಿದ್ದೇವೆ!"

" ಭೀಮಸಿಂಹರೇ, ನನಗೆ ನಿಮ್ಮ ವಿಷಯದಲ್ಲಿ ತಪ್ಪು ಕಲ್ಪನೆ ಇತ್ತು. ನಿಮ್ಮ ಧೈರ್ಯ ಸಾಹಸಗಳೂ, ಅತಿಥಿಸತ್ಕಾರ, ಔದಾರ್ಯಗಳೂ ನನ್ನಲ್ಲಿ ನಿಮ್ಮ ವಿಷಯದಲ್ಲಿ ಅಭಿಮಾನ ತಳೆಯುವಂತೆ ಮಾಡಿವೆ. ನಿಮ್ಮಂತಹವರನ್ನು ನಾನು ಮೊದಲು ಸರಿಯಾಗಿ ನಡೆಸಿಕೊಳ್ಳಲಿಲ್ಲವಲ್ಲಾ ಎಂದು ಪಶ್ಚಾತ್ತಾಪ ವಾಗುತ್ತಿದೆ !"

" ಸುಲ್ತಾನರೇ, ನೀವು ಹಿಂದೆ ಆದುದಕ್ಕಾಗಿ ಪಶ್ಚಾತ್ತಾಪ ಪಡುವ ಕಾರಣ ವಿಲ್ಲ ! ಮನುಷ್ಯನೆಂದ ಮೇಲೆ ತಪ್ಪು ಮಾಡದೆ ಇರುವವರು ಯಾರು ? ನೀವು ಮಾಡಿದುದು ಅಂತಹ ಅಪರಾಧವೇನೂ ಅಲ್ಲ. ಹಿಂದೆ ನಡೆದುದನ್ನು ನೀವು ಮರೆತುಬಿಡಿ ! ಇನ್ನು ಮುಂದೆ ನಾವು ಮಿತ್ರರಾದ ಬಳಿಕ ಹಿಂದಿನದನ್ನು ಮರೆಯಬೇಕು !"

ಇಬ್ಬರೂ ಮಾತನಾಡದೆ ಮುಂದೆ ನಡೆದರು. ಈ ವೇಳೆಗೆ ಅವರು ಕೋಟೆಯ ಬಾಗಿಲ ಬಳಿಗೆ ಬಂದಿದ್ದರು. ಮುಳುಗುತ್ತಿದ್ದ ಸೂರ್ಯನನ್ನು ನೋಡಿ, "ನಾನಿನ್ನು ಹಿಂದಿರುಗಲು ಅಪ್ಪಣೆ ಕೊಡುತ್ತೀರಾ ?" ಎಂದ ಅಲ್ಲಾವುದ್ದೀನ ನಮ್ರನಾಗಿ.

"ಒಳ್ಳೆಯದು, ಹೋಗಿಬನ್ನಿ ! ದಯಾಮಯನಾದ ಭಗವಂತನು ನಿಮಗೆ ಒಳ್ಳೆಯದನ್ನು ಮಾಡಲಿ !'' ಎಂದು ನಿಂತ ಭೀಮಸಿಂಹ.

ನಾಲ್ಕು ಹೆಜ್ಜೆ ಮುಂದೆ ಇಟ್ಟು ಅಲ್ಲಾವುದ್ದೀನನು ಮತ್ತೆ ಏನನ್ನೋ ನೆನಪಿಗೆ ತಂದುಕೊಂಡವನಂತೆ,

"ಭೀಮಸಿಂಹರೇ, ನೀವು ನಮ್ಮ ಶಿಬಿರಕ್ಕೆ ಎಂದು ಬರುತ್ತೀರಿ ?'' ಎಂದನು.

" ಇನ್ನೊಮ್ಮೆ ಬಂದು ನಿಮ್ಮ ಆತಿಥ್ಯವನ್ನು ಸ್ವೀಕರಿಸುತ್ತೇನೆ !'' ಎಂದ ಭೀಮಸಿಂಹ.

''ಏಕೆ ಇಂದೇ ಬರಬಹುದಲ್ಲಾ !''

ಈ ಮಾತಿಗೆ ಅವನು ಉತ್ತರ ಹೇಳದೆ ನಕ್ಕ. ಈ ವೇಳೆಗೆ ಅವರು ಅಗಸೆ ಬಾಗಿಲನ್ನು ದಾಟಿ ನೂರು ಮಾರು ದೂರ ಬಂದಿದ್ದರು. ಭೀಮಸಿಂಹನು ಅಲ್ಲಿ ಅವನನ್ನು ಬೀಳ್ಕೊಟ್ಟನು.

ಅವನು ಹಿಂದಿರುಗಿ ಹೋಗುತ್ತಿರುವಾಗ ಯಾರೋ ಬಂದು ಬಡಗಿಯಿಂದ ಅವನ ತಲೆಗೆ ಬಡಿದಂತಾಯಿತು. ಭೀಮಸಿಂಹನು ಹಾಗೇ ಪ್ರಜ್ಞಾಶೂನ್ಯನಾಗಿ ನೆಲಕ್ಕೆ ಉರುಳಿದನು. ಅವನನ್ನು ಅಲ್ಲಾವುದ್ದೀನನ ಸೈನಿಕರು ಎತ್ತಿಕೊಂಡು ಕುದುರೆಯ ಮೇಲೆ ಹಾಕಿಕೊಂಡು ವಾಯುವೇಗದಲ್ಲಿ ಹೊರಟುಹೋದರು. ಭೀಮಸಿಂಹನ ಕಡೆಯವರು ಎಚ್ಚತ್ತು ತಮ್ಮ ಒಡೆಯನ ನೆರವಿಗೆ ಬರುವುದರೊಳಗಾಗಿ ಅಲ್ಲಾವುದ್ದೀನನು ಭೀಮಸಿಂಹನೊಡನೆ ಕಣ್ಮರೆಯಾಗಿದ್ದನು.

ಎಲ್ಲವೂ ಮಿಂಚಿನ ವೇಗದಲ್ಲಿ ನಡೆದುಹೋಗಿತ್ತು. ದ್ರೋಹಿಯಾದ ಅವನು ಸವಿಮಾತುಗಳಿಂದ ಭೀಮಸಿಂಹನನ್ನು ವಂಚಿಸಿ, ಕಪಟತನದಲ್ಲಿ ಅವನನ್ನು ಸೆರೆಹಿಡಿದು, ತನ್ನ ಶಿಬಿರಕ್ಕೆ ಹೊತ್ತುಕೊಂಡು ಹೋಗಿದ್ದನು.

## ೧೮

ಎಲ್ಲವೂ ಅಲ್ಲಾವುದ್ದೀನನ ಎಣಿಕೆಯಂತೆಯೇ ನಡೆದಿತ್ತು. ಅವನು ಉಪಾಯಾಂತರದಲ್ಲಿ ಭೀಮಸಿಂಹನನ್ನು ಕೈಸೆರೆ ಹಿಡಿದು ತನ್ನ ಶಿಬಿರಕ್ಕೆ ಹಿಂತಿರುಗಿದ್ದನು. ಸೈನಿಕರು ಅವನ ಸಹಾಯಕ್ಕೆ ಬರುವುದರೊಳಗಾಗಿ ಅಲ್ಲಾವುದ್ದೀನನು ಭೀಮಸಿಂಹನನ್ನು ಬಹುದೂರ ಕರೆದೊಯ್ದಿದ್ದನು. ಅವನನ್ನು ಬೆನ್ನಟ್ಟಿ ಬಂದ ಸೈನಿಕರು ಯವನರ ಕೈಯಲ್ಲಿ ಪೆಟ್ಟು ತಿಂದು ಹಿಂದಿರುಗಬೇಕಾಯಿತು. ಬದುಕಿ ಉಳಿದ ಸೈನಿಕನೊಬ್ಬನು ಓಡಿಹೋಗಿ, ಪದ್ಮಿನಿಗೆ ನಡೆದ ಸಂಗತಿಯನ್ನು ತಿಳಿಸಿದನು.

"ತಾಯಿ, ಅನ್ಯಾಯವಾಯಿತು, ಸರ್ವನಾಶವಾಯಿತು! ಆ ದ್ರೋಹಿ ಅಲ್ಲಾವುದ್ದೀನನು ದೊರೆಗಳನ್ನು ಮೋಸದಿಂದ ಕೈಸೆರೆ ಹಿಡಿದುಕೊಂಡು ಹೋಗಿದ್ದಾನೆ!" ಎಂದು ಬಡಬಡಿಸಿದನು.

ಇದನ್ನು ಕೇಳಿ ಪದ್ಮಿನಿಯೂ, ಲಕ್ಷ್ಮಣಸಿಂಹನೂ ದಿಗ್ಭ್ರಮೆಗೊಂಡು ಕುಳಿತರು. ಯಾರಿಗೂ ಈಗ ಏನು ಮಾಡಬೇಕೆಂದು ತಿಳಿಯದಾಯಿತು.

ಪದ್ಮಿನಿಗೆ ಈ ಸುದ್ದಿ ಕೇಳಿ ಸಿಡಿಲು ಬಡಿದಂತೆ ಆಗಿತ್ತು. ಅವಳು ಧೈರ್ಯಗೆಡದೆ, ಕೂಡಲೇ ಅಮಾತ್ಯರನ್ನೂ, ದಂಡನಾಯಕರನ್ನೂ ಬರಮಾಡಿ ಕೊಂಡಳು.

ಈ ಸುದ್ದಿಯನ್ನು ಕೇಳಿ ವಾಘೇಲಕರ್ಣನೂ ಗಾಬರಿಯಿಂದ ಓಡಿಬಂದನು. ಅವನು ಬರುವುದರೊಳಗಾಗಿ ಅರಮನೆಯ ಮಂತ್ರಾಗಾರದಲ್ಲಿ ಎಲ್ಲ ಪ್ರಮುಖ ವ್ಯಕ್ತಿಗಳೂ ಸೇರಿದ್ದರು. ಎಲ್ಲರೂ ಪ್ರೇತಕಳೆ ಹೊತ್ತು, ನೆಲವನ್ನು ನೋಡುತ್ತ ಕುಳಿತಿದ್ದರು. ಯಾರ ಮುಖದಲ್ಲೂ ಕಳೆಯಿರಲಿಲ್ಲ. ಎಲ್ಲರ ಮುಂದೆ 'ಮುಂದೇನು?' ಎಂಬ ಪ್ರಶ್ನೆ ಬೃಹದಾಕಾರವಾಗಿ ನಿಂತಿತ್ತು. ಈಗ ಏನು ಮಾಡಿದರೆ, ತಮ್ಮ ನೆಚ್ಚಿನ ಪ್ರಭು ಭೀಮಸಿಂಹನನ್ನು ಯವನರ ಕೈಯಿಂದ ಬಿಡಿಸಿಕೊಳ್ಳಬಹುದು ಎಂಬ ಸಮಸ್ಯೆ ಎದುರುಗೊಂಡಿತ್ತು.

ಇದು ದುಡುಕುವ ವಿಷಯವಾಗಿರಲಿಲ್ಲ. ಕೊಂಚ ದುಡುಕಿದರೂ ಭೀಮಸಿಂಹನ ಜೀವಕ್ಕೆ ಅಪಾಯ ಒದಗುತ್ತಿತ್ತು. ಅವನ ಜೀವಕ್ಕೆ ತೊಂದರೆ ಯಾಗಬಾರದು, ಉಪಾಯದಿಂದ ಅವನನ್ನು ಯವನರ ಸೆರೆಯಿಂದ ಪಾರು ಮಾಡಬೇಕು. ಈ ಕಾರ್ಯದಲ್ಲಿ ತಮ್ಮ ಘನತೆ ಗೌರವಗಳಿಗೆ ಧಕ್ಕೆಯುಂಟಾಗ ಬಾರದು; ಸ್ವಾಭಿಮಾನ ಸ್ವಾತಂತ್ರ್ಯಗಳ ಹರಣವಾಗಬಾರದು; ಹೆಚ್ಚು ರಕ್ತಪಾತವಾಗಬಾರದು. ಅಲ್ಲಾವುದ್ದೀನನು ಹೇಗೆ ಕುಟಿಲ ಕಾರಾಸ್ಥಾನದಿಂದ ಈ ಕಾರ್ಯ ಸಾಧಿಸಿದ್ದನೋ ಅಷ್ಟೇ ಕುಟಿಲತನದಲ್ಲಿ ತಾವು ಈ ಕಾರ್ಯವನು ಸಾಧಿಸಬೇಕು....ಅದು ಹೇಗೆ ಎಂಬುದು ಮಾತ್ರ ಯಾರಿಗೂ ತಿಳಿಯದೆ ಹೋಗಿತ್ತು.

ಇಂತಹ ಸಮಯದಲ್ಲಿ ಕರ್ಣರಾಯನು ತನ್ನ ಮಗಳು ದೇವಲದೇವಿ ಯೊಡನೆ ಅಲ್ಲಿಗೆ ಬಂದಿದ್ದನು. ಅವನಿಗೆ ನಡೆದಿದ್ದ ಸಂಗತಿ ಎಲ್ಲವೂ ತಿಳಿದಿತ್ತು. ತನ್ನ ಕಾರಣದಿಂದ ಭೀಮಸಿಂಹನ ಜೀವಕ್ಕೆ ಗಂಡಾಂತರವೊದಗಿತ್ತೆಂದು [illegible]ನಿಗೆ ತಿಳಿದಿತ್ತು. ಅಲ್ಲಾವುದ್ದೀನನ ಕೋರಿಕೆಯಂತೆ ತನ್ನನ್ನೂ ತನ್ನ [illegible]ಸುಗಳನ್ನೂ ಅವನಿಗೆ ಒಪ್ಪಿಸಿದ್ದರೆ ಅವನು ಚಿತ್ತೂರಿನ ತಂಟೆಗೆ ಬರುತ್ತಿರಲಿಲ್ಲ ವೆಂದು ಬಗೆದು,

"ತಾಯಿ, ತಮ್ಮಲ್ಲಿ ನನ್ನದೊಂದು ನಮ್ರ ಬೇಡಿಕೆ ಇದೆ. ಅಪ್ಪಣೆ ಕೊಟ್ಟರೆ ಬಿನ್ನವಿಸುತ್ತೇನೆ!" ಎಂದನು.

"ಏನದು ?" ಎಂದು ಪದ್ಮಿನಿ ತಲೆ ಎತ್ತಿ ಪ್ರಶ್ನಿಸಿದಳು.

"ತಾವು ನಿರ್ಭಾಗ್ಯರಾದ ನಮಗೆ ಆಶ್ರಯ ಕೊಟ್ಟಿದ್ದು ಬೀದಿಯಲ್ಲಿ ಹೋಗುವ ಮಾರಿಯನ್ನು ಮನೆಗೆ ಆಮಂತ್ರಿಸಿದಂತೆ ಆಯಿತು. ನೀವು ನಮಗೆ ಇಲ್ಲಿ ಆಶ್ರಯ ನೀಡದೆ ಇದ್ದಿದ್ದರೆ, ಯವನರು ತಮ್ಮ ತಂಟೆಗೆ ಬರುತ್ತಿರಲಿಲ್ಲ; ಈಗಲೂ ಕಾರ್ಯ ಮಿಂಚಿಹೋಗಿಲ್ಲ. ತಾವು ನಮ್ಮಿಬ್ಬರನ್ನೂ ಆ ಯವನರಿಗೆ ಒಪ್ಪಿಸಿರಿ. ನಮ್ಮ ಬಲಿದಾನದಿಂದ ಧರ್ಮಿಷ್ಠರಾದ ಭೀಮಸಿಂಹರು ಬದುಕಿ ಉಳಿದರೆ, ನೀವು ಇದುವರೆಗೆ ದೇಹ ಧರಿಸಿದ್ದುದು ಸಾರ್ಥಕವಾಗುತ್ತದೆ!" ಎಂದನು.

"ಏನು? ಆಶ್ರಯ ಬೇಡಿ ಬಂದ ನಿಮ್ಮನ್ನು ಶತ್ರುಗಳಿಗೆ ಒಪ್ಪಿಸಿ ನಮ್ಮ ಸ್ವಾರ್ಥವನ್ನು ಸಾಧಿಸುವುದೆ? ಇಲ್ಲ, ಕರ್ಣರಾಯರೇ, ಇದೊಂದು ಮಾತು, ಖಂಡಿತ ಸಾಧ್ಯವಿಲ್ಲ. ರಾಜಪುತ್ರರ ದೇಹದಲ್ಲಿ ತೊಟ್ಟು ರಕ್ತವಿರುವವರೆಗೆ ಮಹಾರಾಜರು ತಮಗೆ ಕೊಟ್ಟ ವಾಗ್ದಾನವನ್ನು ಉಳಿಸಿಕೊಳ್ಳಲು ನಾವು ಹೋರಾಡುತ್ತೇವೆ. ತಮ್ಮನ್ನು ಎಂದಿಗೂ ಶತ್ರುಗಳಿಗೆ ವಶಪಡಿಸುವುದಿಲ್ಲ!" ಎಂದು ವೀರವನಿತೆಗೆ ತಕ್ಕ ರೀತಿಯಲ್ಲಿ ನುಡಿದಳು ಪದ್ಮಿನಿ.

"ಹಾಗಾದರೆ, ನನ್ನ ಸಲುವಾಗಿ ಆ ದುಷ್ಟ ಯವನರ ದ್ವೇಷವನ್ನು ಕಟ್ಟಿ ಕೊಳ್ಳುತ್ತೀರಾ? ಇದರಿಂದ ನಿಮಗೆ ಬರುವ ಲಾಭವಾದರೂ ಏನು?" ಆತಂಕ ಗೊಂಡು ಕೇಳಿದ ಕರ್ಣ.

"ಇದರಿಂದ ಬರುವ ಲಾಭವೆ? ನಾವು ಐಹಿಕ ಲಾಭನಷ್ಟಗಳ ಯೋಚನೆ ಯಿಂದ ತಮಗೆ ಇಲ್ಲಿ ಆಶ್ರಯ ಕೊಡಲಿಲ್ಲ. ನಮ್ಮ ಆತ್ಮಕಲ್ಯಾಣಕ್ಕಾಗಿ ಈ ಕಾರ್ಯವನ್ನು ಎಸಗಿದೆವು. ನಿಮಗೆ ಆಶ್ರಯವನ್ನಿತ್ತರೆ ಯವನರ ಕೋಪಕ್ಕೆ ಪಾತ್ರರಾಗುವೆವೆಂದು ತಿಳಿದಿದ್ದರೂ, ನಿಮಗೆ, ಆಶ್ರಯ ಬೇಡಿ ಬಂದ ನಿಮಗೆ ಆಶ್ರಯ ಕೊಟ್ಟೆವು. ನಿಮಗೆ ಆದ ಅನ್ಯಾಯಕ್ಕೆ ಯವನರ ಮೇಲೆ ಪ್ರತೀಕಾರ ಬಗೆಯಲು ನಿಮಗೆ ರಕ್ಷಣೆ ನೀಡಿದೆವು! ಸ್ವಧರ್ಮ ರಕ್ಷಣೆಗಾಗಿ, ನಿಮಗೆ ಆಶ್ರಯ ನೀಡಿದೆವು.

ಇಂದು ಸ್ವಾರ್ಥಸಾಧನೆಗಾಗಿ ನಿಮ್ಮನ್ನು ಶತ್ರುಗಳಿಗೆ ಒಪ್ಪಿಸಿದರೆ, ವಚನಭ್ರಷ್ಟರಾಗುವುದು ಮಾತ್ರವಲ್ಲ, ಕರ್ತವ್ಯ ಭ್ರಷ್ಟರೂ ಆಗುತ್ತೇವೆ.

ನೀವು ನಿಮ್ಮ ಸಲುವಾಗಿ ನೀಚ ಅಲ್ಲಾವುದ್ದೀನನು ಚಿತ್ತೂರಿನ ಮೇಲೆ ದಂಡೆತ್ತಿ ಬಂದಿದ್ದಾನೆಂದು ತಿಳಿದಿದ್ದರೆ, ಅದು ತಪ್ಪು ಗ್ರಹಿಕೆ! ಅವನು ನಿಮ್ಮ ಸಲುವಾಗಿ ಇಲ್ಲಿಗೆ ದಂಡೆತ್ತಿ ಬರಲಿಲ್ಲ, ಹಿಂದೂ ಧರ್ಮವನ್ನು ನಾಶಮಾಡಲು ಬಂದಿದ್ದಾನೆ; ಹಿಂದೂ ಸ್ತ್ರೀಯರ ಮಾನಭಂಗ ಮಾಡಲು ಬಂದಿದ್ದಾನೆ. ನಮ್ಮ ಸರ್ವಸ್ವವನ್ನೂ ಸೂರೆಗೊಳ್ಳಲು ಬಂದಿದ್ದಾನೆ.

ಇಂತಹ ಕಾಮುಕನ ಜತೆಯಲ್ಲಿ ಸಂಧಾನವೆ? ಅವನನ್ನು ಯಮಸದನಕ್ಕೆ ಅಟ್ಟದಲ್ಲದೆ, ಈ ಜೀವಕ್ಕೆ ಶಾಂತಿ ಇಲ್ಲ. ರಾಜಪುತ್ರ ಸ್ತ್ರೀಯರ ತಂಟೆಗೆ ಬಂದರೆ ಯಾವ ದುರ್ಗತಿ ಪ್ರಾಪ್ತವಾಗುವುದೆಂಬುದನ್ನು ಆ ಕಾಮಾಂಧನಿಗೆ ತೋರಿಸಿ ಕೊಡದೆ ಇದ್ದರೆ ನಾನು ಪದ್ಮಿನಿಯಲ್ಲ!" ಎಂದು ವೀರೋದ್ಗಾರ ತೆಗೆದಳು.

ಈ ಮಾತು ಕೇಳಿ ನೆರೆದಿದ್ದವರ ಎದೆಯಲ್ಲಿ ಸ್ವಾಭಿಮಾನ, ಆತ್ಮಗೌರವ ಗಳನ್ನು ಹೊಡೆದೆಬ್ಬಿಸಿದಂತೆ ಆಯಿತು. ಚಣದ ಹಿಂದೆ ಮುಂದೇನು ಎಂದು ದಿಕ್ಕುಗೆಟ್ಟು ಕುಳಿತಿದ್ದ ಅವರು ಈಗ ಎಂತಹ ಪ್ರಸಂಗ ಬಂದರೂ ಅಂಜದೆ, ಅಳುಕದೆ, ರಾಜಪುತ್ರರ ಘನತೆ ಗೌರವಗಳಿಗೆ ತಕ್ಕ ರೀತಿಯಲ್ಲಿ, ಪರಿಸ್ಥಿತಿಯನ್ನು ಧೈರ್ಯವಾಗಿ ಎದುರಿಸಲು ಕಂಕಣ ತೊಟ್ಟರು.

ಅಲ್ಲಾವುದ್ದೀನನು ಯಾವ ರೀತಿಯಲ್ಲಿ ಭೀಮಸಿಂಹನನ್ನು ಮೋಸದಿಂದ ಸೆರೆಹಿಡಿದು ನಿರ್ಬಂಧದಲ್ಲಿ ಇರಿಸಿದ್ದನೋ ಅಷ್ಟೇ ಜಾಣ್ಮೆಯಿಂದ, ಕುಟಿಲತನದಲ್ಲಿ ಅವನನ್ನು ಬಿಡಿಸಿಕೊಂಡು, ಅಲ್ಲಾವುದ್ದೀನನ ಮೋರೆಗೆ ಮಸಿ ಬಳಿದು ಅಪಮಾನ ಗೊಳಿಸಬೇಕೆಂದು ಅವರು ನಿಶ್ಚಯಿಸಿದರು. ಇದನ್ನು ಕಾರ್ಯಗತಗೊಳಿಸು ವುದು ಹೇಗೆ?....ಅಷ್ಟರಲ್ಲಿ ಅಲ್ಲಾವುದ್ದೀನನಿಂದ ಒಂದು ಪತ್ರ ಬಂದು ಅವರ ಸಮಸ್ಯೆ ಪರಿಹಾರವಾಯಿತು.

ಅಲ್ಲಾವುದ್ದೀನನು ಭೀಮಸಿಂಹನನ್ನು ಬಲವಾದ ಪಹರೆಯಲ್ಲಿ ಬಂಧಿಸಿಟ್ಟ ಮೇಲೆ ಪದ್ಮಿನಿಯನ್ನು ಬಲಾತ್ಕಾರದಲ್ಲಿ ವಶಪಡಿಸಿಕೊಳ್ಳಲಿಚ್ಛಿಸದೆ, ಸಾಮೋ ಪಾಯದಲ್ಲಿ ತನ್ನವಳಾಗಿ ಮಾಡಿಕೊಳ್ಳಲು ಯೋಚಿಸಿ ಅವಳಿಗೆ ಒಂದು ಪ್ರಣಯಪತ್ರವನ್ನು ಬರೆದು ಕಳುಹಿಸಿಕೊಟ್ಟಿದ್ದನು.

ಈ ಪತ್ರವನ್ನು ಕಂಡು ಪದ್ಮಿನಿಗೆ ಅಪಮಾನದ ಬೆಂಕಿಗೆ ಆಜ್ಯಹೊಯ್ದಂತೆ ಆಯಿತು. ಆದರೂ ಈಗ ಸಿಟ್ಟುಮಾಡಿದರೆ ಕಾರ್ಯ ಹಾನಿಯಾಗುವುದೆಂದು,

ಅಪಮಾನವನ್ನು ನುಂಗಿಕೊಂಡಳು. ತನಗೆ ಬಂದ ಪತ್ರವನ್ನು ಭೀಮಸಿಂಹನ ಸಂಗಡಿಗನೂ, ಆಪ್ತಮಿತ್ರನೂ ರಾಜಬಂಧುವೂ ಆಗಿದ್ದ ಗೋರನ ಕೈಗೆ ಇತ್ತಳು.

ಅವನು ಬಾದಳನ ತಂದೆಯಾಗಿದ್ದನು. ಬಾದಳನೂ, ಲಕ್ಷ್ಮಣಸಿಂಹನೂ ಸಂಗಡಿಗರಾಗಿದ್ದು, ಪದ್ಮಿನಿಯ ಅಭಿಮಾನ ಗೌರವಗಳಿಗೆ ಪಾತ್ರನಾಗಿದ್ದನು. ಆವಳು ಆ ಬಾಲಕನ ಶೌರ್ಯ, ಸಾಹಸ, ವಿವೇಕಾದಿ ಸದ್ಗುಣಗಳಿಗೆ ಮಾರು ಹೋಗಿದ್ದಳು. ಅವನನ್ನು ತನ್ನ ಮಗನೆಂಬಂತೆ ನೋಡಿಕೊಳ್ಳುತ್ತಿದ್ದಳು. ಇಂಪು ಚಿಂತಾಕ್ರಾಂತಳಾಗಿ ಕುಳಿತ ಪದ್ಮಿನಿಯನ್ನು ಕಂಡು ಬಾದಳನು, ತನ್ನ ಚಿಕ್ಕಪ್ಪನೊಡನೆ ಅಲ್ಲಿಗೆ ಬಂದಿದ್ದನು.

ಗೋರನು ಅಲ್ಲಾವುದ್ದೀನನ ಪತ್ರವನ್ನು ಓದಿಕೊಂಡನು.

ಆ ಪತ್ರದಲ್ಲಿ ಅಲ್ಲಾವುದ್ದೀನನು ಹೀಗೆ ಬರೆದಿದ್ದನು :

ರಾಜಹಂಸೆ ಪದ್ಮಿನಿ,

ನೀನು ಸಾಮಾನ್ಯ ಹೆಣ್ಣೆಂದು ತಿಳಿಯಬಾರದು. ವಿಧಾತನು ನಿನ್ನನ್ನು ರೂಪಿಸಲು ತುಂಬ ಶ್ರಮ ಪಟ್ಟಿದ್ದಾನೆ. ನೀನು ವಿಶಾಲವಾದ ಸರಸ್ಸಿನಲ್ಲಿ ಸ್ವಚ್ಛಂದವಾಗಿ ವಿಹರಿಸಬೇಕಾದ ರಾಜಹಂಸೆ. ನೀನು ಸಮ್ರಾಟನ ಕೈ ಹಿಡಿದು ಸಾಮ್ರಾಜ್ಞಿಯಾಗಿ ಮೆರೆಯಬೇಕೆಂಬುದು ದೇವರ ಇಚ್ಛೆ. ಆದರೂ ನೀನು ನಿನ್ನ ಯೋಗ್ಯತೆಯನ್ನು ತಿಳಿಯದೆ ಅಸಾಮರ್ಥ್ಯೇಯ ರಾಜಪುತ್ರ ನೋರ್ವನ ಕೈಹಿಡಿದು, ನಿನ್ನ ಜೀವನವನ್ನು ವ್ಯರ್ಥಗೊಳಿಸಿಕೊಳ್ಳಲು ನಿಶ್ಚಯಿಸಿರುವುದನ್ನು ನೆನೆದರೆ ಆಶ್ಚರ್ಯವಾಗುತ್ತದೆ.

ಬಹುಶಃ ನಿನ್ನ ರೂಪ ಯೌವನಗಳ ಬೆಲೆ ನಿನಗೆ ತಿಳಿದಿರಲಾರದು. ಇಲ್ಲದಿದ್ದರೆ, ನೀನು ಭೀಮಸಿಂಗನ ಪತ್ನಿಯಾಗಲು ಒಪ್ಪುತ್ತಿರಲಿಲ್ಲ-ನಿನ್ನನ್ನು ಉದ್ಧರಿಸಲು ಬಂದ ನನ್ನ ಕೈಯನ್ನು ತಿರಸ್ಕರಿಸುತ್ತಿರಲಿಲ್ಲ. ಚಿಂತೆಇಲ್ಲ. ಹಿಂದೆ ಆದುದನ್ನು ಮರೆತುಬಿಡು. ಈಗಲೂ ನಿನ್ನ ಭಾಗ್ಯದ ಬಾಗಿಲು ತೆರೆದೇ ಇದೆ. ಚನ್ನಾಗಿ ಆಲೋಚಿಸಿ ನಿರ್ಧಾರ ಕೈಗೊಳ್ಳು !

ನಿನಗೆ ನನ್ನಲ್ಲಿ ಪ್ರೇಮವಿದೆ, ನಾ ಬಲ್ಲೆ. ಸಾಮ್ರಾಟನ ಮಡದಿಯಾಗಲು ಯಾರಿಗೆ ಆಸೆ ಇಲ್ಲ ? ಆದರೆ ಭೀಮಸಿಂಹನಿಗೆ ಅಂಜಿ ನಿನ್ನ ಮನೋಭಿಲಾಷೆ ಯನ್ನು ಅಡಗಿಸಿಕೊಂಡಿದ್ದೆ. ಈಗ ಭೀಮಸಿಂಹನ ಹೆದರಿಕೆ ನಿನಗೆ ಬೇಡ. ಅವನು ನಮ್ಮ ಸೆರೆಮನೆಯಲ್ಲಿ ಕೊಳೆಯುತ್ತಿದ್ದಾನೆ. ನೀನು ಇಚ್ಛಿಸುವುದಾದರೆ

ನಾಳೆಯೋ ಅವನ ಕಥೆಯನ್ನು ಮುಗಿಸಿಬಿಡಲೂ ಸಿದ್ಧ. ನೀನು ಹೇಗೆ ಆಜ್ಞೆ ಮಾಡುವೆಯೋ ಅವರಂತೆ ನಡೆಯುವ ಆಜ್ಞಾರಾಧಕ ನಾನು! ನಾನು ಬದುಕಿರುವುದು ನಿನ್ನ ಸಲುವಾಗಿ! ನಿನ್ನ ಸಲುವಾಗಿ ನಾನು ಯಾವ ತ್ಯಾಗಕ್ಕೂ ಸಿದ್ಧವಿದ್ದೇನೆ. ನನ್ನಲ್ಲಿ ಅನುರಕ್ತಳಾಗಿರುವ ನಿನ್ನನ್ನು ಭೀಮಸಿಂಹನ ಕಪಿಮುಷ್ಠಿಯಿಂದ ಬಿಡಿಸಲು ಯಾವ ಸಾಹಸಕ್ಕಾದರೂ ಸಿದ್ಧನಿದ್ದೇನೆ. ದೇವಿ, ನೀನು ಆಜ್ಞೆಮಾಡು, ಅವನನ್ನು ಶಿರವಲ್ಲಿ ಹೊತ್ತು ನಡೆಸುತ್ತೇನೆ.

ನೀನು ನನ್ನಲ್ಲಿ ಅನುರಕ್ತಳಾಗಿರುವುದು ನನಗೆ ತಿಳಿದಿದೆ. ಇದರಲ್ಲಿ ಆಶ್ಚರ್ಯ ಏನೂ ಇಲ್ಲ. ನೀನು ಕನ್ನಡಿಯಲ್ಲಿ ನನಗೆ ದರ್ಶನ ಕೊಟ್ಟಿದೇಕೆಂದು ತಿಳಿಯದಷ್ಟು ಮೂಢ ನಾನಲ್ಲ ನೀನು ಕನ್ನಡಿಯಲ್ಲಿ ಕಾಣಿಸಿಕೊಂಡು, ಒಮ್ಮೆ ಒಂದೇ ಒಂದು ಬಾರಿ ಮುಗುಳುನಗೆ ನಕ್ಕೆ. ಅದಕ್ಕೆ ನನ್ನ ಹೃದಯ ಸೂರೆ ಹೋಯಿತು. ನಾನು ನಿನ್ನ ಮೋಹಪಾಶದಲ್ಲಿ ಸಿಕ್ಕಿಬಿದ್ದಿದ್ದೇನೆ. ಇಂದು ನಿನ್ನನ್ನು ಸೇರಲು ನಾನು ಯಾವ ಮಹತ್ಕಾರ್ಯಕ್ಕೂ ಸಿದ್ಧನಿದ್ದೇನೆ. ನಿನ್ನಿಂದ ನನ್ನ ಬಾಳು ಬದುಕು. ನೀನು ಇಲ್ಲದ ಮೇಲೆ ನನ್ನ ರಾಜ್ಯಕೋಶಗಳು ಇದ್ದೂ ವ್ಯರ್ಥ! ಆದುದರಿಂದ ನಿನ್ನಲ್ಲಿ ನಾನು ಬೇಡುವುದಿಷ್ಟೇ: ದೇವಿ, ನೀನು ನನ್ನನ್ನು ಅನುಗ್ರಹಿಸು!

ಇಂತು ನಿನ್ನ ಪ್ರಣಯಾಕಾಂಕ್ಷಿ,
ಅಲ್ಲಾವುದ್ದೀನ್.

ಈ ಕಾಗದವನ್ನು ಓದಿಕೊಂಡು ಗೋರನು ತಿರಸ್ಕಾರದಿಂದ ನಕ್ಕನು.

"ತಾಯಿ, ನಾವು ಇನ್ನೂ ಬದುಕಿರುವಾಗಲೇ ಆ ನೀಚನು ತಮಗೆ ಇಂತಹ ಉದ್ಧಟತನದ ಪತ್ರ ಬರೆದಿದ್ದಾನೆ. ಆ ಮದೋನ್ಮತ್ತನಿಗೆ ತಕ್ಕರೀತಿಯಲ್ಲಿ ಬುದ್ಧಿ ಕಲಿಸುವ ಭಾರ ನಮಗೆ ಇರಲಿ. ತಾವು ಈ ಬಗ್ಗೆ ಚಿಂತಿಸುವ ಕಾರಣವಿಲ್ಲ! ನಮ್ಮ ಬಾಹುಗಳಲ್ಲಿ ತೊಟ್ಟು ರಕ್ತವಿರುವವರೆಗೆ ಇಂತಹ ದುಷ್ಟ ಯೋಚನೆ ಕೈಗೂಡುವುದಿಲ್ಲವೆಂಬುದನ್ನು ತಿಳಿಸಿ ಬರುತ್ತೇನೆ. ನನಗೆ ಈಗಲೇ ರಣವೀಳ್ಯವನ್ನು ಕೊಡಿ!" ಎಂದನು.

ಇದನ್ನು ಕೇಳಿ ಪದ್ಮಿನಿಯು ಗಂಭೀರಳಾಗಿ ಹೇಳಿದಳು.

"ಅಮಾತ್ಯರೇ, ನೀವು ಎಂತಹ ಸ್ವಾಮಿನಿಷ್ಠ ಸೇವಕರೆಂಬುದು ನನಗೆ ತಿಳಿದಿದೆ. ಆದರೂ ಸದ್ಯದ ಪರಿಸ್ಥಿತಿಯಲ್ಲಿ ನೀವು ತುಂಬಾ ಎಚ್ಚರದಿಂದ

ಕೆಲಸ ಮಾಡಬೇಕಾಗಿದೆ. ದುಡುಕಿದರೆ, ಶತ್ರುಗಳ ಸೆರೆಯಲ್ಲಿರುವ ನಿಮ್ಮ ಒಡೆಯರಿಗೆ ಗಂಡಾಂತರ ಒದಗುತ್ತದೆ. ನಾವು ಕೋಪದ ಕೈಗೆ ಬುದ್ಧಿ ಕೊಡದೆ, ಸಮಾಧಾನಚಿತ್ತದಿಂದ, ಈ ಪರಿಸ್ಥಿತಿಯಿಂದ ಪಾರಾಗುವ ದಾರಿಯನ್ನು ಹುಡುಕ ಬೇಕಾಗಿದೆ!" ಎಂದಳು.

ಇದರಿಂದ ಗೋರನ ಉತ್ಸಾಹಕ್ಕೆ ತಣ್ಣೀರೆರೆದಂತೆ ಆದರೂ ಪದ್ಮಿನಿಯ ಸಲಹೆ ಸೂಕ್ತವೆಂದು ತೋರಿತು. ಅವನು ಉದ್ವೇಗದಲ್ಲೇ ಹೇಳಿದ: "ಹಾಗಾದರೆ, ಆ ದ್ರೋಹಿಯ ಕೈಯಿಂದ ಭೀಮಸಿಂಹರನ್ನು ಬಿಡಿಸಿಕೊಂಡು ಬರುವ ದಾರಿ ಯಾವುದು ?"

"ಈಗಿನ ವಿಷಮಪರಿಸ್ಥಿತಿಯಲ್ಲಿ ನಾವು ಶಸ್ತ್ರವನ್ನು ಕೈಗೆ ತೆಗೆದುಕೊಂಡರೆ ಕಾರ್ಯ ಸಿದ್ಧಿಯಾಗುವುದಿಲ್ಲ. ನಾವು ಉಪಾಯದಿಂದಲೇ ಅವನನ್ನು ವಂಚಿಸಿ ಕಾರ್ಯ ಸಾಧಿಸಿಕೊಳ್ಳಬೇಕಾಗಿದೆ!"

"ಹಾಗಾದರೆ ಅದನ್ನು ತಾವು ತಿಳಿಸಬೇಕು. ತಮ್ಮ ಆಜ್ಞೆಯನ್ನು ಶಿರದಲ್ಲಿ ಹೊತ್ತು ಅಕ್ಷರಶಃ ಪಾಲಿಸುತ್ತೇವೆ!"

"ನೀವು ಇಷ್ಟು ಭರವಸೆ ಕೊಟ್ಟರೆ, ನನ್ನದೊಂದು ಯೋಜನೆ ಇದೆ. ಅದನ್ನು ಕಾರ್ಯರೂಪಕ್ಕೆ ತಂದರೆ, ಭೀಮಸಿಂಗರನ್ನು ಮಾತ್ರ ಬಿಡಿಸಿಕೊಳ್ಳು ವುದು ಮಾತ್ರವಲ್ಲ, ಮುಂದೆಂದೂ ಯವನರು ನಮ್ಮ ತಂಟೆಗೆ ಬಾರದಂತೆ ತಕ್ಕ ಪಾಠವನ್ನು ಕಲಿಸಬಹುದು!" ಎಂದಳು ಪದ್ಮಿನಿ.

"ಏನದು ಯೋಜನೆ ? ಅದನ್ನು ಕಾರ್ಯಗತ ಮಾಡುವ ಹೊಣೆಗಾರಿಕೆ ನನಗಿರಲಿ!" ಎಂದ ಹದಿನಾರು ವರ್ಷದ ಬಾದಳ.

"ಈ ಕಾರ್ಯದಲ್ಲಿ ಚಿಕ್ಕವರು ದೊಡ್ಡವರು, ಸ್ತ್ರೀಯರು ಪುರುಷರೆನ್ನದೆ- ಎಲ್ಲ ದೇಶಪ್ರೇಮಿಗಳೂ ತೊಡಗಬೇಕಾಗಿದೆ. ನೀವು ಒಪ್ಪುವುದಾದರೆ, ಶತ್ರುಗಳು ನಮ್ಮನ್ನು ಮೋಸ ಗೊಳಿಸಿದಂತೆ ನಾವೂ ಶತ್ರುಗಳನ್ನು ಮೋಸ ಗೊಳಿಸಿ ಕಾರ್ಯ ಸಾಧಿಸಿಕೊಳ್ಳೋಣ!" ಎಂದು ಹೇಳಿ ತನ್ನ ಯೋಜನೆ ಯನ್ನು ಅರುಹಿದಳು. ಆದಕ್ಕೆ ಅವರು ಮೊದಲು ಸಮ್ಮತಿಸದಿದ್ದರೂ, ಪದ್ಮಿ ನಿಯ ಧೈರ್ಯವನ್ನು ನೋಡಿ ಸಮ್ಮತಿಸಿದರು.

ಅದರಂತೆ ಕಾರ್ಯಕ್ರಮವೊಂದು ಸಿದ್ಧವಾಯಿತು. ಅದರ ಅಂಗವಾಗಿ ಪದ್ಮಿನಿಯು ಅಲ್ಲಾವುದ್ದೀನನಿಗೆ ಒಂದು ಪತ್ರ ಬರೆದಳು.

ದಿಲ್ಲೀಶ್ವರರಾದ ಅಲ್ಲಾವುದ್ದೀನ್ ಬಾದಷಹರಿಗೆ,

ತಾವು ವಿಶ್ವಾಸವಿಟ್ಟು ಬರೆದ ಪತ್ರ ಬಂದು ತಲುಪಿತು. ಈ ದಾಸಿಯ ಮೇಲೆ ತಮಗೆ ಇಷ್ಟೊಂದು ಪ್ರೀತಿ ಇರುವುದೆಂದು ನಾನು ತಿಳಿದಿರಲಿಲ್ಲ. ನನಗಿಂತಲೂ ಸುಂದರಿಯರಾದ ಅನೇಕ ಸ್ತ್ರೀಯರು ತಮ್ಮ ಕೃಪಾಕಟಾಕ್ಷಕ್ಕಾಗಿ ಹಾತೊರೆಯುತ್ತಿರುವಾಗ ನೀವು ನನ್ನ ಮೇಲೆ ಅನುಗ್ರಹಿಸಿರುವುದು ನನ್ನ ಪಾಲಿನ ಪುಣ್ಯವೇ ಸರಿ. ಆದರೂ ತಮ್ಮಂತಹ ಸಾಮ್ರಾಟರ ಪ್ರೀತಿ ವಿಶ್ವಾಸಗಳಿಗೆ ನಾನು ಅರ್ಹಳಲ್ಲ. ತಾವು ದಿಲ್ಲಿಯ ಚಕ್ರವರ್ತಿಗಳು; ನಾನು ಒಬ್ಬ ಸಾಮಾನ್ಯ ರಾಜಪುತ್ರಿ. ಅದರಲ್ಲೂ ವಿವಾಹಿತ ಸ್ತ್ರೀ. ಇದು ನಿಮ್ಮ ಹೃದಯ ವೈಶಾಲ್ಯತೆಯ ಗುರುತು.

ನೀವು ನನ್ನನ್ನು ನಿಮ್ಮ ಹೃದಯ ಸಾಮ್ರಾಜ್ಞಿಯಾಗಲು ಆಹ್ವಾನಿಸಿದ್ದೀರಿ! ನಿಜಹೇಳುವುದಾದರೆ, ನಾನು ನಿಮ್ಮ ಕೀರ್ತಿವೈಭವಗಳನ್ನು ಕೇಳಿ ನಿಮ್ಮ ಸಲುವಾಗಿ ವಿರಹತಪ್ತಳಾಗಿದ್ದೇನೆ. ನಾನು ನಿಮ್ಮ ಚರಣದಾಸಿಯಾಗಲು ಹಂಬಲಿಸಿದ ದಿನಗಳು ಒಂದೆರಡಲ್ಲ—ಈ ಸೌಭಾಗ್ಯ ನನಗಿಲ್ಲವೆಂದು ನಾನು ಕೊರಗಿ ಹತಾಶಳಾಗಿದ್ದೆ. ನನ್ನ ಭಾಗ್ಯದ ಬಾಗಿಲು ತೆರೆದಂತೆ ನೀವು ನನ್ನ ಮೇಲೆ ಅನುಗ್ರಹಿಸಿದ್ದೀರಿ. ನನ್ನನ್ನು ಉದ್ಧರಿಸುವ ಸಲುವಾಗಿಯೇ ನೀವು ಚಿತ್ತೂರಿನ ಮೇಲೆ ದಂಡೆತ್ತಿ ಬಂದಿರುವಿರೆಂದಮೇಲೆ ದಾಸಿಯಮೇಲೆ ನಿಮಗಿರುವ ಅಭಿಮಾನ ವೇದ್ಯವಾಗುತ್ತದೆ. ಇಂತಹ ಸುಯೋಗವನ್ನು ನಾನು ತಿರಸ್ಕರಿಸುವೆನೆ?

ನಾನು ನಿಮ್ಮ ಪತ್ರವನ್ನು ಕಂಡು ಎಷ್ಟು ಸಂತೋಷಿಸಿರುವೆನೆಂದರೆ, ರೆಕ್ಕೆಗಳಿದ್ದರೆ ನಿಮ್ಮ ಬಳಿಗೆ ಹಾರಿಬರುತ್ತಿದ್ದೆ. ನಾನು ನಾಳೆಯ ದಿನ ನನ್ನ ಸಕಲ ಪರಿವಾರದೊಡನೆ ಹೊರಟು ನಿಮ್ಮನ್ನು ರಾತ್ರಿಯವೇಳೆಗೆ ಕೂಡಿಕೊಳ್ಳುತ್ತೇನೆ.

ಇಂತು ತಮ್ಮ ಚರಣದಾಸಿ,

ಪದ್ಮಿನಿ.

ಈ ಪತ್ರವನ್ನು ಓದಿಕೊಂಡ ಅಲ್ಲಾವುದ್ದೀನನು ತನ್ನ ಕಣ್ಣನ್ನು ತಾನೇ ನಂಬಲಾಗಲಿಲ್ಲ. ಇದೆಲ್ಲ ಕನಸೋ ನನಸೋ ಎಂದು ಭ್ರಮಿಸಿದನು. ಇಷ್ಟು

ಬೇಗನೆ ಪದ್ಮಿನಿಯು ತನಗೆ ಒಲಿಯುವಳೆಂದು ಅವನು ತಿಳಿದಿರಲಿಲ್ಲ. ಎಲ್ಲವೂ ಅನಿರೀಕ್ಷಿತವಾದ ರೀತಿಯಲ್ಲೇ ನಡೆದಿತ್ತು. ಭೀಮಸಿಂಹನು ಕೈಸೆರೆ ಸಿಕ್ಕಿದ್ದಷ್ಟೇ ಸುಲಭವಾಗಿ ಪದ್ಮಿನಿಯು ತನ್ನ ವಶವಾಗುವಳೆಂದು ಅಲ್ಲಾವುದ್ದೀನನು ಹಿಗ್ಗಿದನು. ಪದ್ಮಿನಿಯನ್ನು ಉಚಿತರೀತಿಯಲ್ಲಿ ಸ್ವಾಗತಿಸಲು ತಕ್ಕ ಸಿದ್ಧತೆ ನಡೆಸಿದನು.

ಇದ್ದಕ್ಕಿದ್ದಂತೆ, ಪದ್ಮಿನಿಯು ತನ್ನ ಸಖೀಜನರೊಡನೆ ಹೊರಟುಬರುವ ಸುದ್ದಿಯನ್ನು ಕೇಳಿ ಸೈನಿಕ ಶಿಬಿರದಲ್ಲಿ ಹಬ್ಬದ ಸಡಗರ ಉಂಟಾಯಿತು. ಯುದ್ಧರಂಗವು ವಿವಾಹವೇದಿಕೆಯಂತೆ ಮಾರ್ಪಟ್ಟು, ಸೈನಿಕರು ತಮ್ಮ ಶಸ್ತ್ರಾಸ್ತ್ರಗಳಿಗೆ ಬಿಡುವು ಕೊಟ್ಟು, ಸಂತೋಷಕೂಟಗಳಲ್ಲಿ ತೊಡಗಿದರು. ಎಲ್ಲೆಲ್ಲೂ ನರ್ತನ, ಪಾನಕೂಟಗಳೂ, ಇತರ ಮನರಂಜನೆಗಳೂ ನಡೆದಿದ್ದವು.

ನಿಶ್ಚಿತ ಸಮಯಕ್ಕೆ ಸರಿಯಾಗಿ ಪದ್ಮಿನಿಯು ತನ್ನ ದೀರ್ಘಪರಿವಾರದೊಡನೆ ಹೊರಟಳು. ಒಂದು ಸಾವಿರ ಮೇನೆಗಳಲ್ಲಿ ಅಲ್ಲಾವುದ್ದೀನನ ಶಿಬಿರದ ಬಳಿ ಬಂದಿಳಿದಳು. ಅವರ ಮೇನೆಗಳನ್ನು ಸಶಕ್ತರಾದ ಬೋಯಿಗಳು ಹೊತ್ತಿದ್ದರು. ಪ್ರತಿಯೊಂದು ಮೇನೆಗಳನ್ನೂ ಚನ್ನಾಗಿ ಅಲಂಕರಿಸಲಾಗಿತ್ತು. ಅವುಗಳಿಗೆ ರಾಜಪುತ್ರರ ಪದ್ಧತಿಯಂತೆ ಬುರಕಿ ಹಾಕಿದ್ದರು. ಅವುಗಳಲ್ಲಿ ಪದ್ಮಿನಿಯೂ ಅವಳ ರಾಣೀವಾಸದ ಸ್ತ್ರೀಯರೂ ಇದ್ದರು.

ಪದ್ಮಿನಿಯು ತನ್ನ ಪರಿವಾರದೊಂದಿಗೆ ಅಲ್ಲಾವುದ್ದೀನನ ಶಿಬಿರದ ಬಳಿಗೆ ಬರುವುದರೊಳಗೆ ಸಂಜೆ ಸರಿದು ಕತ್ತಲಾಗಿತ್ತು. ಸೈನಿಕ ಶಿಬಿರದಲ್ಲೆಲ್ಲಾ ದೀವಿಟಿಕೆಗಳೇ ಕಾಣುತ್ತಿದ್ದವು. ಎಲ್ಲೆಲ್ಲೂ ಸಂತೋಷ, ಸಂಭ್ರಮಗಳು. ಅಲ್ಲಾವುದ್ದೀನನಂತೂ ಪದ್ಮಿನಿಯ ಬರವಿಗಾಗಿ ಚಾತಕಪಕ್ಷಿಯಂತೆ ಕಾಯುತ್ತಿದ್ದನು. ಪದ್ಮಿನಿಯ ಮೇನೆ ಬರುತ್ತಲೇ ಅವಳನ್ನು ಇದಿರುಗೊಳ್ಳಲು ಮಿತ ಪರಿವಾರದೊಡನೆ ತಾನೇ ಹೊರಟನು.

ಅಲ್ಲಾವುದ್ದೀನನು ಮೆಲ್ಲನೆ ಪದ್ಮಿನಿಯ ಮೇನೆಯ ಬಳಿಗೆ ಹೋಗಿ ಅದರ ಮುಖಪರದೆಯನ್ನು ಸರಿಸಿದನು. ಪದ್ಮಿನಿಯನ್ನು ನೋಡಲು ತಲೆ ಇಟ್ಟನು. ಯಾರೋ ಒಳಗಿನಿಂದ ಬಲವಾದ ಗುದ್ದು ಕೊಟ್ಟರು. ಅವನು ರಕ್ತಕಾರಿ ನೆಲಕ್ಕೆ ಬಿದ್ದನು. ಅಷ್ಟರಲ್ಲಿ ಒಳಗೆ ಪದ್ಮಿನಿಯಂತೆ ವೇಷಧರಿಸಿದ್ದ, ಹದಿನಾರು ವರ್ಷದ ಬಾದಳನು ಛಂಗನೆ ನೆಲಕ್ಕೆ ಹಾರಿ, ಅಲ್ಲಾವುದ್ದೀನನ ಮೇಲೆ ಬಿದ್ದನು.

ಅಲ್ಲಾವುದ್ದೀನನ ಸೇವಕರು ಅವನ ಖಡ್ಗಕ್ಕೆ ಅಲ್ಲಾವುದ್ದೀನನು ಬಲಿಯಾಗದಂತೆ ತಡೆದರು.

ಬಾದಳನು ಬಾಲಕನಾದರೂ, ರಾಜಪುತ್ರರಿಗೊಪ್ಪುವ ರೀತಿಯಲ್ಲಿ ಏಕಾಂಗಿಯಾಗಿ ನಿಂತು ಅಭಿಮನ್ಯುವಿನಂತೆ, ಶತ್ರುಗಳನ್ನು ತುಂಡರಿಸುತ್ತ ಬಂದನು. ಅಷ್ಟರಲ್ಲಿ ರಣಕಹಳೆಯಾಯಿತು. ಮೇನೆಗಳಿಂದ ರಾಜಪುತ್ರ ವೀರಭಟರು ಕತ್ತಿಗಳನ್ನು ಝಳಪಿಸುತ್ತಾ, ಕೆಳಗೆ ಧುಮುಕಿದರು. ಹಬ್ಬದಲ್ಲಿ ಮುಳುಗಿದ್ದ ಯವನರ ಶಿಬಿರದ ಮೇಲೆ ಬಿದ್ದು ಕೈಗೆ ಸಿಕ್ಕಿದುದಕ್ಕೆಲ್ಲಾ ಬೆಂಕಿ ಇಟ್ಟರು. ಎದುರಾದವರನ್ನು ಸಂಹರಿಸುತ್ತಾ ಮುನ್ನಡೆದರು.

ಈ ಸುಸಂಧಿಯನ್ನು ಸಾಧಿಸಿ, ಗೋರನು ತನ್ನ ಸಂಗಡಿಗರೊಡನೆ ಹೊರಟು, ಸೆರೆಯಲ್ಲಿದ್ದ ಭೀಮಸಿಂಹನನ್ನು ಬಿಡಿಸಿದನು.

ಭೀಮಸಿಂಹನು ಬಿಡುಗಡೆಯಾದ ಸುದ್ದಿಯನ್ನು ಕೇಳಿ ರಾಜಪುತ್ರ ಯೋಧರಿಗೆ ಇಮ್ಮಡಿ ಹುರುಪು ಬಂದಿತು. ಅವರು ವೀರಾವೇಶದಲ್ಲಿ ನುಗ್ಗಿ ಯವನರನ್ನು ತುಂಡರಿಸುತ್ತಾ ಬಂದರು. ಈ ಸಮಯದಲ್ಲಿ ಅಲ್ಲಿ ಉಳಿದರೆ, ಪ್ರಾಣಕ್ಕೆ ಅಪಾಯ ಒದಗುವುದೆಂದು ಭಾವಿಸಿ ಅಲ್ಲಾವುದ್ದೀನನು ತನ್ನ ಸಂಗಡಿಗರೊಡನೆ ಅಲ್ಲಿಂದ ಓಡಿಹೋಗಿದ್ದನು. ಅವನ ಪಲಾಯನದ ವಾರ್ತೆಯನ್ನು ಕೇಳಿ ಯವನ ಸೈನಿಕರೂ ಕಾಲಿಗೆ ಬುದ್ಧಿ ಹೇಳಿದರು.

ಆ ರಾತ್ರಿ ಕಳೆದು ಬೆಳಗಾಗುವುದರೊಳಗೆ, ಅಲ್ಲಾವುದ್ದೀನನ ಶಿಬಿರ ಸಂಪೂರ್ಣವಾಗಿ ರಾಜಪುತ್ರರ ವಶವಾಗಿತ್ತು ಆ ರಾತ್ರಿ ನಡೆದ ಭೀಕರ ಕೊಲೆಯಲ್ಲಿ ಅಸಂಖ್ಯಾತವಾಗಿ ಯವನಸೈನಿಕರು ಮಡಿದಿದ್ದರು. ಅನೇಕರು ಗಾಯಗೊಂಡಿದ್ದರು. ಅನೇಕರು ರಾಜಪುತ್ರರಿಗೆ ಸೆರೆಸಿಕ್ಕಿದರು.

ಸೈನಿಕ ಶಿಬಿರದಲ್ಲಿ ಇದ್ದ ಅಸಂಖ್ಯಾತ ಶಸ್ತ್ರಾಸ್ತ್ರಗಳೂ, ಇನ್ನಿತರ ಬೆಲೆಬಾಳುವ ವಸ್ತುಗಳೂ, ರಾಜಪುತ್ರರ ವಶವಾದವು. ಇವುಗಳಿಗೆ ಕಲಶ ವಿಟ್ಟಂತೆ ಭೀಮಸಿಂಹನು ಗಂಡಾಂತರದಿಂದ ಪಾರಾಗಿದ್ದನು. ಇಷ್ಟೆಲ್ಲಾ ಸಾಹಸಕ್ಕೆ ಕಾರಣರಾಗಿದ್ದ ಗೋರಾ ಹಾಗೂ ಬಾದಳರು ರಕ್ತದಿಂದ ಮಲಿನವಾಗಿದ್ದ ದೂಳಿನಲ್ಲಿ ಗಾಯಗೊಂಡು ಮಡಿದಿದ್ದರು. ಅವರು ತಮ್ಮ ಮಾತೃಭೂಮಿಯ ರಕ್ಷಣೆಗಾಗಿ ತಮ್ಮ ತನುಮನಗಳನ್ನು ಅರ್ಪಿಸಿ, ಹುತಾತ್ಮರಾಗಿದ್ದರು.

ಪದ್ಮಿನಿಯು ತೋರಿಸಿದ ಧೈರ್ಯ ಸಾಹಸಗಳಿಂದಾಗಿ ಚಿತ್ತೂರು ಯವನರ ಪಾಲಾಗುವುದು ತಪ್ಪಿತ್ತು. ಯವನರು ಸೋತು ಓಡಿಹೋಗಿದ್ದರು.

ತನಗಾದ ಅಪಮಾನವನ್ನು ಅಲ್ಲಾವುದ್ದೀನನು ಮರೆಯಲಿಲ್ಲ. ಅವನು ಮಾರನೆಯ ವರ್ಷವೇ ದೊಡ್ಡದೊಂದು ಸೈನ್ಯದೊಡನೆ ಬಂದು ಚಿತ್ತೂರಿನ ಮೇಲೆ ಇಮ್ಮಡಿ ಹುರುಪಿನಿಂದ ದಾಳಿ ಇಟ್ಟನು. ಈ ಬಾರಿ ಚಿತ್ತೂರು ಯವನರ ದಾಳಿಯನ್ನು ಎದುರಿಸಲು ಸಮರ್ಥವಾಗಲಿಲ್ಲ.

ದೀರ್ಘಹೋರಾಟದ ನಂತರ, ಅದು ಯವನರಿಗೆ ವಶವಾಯಿತು. ಭೀಮಸಿಂಹನೂ, ಲಕ್ಷ್ಮಣಸಿಂಹನೂ, ಅವನ ಸಹೋದರರೂ ರಣರಂಗದಲ್ಲಿ ಹೋರಾಡಿ ವೀರಮರಣವನ್ನು ಅಪ್ಪಿದರು. ದೇಶದ ರಕ್ಷಣೆಗಾಗಿ ಚಿತ್ತೂರಿನಲ್ಲಿದ್ದ ಪ್ರತಿಯೊಬ್ಬ ರಾಜಪುತ್ರನೂ ವೀರನಂತೆ ಹೋರಾಡಿ ಮಡಿದಿದ್ದನು.

ಅವರ ಹೆಣಗಳ ಮೇಲೆ ನಡೆದುಕೊಂಡು ಪದ್ಮಿನಿಯಿಂದಾದ ಅಪಮಾನಕ್ಕೆ ಅವಳ ಮೇಲೆ ಸೇಡು ತೀರಿಸಿಕೊಳ್ಳಲು ಅಲ್ಲಾವುದ್ದೀನನು ಚಿತ್ತೂರಿನ ಅರಮನೆಗೆ ನುಗ್ಗಿದನು.

ಅಲ್ಲಿ ಒಂದು ಚಿತಾಗ್ನಿ ಕುಂಡ ಪ್ರಜ್ವಲಿಸುತ್ತಿತ್ತು. ಅದರಲ್ಲಿ ಪದ್ಮಿನಿಯೂ ಅವಳ ಸಖಿಯರೂ ತಮ್ಮ ಪತಿಗಳ ದೇಹದೊಂದಿಗೆ ಸಹಗಮನ ಮಾಡಿದ್ದರು. ಅವಳು ತನ್ನ ಪಾತಿವ್ರತ್ಯವನ್ನು ಯವನರ ಕೈಯಿಂದ ರಕ್ಷಿಸಿಕೊಂಡಿದ್ದಳು. ಅವಳ ಮೇಲ್ಪಂಗ್ತಿಯನ್ನು ಅನುಸರಿಸಿ, ಚಿತ್ತೂರಿನಲ್ಲಿದ್ದ ಪ್ರತಿಯೊಬ್ಬ ಹೆಂಗಸೂ ಸತ್ತು ತಮ್ಮ ಶೀಲಹರಣವಾಗುವುದನ್ನು ತಪ್ಪಿಸಿಕೊಂಡಿದ್ದರು. ಈಗ ಅಲ್ಲಿ ಉಳಿದುದು–ಹೆಣಗಳ ರಾಶಿ! ಭಗ್ನವಾದ ಮನೆಗಳು, ಅಂಗವಿಕಲರಾದ ಸೈನಿಕರು, ಮಕ್ಕಳು, ಮುಪ್ಪಡರಿದ ದುರ್ಬಲರು! ಅಲ್ಲಿದ್ದ ಬೆಲೆಬಾಳುವ ವಸ್ತುವೆಲ್ಲಾ ಅಗ್ನಿದೇವನಿಗೆ ಅರ್ಪಿತವಾಗಿದ್ದವು. ಈಗ ಚಿತ್ತೂರು ಸ್ಮಶಾಣದಂತೆ ಕಾಣುತ್ತಿತ್ತು. ಅಲ್ಲಾವುದ್ದೀನನು ಬಯಸಿದ್ದ ಚಿತ್ತೂರೇ ಬೇರೆ, ಅವನಿಗೆ ವಶವಾದ ಚಿತ್ತೂರೇ ಬೇರೆಯಾಗಿತ್ತು.

# ೧೯

ಪದ್ಮಿನಿಯಂತೂ ದುರುಳನಾಗಿದ ಅಲ್ಲಾವುದ್ದೀನನ ಕೈಗೆ ಸಿಕ್ಕದೆ ಹೋದ್ದಳು. ವಾಘೇಲಕರ್ಣ ಹಾಗೂ ದೇವಲದೇವಿಯರಾದರೂ ತನ್ನ ಕೈಗೆ ಸಿಕ್ಕಿದರೆ ತಾನು ಚಿತ್ತೂರಿನ ಮೇಲೆ ದಂಡೆತ್ತಿ ಬಂದುದಕ್ಕೆ ಸಾರ್ಥಕವಾಯಿತೆಂದು ಅಲ್ಲಾವುದ್ದೀನನು ಬಗೆದನು. ಅವರಿಗಾಗಿ ನಗರದಲ್ಲೆಲ್ಲಾ ಹುಡುಕಿಸಿದನು. ಎಲ್ಲೂ ಆ ತಂದೆ ಮಕ್ಕಳ ಸುಳಿವು ದೊರೆಯಲಿಲ್ಲ.

ಅವರ ಬಗ್ಗೆ ಯಾರೊಬ್ಬರೂ ಯಾವ ಸುದ್ದಿಯನ್ನೂ ಕೊಡಲು ಅಸಮರ್ಥರಾಗಿದ್ದರು. ಅವರು ಯುದ್ಧದಲ್ಲಿ ಖಂಡಿತ ಮಡಿದಿರಲಿಲ್ಲವೆಂಬುದು ಅಲ್ಲಾವುದ್ದೀನನಿಗೆ ತಿಳಿದಿತ್ತು. ಮಡಿದಿದ್ದರೆ ಅವರ ಶವವಾದರೂ ದೊರೆಯಬೇಕಿತ್ತು. ಅಗ್ನಿಕುಂಡಕ್ಕೆ ಬಿದ್ದು ಆತ್ಮಹತ್ಯೆಮಾಡಿಕೊಂಡಿದ್ದರೆನ್ನಲು ಈ ಬಗ್ಗೆ ಆಧಾರಗಳು ಇರಲಿಲ್ಲ. ಮುತ್ತಿಗೆ ನಡೆದ ಮೇಲೆ, ಇಲ್ಲವೇ ಅದಕ್ಕೂ ಮೊದಲೇ ಅವರಿಬ್ಬರೂ ಆಕಸ್ಮಿಕವಾಗಿ ಚಿತ್ತೂರಿನಿಂದ ತಪ್ಪಿಸಿಕೊಂಡು ಹೋಗಿರಬಹುದೇ ಎಂದು ಅವನು ಆಲೋಚಿಸಿದನು. ಈ ಸಂದೇಹವೇ ದಿನಕಳೆದಂತೆ ಹೆಚ್ಚು ದೃಢವಾಯಿತು. ಕಡೆಗೊಂದು ದಿನ ಇದು ಖಚಿತವೂ ಆಯಿತು.

ಅಲ್ಲಾವುದ್ದೀನನ ದಂಡಯಾತ್ರೆ ಆರಂಭವಾಗುವುದಕ್ಕೆ ಕೆಲವು ದಿನಗಳಿರುವಾಗಲೇ ವಾಘೇಲಕರ್ಣನು ತನ್ನ ಮಗಳೊಡನೆ ಹಠಾತ್ತನೆ ಕಣ್ಮರೆಯಾಗಿದ್ದನೆಂದು ಗೂಢಚಾರರಿಂದ ತಿಳಿದುಬಂತು. ವಾಘೇಲಕರ್ಣನ ಪಲಾಯನ-ಕಣ್ಮರೆಗಳು ಸೋಲಿನ ಗಾಯಕ್ಕೆ ಅಪಮಾನದ ಬರೆ ಇಟ್ಟಂತೆ ಆಯಿತು. ಅವನು ಚಿತ್ತೂರು ತನ್ನ ವಶವಾದರೂ-ರಾಜಪುತ್ರರ ಹೆಮ್ಮೆ ಮುರಿದಿದ್ದರೂ ಅವನಿಗೆ ಮಾತ್ರ ಈ ವಿಜಯದಿಂದ ಸಂತೋಷವಾಗಲಿಲ್ಲ. ಅವನ ಹೃನ್ಮನಗಳಲ್ಲಿ ಸೋಲು, ಅಪಮಾನ, ತೇಜೋವಧೆಗಳು ತುಂಬಿದ್ದವು. ಅಲ್ಲಾವುದ್ದೀನನು ಯುದ್ಧದಲ್ಲಿ ವಿಜೇತನಾಗಿದ್ದರೂ ರಾಜಪುತ್ರರ ಕ್ಷಾತ್ರತೇಜದ ಮುಂದೆ ಪರಾಜಿತನೇ ಆಗಿದ್ದ.

ವಾಸ್ತವವಾಗಿ ನಡೆದಿದ್ದ ಸಂಗತಿಯೂ ಹೀಗೆಯೇ. ಒಮ್ಮೆ ಪದ್ಮಿನಿ, ಗೋರ, ಬಾದಳ, ಲಕ್ಷ್ಮಣಸಿಂಹ ಮುಂತಾದ ವೀರಪುರುಷರ ಧೈರ್ಯಸಾಹಸಗಳಿಂದಾಗಿ, ಚಿತ್ತೂರು ಯವನರ ಆಕ್ರಮಣದಿಂದ ಪಾರಾದರೂ, ಅಲ್ಲಾವುದ್ದೀನನು ಮತ್ತೊಮ್ಮೆ ತಮ್ಮ ತಂಟೆಗೆ ಬಾರದೆ ಇರನೆಂದು ಭೀಮಸಿಂಹನಿಗೆ ಚನ್ನಾಗಿ ತಿಳಿದಿತ್ತು. ಈ ಬಾರಿ ನಡೆಯುವ ಯುದ್ಧ ತಮ್ಮ ಜೀವನ-ಮರಣದ ಹೋರಾಟವೆಂದು ಅವನು ಊಹಿಸಿದ್ದನು. ಅದಕ್ಕೆ ಬೇಕಾದ ಸಿದ್ಧತೆಗಳಿಗೆ ಅವನು ಕೂಡಲೇ ಗಮನ ಕೊಟ್ಟಿದ್ದನು. ಯವನರ ಕೈಯಿಂದ ಚಿತ್ತೂರನ್ನು ರಕ್ಷಿಸಿಕೊಳ್ಳುವುದು ಕಷ್ಟಸಾಧ್ಯವೆಂಬುದು ಅವನಿಗೆ ತಿಳಿದಿತ್ತು. ಒಂದು ವೇಳೆ ಯುದ್ಧದಲ್ಲಿ ತಮಗೆ ಸೋಲುಂಟಾಗಿ ಚಿತ್ತೂರು ಯವನರ ಕೈವಶವಾದರೆ, ರಾಜಪುತ್ರ ಸ್ತ್ರೀಯರೆಲ್ಲರೂ ಅಗ್ನಿಪ್ರವೇಶ ಮಾಡಿ, ತಮ್ಮ ಪಾತಿವ್ರತ್ಯವನ್ನು ಕಾಯ್ದುಕೊಳ್ಳಬೇಕೆಂದು ರಾಜಪುತ್ರ ವೀರಮಹಿಳೆಯರಿಗೆ ತಿಳಿಸಿದ್ದನು. ಕೋಟೆಯಲ್ಲಿರುವ ಪ್ರತಿಯೊಬ್ಬ ಸಶಕ್ತ ಯೋಧನೂ ಶತ್ರುಗಳನ್ನು ಧೈರ್ಯವಾಗಿ ಎದುರಿಸಿ ಈ ಮಾರಣಹೋಮದಲ್ಲಿ ಮಡಿದು ವೀರಸ್ವರ್ಗಕ್ಕೇರಲು ಆಮಂತ್ರಣವನ್ನಿತ್ತಿದ್ದನು.

ಭೀಮಸಿಂಹನನ್ನು ವಾಘೇಲಕರ್ಣನ ಚಿಂತೆ ಬಾಧಿಸದೆ ಇರಲಿಲ್ಲ. ಅವರನ್ನು ಈ ಬಾರಿ ಹೇಗೆ ಕಾಪಾಡುವುದೆಂದು ತಿಳಿಯದೆ ಕಂಗೆಟ್ಟನು. ಕಡೆಗೆ, ಪ್ರಸ್ತುತ ವಿಷಮ ಪರಿಸ್ಥಿತಿಯಲ್ಲಿ ಅವರನ್ನು ಚಿತ್ತೂರಿನಿಂದ ಹೊರಗೆ ಕಳುಹಿಸುವುದೇ ಯೋಗ್ಯದಾರಿ ಎನಿಸಿತು. ಈ ಬಗ್ಗೆ ಮಾತನಾಡಲು ವಾಘೇಲಕರ್ಣನ ಬಳಿಗೆ ಆ ದಿನ ಬಂದಿದ್ದನು.

ಯಾವುದೇ ಸುದ್ದಿ ಕೊಡದೆ ಹಠಾತ್ತನೆ ತನ್ನನ್ನು ನೋಡಲು ಬಂದ ಭೀಮಸಿಂಹನನ್ನು ಕಂಡು ಕರ್ಣನು ಬೆರಗಾದನು. ಕ್ಷೇಮಸಮಾಚಾರದ ಮಾತುಕತೆಗಳು ಮುಗಿದ ಮೇಲೆ ಭೀಮಸಿಂಹನೇ ಮಾತು ತೆಗೆದನು :

"ವಾಘೇಲಕುಲೋತ್ತಮರಾದ ಕರ್ಣರಾಯರೇ, ತಮ್ಮಲ್ಲಿ ನನ್ನದೊಂದು ಬಿನ್ನಹವಿದೆ. ಅಪ್ಪಣೆ ಕೊಡುವುದಾದರೆ, ಬಿನ್ನವಿಸುತ್ತೇನೆ."

"ಏನದು ಭೀಮಸಿಂಹರೇ, ಸಹೋದರರಿಗಿಂತಲೂ ಅತಿಶಯವಾಗಿ ನೋಡಿಕೊಂಡಿರುವ ನೀವು ನನ್ನಲ್ಲಿ ಪ್ರಾರ್ಥಿಸುವುದೆ? ನಿಮಗೆ ನನ್ನಿಂದ ಯಾವ ಕೆಲಸವಾಗಬೇಕು—ಅಪ್ಪಣೆ ಮಾಡಿ! ಶಿರಸಾವಹಿಸಿ ನಡೆಸಿಕೊಡುತ್ತೇನೆ!"

"ತಾವು ಅನ್ಯಥಾ ಭಾವಿಸದಿದ್ದರೆ ತಮ್ಮಲ್ಲಿ ನನ್ನದೊಂದು ವಿಜ್ಞಾಪನೆ. ಅದೇನೆಂದರೆ ಆ ಮದೋನ್ಮತ್ತ ಸುಲ್ತಾನನು ಒಮ್ಮೆ ನಮ್ಮ ಕೈಯಲ್ಲಿ ಪೆಟ್ಟು ತಿಂದು ಓಡಿಹೋಗಿರುವನು. ಮತ್ತೊಮ್ಮೆ ಅಸಂಖ್ಯಾತ ಬಲಮೊಡನೆ ನಮ್ಮ ಮೇಲೆ ಸೇಡು ತೀರಿಸಿಕೊಳ್ಳಲು ದಂಡೆತ್ತಿ ಬರುವನೆಂದು ವಾರ್ತೆ ಬಂದಿದೆ. ಈ ಬಾರಿ ನಡೆಯುವ ಹೋರಾಟ—ನಮ್ಮ ಜೀವನಮರಣಗಳ ಹೋರಾಟವಾಗ ಬಹುದು. ಇಂತಹ ಸಮಯದಲ್ಲಿ ತಾವು ತಮ್ಮ ಪುತ್ರಿಯೊಡನೆ ಇಲ್ಲಿ ಇದ್ದರೆ ಅಪಾಯ ಬರುವ ಸಂಭವವಿದೆ. ತಮ್ಮನ್ನು ಶತ್ರುಗಳ ವಿರುದ್ಧ ರಕ್ಷಿಸಲು ನಾವು ಅಶಕ್ತರಾದರೆ ನಮ್ಮನ್ನು ನಂಬಿ ಬಂದ ನಿಮಗೆ ತೊಂದರೆಯಾಗಬಾರದೆಂದು ಈ ಸಲಹೆಯನ್ನು ನೀಡುತ್ತಿದ್ದೇನೆ. ನೀವು ನಮ್ಮ ಮಾತನ್ನು ನಡೆಸಿಕೊಡ ಬೇಕು! ನಮ್ಮ ದೆಸೆಯಿಂದ ನೀವು ತೊಂದರೆಗೆ ಒಳಗಾಗಬಾರದು!"

"ಭೀಮಸಿಂಹರೇ, ನೀವು ನನ್ನನ್ನು ಏನೆಂದು ಬಗೆದಿರಿ? ನನಗೆ ನೀವು ಆಶ್ರಯ ಕೊಟ್ಟುದರಿಂದಲೇ ಅಲ್ಲವೆ ತಮಗೆ ಆ ಸುಲ್ತಾನನ ವಿರೋಧ ಉಂಟಾ ದುದು? ಹೀಗಿರುವಲ್ಲಿ ನಾನು ಇಲ್ಲಿಂದ ಹೇಡಿಯಂತೆ ತಲೆಮರೆಸಿಕೊಂಡು, ಜೀವಗಳ್ಳನಂತೆ ಓಡಿಹೋಗಲೆ? ನಿಮ್ಮನ್ನು ತೊಂದರೆಗೆ ಸಿಲುಕಿಸಿ, ನಾನು ಮಾತ್ರ ತಲೆ ಉಳಿಸಿಕೊಳ್ಳಲೆ? ಖಂಡಿತ ಅದೊಂದು ಮಾತು ಸಾಧ್ಯವಿಲ್ಲ. ನಿಮಗಾದ ಗತಿಯೇ ನನಗೂ ಆಗಲಿ! ನಾನು ಕಡೆತನಕ ಆಶ್ರಯವಿತ್ತ ನಿಮಗೆ ದ್ರೋಹ ಬಗೆಯಲಾರೆ!"

"ಹಾಗಲ್ಲ ಕರ್ಣರಾಯರೇ, ನಾವು ಪ್ರಾಣಹೋದರೂ ಸರಿ, ತಮ್ಮನ್ನು ಆಶ್ರಿತರಾಗಿ ಬಂದ ತಮ್ಮನ್ನು-ರಕ್ಷಿಸಲು ಹೋರಾಡುತ್ತೇವೆ. ಪ್ರಾಣಹೋದರೂ ಸರಿ, ಕರ್ತವ್ಯಭ್ರಷ್ಟರಾಗುವುದಿಲ್ಲ—ವಚನಭ್ರಷ್ಟರಾಗುವುದಿಲ್ಲ. ನಾವು ಆ ದ್ರೋಹಿಗೆ ಹೆದರಿ ಈ ಮಾತು ಹೇಳುತ್ತಿಲ್ಲ. ಆ ನೀಚನು ಈ ಬಾರಿ ದಂಡೆತ್ತಿ ಬಂದರೆ, ಆ ಸಮಯದಲ್ಲಿ ನೀವು ಅವನ ಕೈಗೆ ಸಿಕ್ಕಿಬೀಳಬೇಕಾಗುವುದಲ್ಲ ಎಂದು ಈ ಸಲಹೆ ನೀಡುತ್ತಿರುವೆ. ತಾವು ಅನ್ಯಥಾ ತಿಳಿಯದೆ—ನಿಮಗಾಗಿ ಅಲ್ಲದಿದ್ದರೂ ತಮ್ಮ ಮಗಳ ಶ್ರೇಯೋಭಿವೃದ್ಧಿಯ ಸಲುವಾಗಿ ಈ ಕಾರ್ಯಕ್ಕೆ ಸಮ್ಮತಿಸ ಬೇಕು!" ಎಂದು ವಿನಯದಿಂದ ಬೇಡಿಕೊಂಡನು.

"ಭೀಮಸಿಂಹರೇ, ಈ ಬಗ್ಗೆ ನಾನೇನೂ ಹೇಳಲಾರೆ. ನಮ್ಮ ದೇವಲ ದೇವಿಯ ಇಚ್ಛೆಯಂತೆ ನಡೆಯಲು ಸಿದ್ಧನಿದ್ದೇನೆ. ನೀವೇ ಅವಳನ್ನು ಕೇಳಿ!"

ಎಂದು ಹೇಳಿ ದೇವಲದೇವಿಯನ್ನು ಸಮ್ಮುಖಕ್ಕೆ ಬರಮಾಡಿದನು.

ಅವಳು ಬಂದಮೇಲೆ ಅವಳಿಗೆ ಎಲ್ಲ ಸಂಗತಿಯನ್ನೂ ತಿಳಿಸಿ, "ಮಗಳೇ ನಿನ್ನ ಸ್ಪಷ್ಟ ಅಭಿಪ್ರಾಯ ತಿಳಿಸು" ಎಂದನು.

"ಅಪ್ಪಾಜಿ, ನೀವು ನನ್ನನ್ನು ಸೊಕ್ಕಿನವಳೆಂದು ಕರೆದರೂ ಸರಿ. ನಾವು ಪ್ರಾಣದ ಮೇಲಣ ಆಸೆಯಿಂದ ನಮ್ಮ ಮಿತ್ರರನ್ನು ತೊಂದರೆಗೆ ನೂಕಿ ಪಾರಾಗುವುದು ನನಗೆ ಇಷ್ಟವಿಲ್ಲ. ಹಾಗೆ ಮಾಡಿದರೆ ಹೇಡಿತನವಾದೀತು! ಲೋಕ ಮೆಚ್ಚುವದು ಹಾಗಿರಲಿ, ಆತ್ಮವೂ ಮೆಚ್ಚುವುದಿಲ್ಲ. ಇದೊಂದು ಮಾತು ಮಾತ್ರ ಸಾಧ್ಯವಿಲ್ಲ–ಅವರಿಗೆ ಬಂದ ಗತಿಯೇ ನಮಗೂ ಬರಲಿ! ಯುದ್ಧದಲ್ಲಿ ಗೆದ್ದರೆ ಸನ್ಮಾನ–ಸೋತರೆ ವೀರ ಮರಣ! ಇದಕ್ಕೆ ಹೆದರುವುದೆ?"

"ಮಗಳೇ, ನೀನು ಕ್ಷತ್ರಿಯ ರಮಣಿಯರಿಗೆ ತಕ್ಕಂತೆ ನುಡಿದಿರುವೆ! ಆದರೆ ಸದ್ಯದ ವಿಷಮ ಪರಿಸ್ಥಿತಿಯಲ್ಲಿ ನೀನು ನನಗಾಗಿ ಈ ಕೆಲಸವನ್ನು ಮಾಡಬೇಕಾದೆ. ನೀವು ಇಲ್ಲಿಂದ ಹೊರಟುಹೋಗಿ, ಎಲ್ಲಾದರೂ ಆಶ್ರಯ ಪಡೆಯಿರಿ! ನೀವು ಕ್ಷೇಮದಿಂದ ಇದ್ದರೆ, ಅದಕ್ಕಿಂತ ಬೇರೆ ವಿಜಯವಿಲ್ಲ—ಶತ್ರುಗಳ ಕೈಯಿಂದ ನಿಮ್ಮನ್ನು ಪಾರುಮಾಡಿದ ಸಂತೋಷ ತೃಪ್ತಿಗಳು ನಮ್ಮದಾಗಿ, ನಾವು ನಿಶ್ಚಿಂತೆಯಿಂದ ಹೋರಾಡಿ ಸಾಯುತ್ತೇವೆ. ಉಳಿದರೆ—ನಿಮ್ಮನ್ನು ಮತ್ತೆ ಕರೆಸಿಕೊಳ್ಳುತ್ತೇವೆ. ಈಗ ನೀವು ಮುಂಡುಹಠ ಹಿಡಿಯದೆ ನಮ್ಮ ಮಾತಿನಂತೆ ನಡೆದರೆ ನಮಗೆ ತುಂಬ ಸಂತೋಷವಾಗುತ್ತದೆ." ಎಂದು ಭೀಮಸಿಂಹನು ಬಹಳ ಒತ್ತಾಯಮಾಡಿದಮೇಲೆ ದೇವಲದೇವಿಯೂ, ಕರ್ಣನೂ ಚಿತ್ತೂರಿನಿಂದ ತಲೆತಪ್ಪಿಸಿಕೊಳ್ಳಲು ಸಮ್ಮತಿಸಿದರು. ಅಷ್ಟರಲ್ಲಿ ಕಮಲಾದೇವಿ ಬರೆದಿದ್ದ ಒಂದು ಪತ್ರ ಕೈಸೇರಿತು,

ಒಮ್ಮೆ ರಾಜಪುತ್ರ ಸಿಂಹವನ್ನು ಕೆಣಕಿ ಪೆಟ್ಟು ತಿಂದು ಹಿಮ್ಮೆಟ್ಟಿದ ಅಲ್ಲಾವುದ್ದೀನನು ಈ ಬಾರಿ ಅತುಲ ಸೈನ್ಯದೊಡನೆ ಚಿತ್ತೂರಿನ ಮೇಲೆ ದಾಳಿ ಇಡಲಿರುವ ಸಂಗತಿಯನ್ನು ಕೇಳಿ, ಈಗ ಬೇರೆ ದಾರಿ ಕಾಣದೆ, ಕಮಲಾದೇವಿಯು ರಹಸ್ಯವಾಗಿ ಪತ್ರಬರೆದಿದ್ದಳು. ಆ ಪತ್ರದಲ್ಲಿ ಕಮಲಾದೇವಿಯು ತಾನು ಒತ್ತಾಯದಲ್ಲಿ ಅಲ್ಲಾವುದ್ದೀನನ ಅಂತಃಪುರ ಸೇರಬೇಕಾಗಿ ಬಂದ ಕರುಣಕಥೆಯನ್ನೆಲ್ಲಾ ಸವಿಸ್ತಾರವಾಗಿ ತಿಳಿಸಿದ್ದಳು.

"ಸ್ವಾಮಿ, ನನ್ನ ಜೀವನವಂತೂ ಹಾಳಾಯಿತು. ನಾಯಿಮುಟ್ಟಿದ ಮಡಕೆಯಾಯಿತು. ದೇಹ ಅಪವಿತ್ರವಾಯಿತು. ಆದರೆ ನೀವೂ ದೇವಲ ದೇವಿಯೂ ಈ ನೀಚನ ಕೈಗೆ ಸಿಕ್ಕುವುದನ್ನು ನೋಡಿ ಸಹಿಸಲಾರೆ! ಅಂತಾದರೆ ಅಂದೇ ನನ್ನ ಸಾವು! ಈಗ ನಾನು ತಮ್ಮಲ್ಲಿ ಪ್ರಾರ್ಥಿಸುವುದು ಇಷ್ಟೇ: ತಾವು ಹೇಗಾದರೂ ಮಾಡಿ, ದೇವಲದೇವಿಯನ್ನು ರಕ್ಷಿಸಬಲ್ಲ ಶ್ರೇಷ್ಠನಾದ ಒಬ್ಬ ರಾಜ ಪುತ್ರನಿಗೆ ಅವಳನ್ನು ಪಾಣಿಗ್ರಹಣ ಮಾಡಿಕೊಟ್ಟು ಅವನ ಮೂಲಕ ಈ ದ್ರೋಹಿ ಅಲ್ಲಾವುದ್ದೀನನ ಮೇಲೆ ಸೇಡುತೀರಿಸಿಕೊಳ್ಳಲು ಪ್ರಯತ್ನಿಸಿ! ಇದ ಕ್ಕಾಗಿ ನಿಮ್ಮ ತನುಮನಧನಗಳನ್ನು ವಿನಿಯೋಗಿಸಿರಿ. ನಾನು ಇಲ್ಲಿ ಇದ್ದು ಕೊಂಡೇ ಅವನ ನಾಶವನ್ನು ಹಾರೈಸುತ್ತೇನೆ.

ಇಂದು ನಾನು ಬದುಕಿರುವುದಾದರೂ ಅದಕ್ಕಾಗಿ. ಇಲ್ಲದಿದ್ದರೆ ಅಪವಿತ್ರ ವಾದ ಈ ದೇಹವನ್ನು ಹೊತ್ತು ನಾನು ಬದುಕಿರುತ್ತಿರಲಿಲ್ಲ. ನನ್ನ ಜೀವನ ವನ್ನು ಹಾಳುಮಾಡಿದ ಆ ನೀಚನನ್ನು ಬಲಿತೆಗೆದುಕೊಂಡಲ್ಲದೆ ಈ ಜೀವಕ್ಕೆ ಶಾಂತಿ ಸಮಾಧಾನಗಳು ಇಲ್ಲ. ಅದಕ್ಕಾಗಿ ಬದುಕಿದ್ದೇನೆ. ಪಿಶಾಚಿಯಂತೆ ಒ ದಿದ್ದೇನೆ.

ಈಗ ನೀವು ನನಗಾಗಿ ಒಂದು ಕೆಲಸ ಮಾಡಬೇಕು. ನಾನು ಈ ಹಿಂದೆ ತಿಳಿಗೇಡಿಯಾಗಿ ದೇವಲದೇವಿಯ ಭವಿಷ್ಯಕ್ಕೆ ಕುಠಾರಪ್ರಾಯವಾದೆ. ಅವಳನ್ನು ಬಯಸಿ ಬಂದ ದೇವಗಿರಿಯ ರಾಜಪುತ್ರ-ಶಂಕರದೇವನನ್ನು ತಿರಸ್ಕರಿಸಿದೆ- ಅವರನ್ನು ಗೊಲ್ಲರೆಂದು ಹೀಯಾಳಿಸಿದೆ. ಇಂದು ಅದರ ಫಲವನ್ನು ಅನುಭವಿ ಸುತ್ತಿದ್ದೇನೆ. ನಾನು ಮಾತ್ರವಲ್ಲ—ನಿರಪರಾಧಿಗಳಾದ ನೀವು ಅನುಭವಿಸಬೇಕಾಗಿ ಬಂದಿದೆ. ನಾನು ನನ್ನ ಅವಿವೇಕತನದಿಂದ ಎಚ್ಚತ್ತಿದ್ದೇನೆ. ಸಾಧ್ಯವಾದರೆ ನೀವು ಕೂಡಲೇ ಚಿತ್ತೂರನ್ನು ತೊರೆದು ದೇವಗಿರಿಯ ಯಾದವ ದೊರೆ ರಾಮ ಚಂದ್ರದೇವನ ಬಳಿಗೆ ಹೋಗಿ, ನಾವು ಮಾಡಿದ ತಪ್ಪಿಗೆ ಕ್ಷಮೆಬೇಡಿ, ದೇವಲ ದೇವಿಯನ್ನು ಅವನ ಉಡಿಗೆ ಹಾಕಿರಿ. ಅವಳನ್ನು ಈ ದುರುಳನ ಕೈಯಿಂದ ಪಾರುಮಾಡಬಲ್ಲ ಏಕೈಕ ದೊರೆ. ಆತ. ಹಿಂದೊಮ್ಮೆ ಅಲ್ಲಾವುದ್ದೀನನಿಗೆ ಪರಾಜಿತ ನಾದರೂ-ಮತ್ತೆ ಸ್ವಾತಂತ್ರ್ಯವನ್ನು ಪಡೆದು, ಈಗ ಮುಸಲ್ಮಾನರ ಮೇಲೆ ಸೇಡು ಬಗೆಯುತ್ತಿರುವ ಏಕೈಕ ಸಮರ್ಥನಾದ ಹಿಂದೂ ಸಾಮ್ರಾಟ. ಅವನೂ ಅವನ ಪುತ್ರ ರಣಧೀರ ಶಂಕರದೇವನೂ ನಿಮಗೆ ಖಂಡಿತವಾಗಿಯೂ ಈ ಸಮಯದಲ್ಲಿ

ಆಶ್ರಯ ಕೊಡುವರೆಂಬ ನಂಬಿಕೆ ಇದೆ. ಆದುದರಿಂದ ನೀವು ಅಲ್ಲಾವುದ್ದೀನನು ಚಿತ್ತೂರನ್ನು ಮುತ್ತುವ ಮುನ್ನವೇ ಅಲ್ಲಿಂದ ಪಾರಾಗಿ ನಿಮ್ಮ ಸಂರಕ್ಷಣೆ ಮಾಡಿ ಕೊಳ್ಳುವಿರೆಂದು ನಂಬಿದ್ದೇನೆ!"

ಇಂತು ನಿರ್ಭಾಗ್ಯ,
ಕಮಲಾದೇವಿ

—ಎಂದು ಪತ್ರವನ್ನು ಮುಗಿಸಿದ್ದಳು.

ಈ ಪತ್ರವನ್ನು ಕಂಡಮೇಲೆ ಕರ್ಣನಿಗೆ ಮಬ್ಬುಕವಿದ ಬಾಳಿನಲ್ಲಿ ಬೆಳಕು ಬಿದ್ದಂತೆ ಆಯಿತು. ಅವನಿಗೆ ತನ್ನ ಪತ್ನಿಗೆ ಉಂಟಾದ ದುಸ್ಥಿತಿಯನ್ನು ಕಂಡು ಮರುಕ ಉಂಟಾಯಿತು. ಅವಳ ಮೇಲೆ ಅತ್ಯಾಚಾರವೆಸಗಿ ಅವಳನ್ನು ಒತ್ತಾಯದಲ್ಲಿ ಅಂತಃಪುರಕ್ಕೆ ಸೇರಿಸಿಕೊಂಡ ಅಲ್ಲಾವುದ್ದೀನನ ಮೇಲೆ ಭಯಂಕರ ಸಿಟ್ಟು ಬಂದಿತು. ಅವನು ಸೇಡಿಗಾಗಿ ಹಂಬಲಿಸಿದನು. ಮರು ಕ್ಷಣದಲ್ಲಿ ಅವನು ದೇವಲದೇವಿಯನ್ನು ದೇವಗಿರಿಯಲ್ಲಿ ಜೋಪಾನ ಮಾಡಿ, ಕಮಲಾದೇವಿಯ ಆಜ್ಞೆಯಂತೆ, ಅಲ್ಲಾವುದ್ದೀನನ ಮೇಲೆ ಸೇಡು ತೀರಿಸಿ ಕೊಳ್ಳಲು ನಿಶ್ಚಯಿಸಿದನು. ಅಂದೇ ಅವನು ಭೀಮಸಿಂಹನ ಒಪ್ಪಿಗೆ ಪಡೆದು ಯಾತ್ರಿಕರ ವೇಶದಲ್ಲಿ ಅಲ್ಲಿಂದ ಹೊರಬಿದ್ದನು.

ಅವನು ಮಿತಪರಿವಾರದೊಡನೆ ಹೊರಟು ಎಲ್ಲೂ ನಿಲ್ಲದೆ ದೇವಗಿರಿಯ ಮಾರ್ಗ ಹಿಡಿದನು. ಅವನು ಅಜಂತೆಗೆ ಬರುವ ವೇಳೆಗೆ ಸುದೀರ್ಘವಾದ ಪ್ರಯಾಣದಿಂದ ಆಯಾಸಗೊಂಡಿದ್ದನು. ದೇವಲದೇವಿಯು ಇತಿಹಾಸಪ್ರಸಿದ್ಧ ವಾದ ಅಜಂತೆಯ ಗುಹೆಗಳನ್ನು ನೋಡಲು ಬಯಸಿದಳು. ಕರ್ಣನು ಅಜಂತೆಯ ಬಳಿಯ ಒಂದು ಹಳ್ಳಿಯಲ್ಲಿ ತಂಗಿದನು.

ಅಲ್ಲಿ ಒಂದು ಅಚಾತುರ್ಯ ಸಂಭವಿಸಿತು.

ಆ ಮಾರ್ಗವಾಗಿ ಅಲ್ಲಾವುದ್ದೀನನ ಸೇನಾನಿ ಉಲೂಫ್ ಖಾನನು ತನ್ನ ದಳದೊಡನೆ ಪ್ರಯಾಣ ಹೊರಟು, ಅವನೂ ಸಮೀಪದ ಹಳ್ಳಿಯಲ್ಲಿ ಬೀಡು ಬಿಟ್ಟಿದ್ದನು. ಸೈನಿಕರು ಕೆಲವರು ಇಷ್ಟು ಸಮೀಪಕ್ಕೆ ಬಂದಮೇಲೆ ಅಜಂತೆಯ ಗುಹೆಗಳನ್ನು ನೋಡದೆ ಹೋಗುವುದೇ ಎಂದು ಯೋಚಿಸಿ, ಉಲೂಫಖಾನನ ಅನುಮತಿಯನ್ನು ಪಡೆದು ಅಜಂತೆಯ ಗವಿಗಳನ್ನು ನೋಡಲು ಬಂದಿದ್ದರು.

ಅವರಲ್ಲಿ ಒಬ್ಬನ ಕಣ್ಣಿಗೆ ದಾರಿಯಲ್ಲಿ ಬಿಡಾರ ಹೂಡಿದ್ದ ಕರ್ಣನೂ, ದೇವಿಯೂ ಬಿದ್ದರು. ಅವರು ಯಾತ್ರಿಕರಂತೆ ತೋರುತ್ತಿದ್ದರೂ. ಶದ ಯಾತ್ರಿಕರಂತೆ ತೋರಿತು. ಅವರ ಮಾತುಕತೆ, ನಡೆನುಡಿಗಳು ಇಂಬುಕೊಟ್ಟಿತು.

ಅವರನ್ನು ಸೂಕ್ಷ್ಮವಾಗಿ ಪರೀಕ್ಷಿಸಿದ ಮೇಲೆ, ಅವರು ಯಾರೋ ರಾಜ ರಣಿಗಳು ಇರಬೇಕು. ಯಾವುದೋ ರಹಸ್ಯ ಉದ್ದಿಶ್ಯಸಾಧನೆಗಾಗಿ ಛದ್ಮವೇಷ ಲ್ಲಿ ಇರುವರೆಂದು ಊಹಿಸಿದನು. ಅವನು ಅವರ ಬಳಿಗೆ ಹೋಗಿ, ಬೇಕೆಂದೇ ಜಂತೆಯ ಗವಿಗಳಿಗೆ ಹೋಗುವ ದಾರಿ ಕೇಳಿದನು.

ವಾಘೇಲಕರ್ಣನು ದಾರಿ ತೋರಿಸಿದನು. ಸಮೀಪದಲ್ಲೇ ವಾಘೋರ ಯು ಹರಿಯುತ್ತಿತ್ತು. ನಿಸರ್ಗರಮಣೀಯವಾದ ಆ ಸ್ಥಳದಲ್ಲಿ, ಕುದುರೆಯ ಳದ ಆಕೃತಿಯಂತೆ ಇದ್ದ ಬೆಟ್ಟದ ಬಂಡೆಗಳನ್ನು ಕೊರೆದು, ಬೌದ್ಧಭಿಕ್ಷುಗಳು ಗವಿಗಳನ್ನು ನಿರ್ಮಿಸಿದ್ದರು. ಅವುಗಳಲ್ಲಿ ಬುದ್ಧನ ಜೀವನಕ್ಕೆ ಸಂಬಂಧಿಸಿದ ಲವಾರು ವರ್ಣಚಿತ್ರಗಳನ್ನು ಬಿಡಿಸಿದ್ದರು. ಇವುಗಳನ್ನು ನೋಡಲು ದೂರ ದ ಯಾತ್ರಿಕರು ತಂಡೋಪತಂಡವಾಗಿ ಬರುತ್ತಿದ್ದರು. ಅವರ ಪೈಕಿ ಇವನೂ ನೆಂದು ಕರ್ಣನು ಊಹಿಸಿದನು. ಆದರೂ ಅವನ ನೋಟವನ್ನು ಕಂಡು ಸಂದೇಹ ಬಂದು,

"ನೀವು ಯಾರು ? ಇಲ್ಲಿಗೇಕೆ ಬಂದಿರಿ ?" ಎಂದನು.

"ನಾವು ನಿಮ್ಮಂತೆಯೇ ಯಾತ್ರಿಕರು. ವಾರಣಾಸಿಗೆಂದು ಹೊರಟಿದ್ದೆವು. ದಾರಿಯಲ್ಲಿ ಅಜಂತೆಯ ಗವಿಗಳ ಕೀರ್ತಿ ಕೇಳಿ ನೋಡಲು ಬಂದೆವು !"

"ತುಂಬಾ ಸಂತೋಷ ! ಗವಿಗಳು ಇಲ್ಲಿಗೆ ತೀರ ಸಮೀಪದಲ್ಲಿ ಇವೆ !" ಎಂದು ಬೀಳ್ಕೊಟ್ಟ. ಕರ್ಣರಾಯ

ಮಾರನೆಯ ದಿನ ಕರ್ಣನು ಬೆಳಗಿನ ಜಾವದಲ್ಲಿ ಎದ್ದು, ಮಗಳು ದೇವಲ ನಿಯನ್ನು ನೋಡಲು ಬಂದನು. ಅದೇನು ಆಶ್ಚರ್ಯ ! ಅವಳು ಕಣ್ಮರೆ ಯಾಗಿದ್ದಳು. ಅವನಿಗೆ ಗಾಬರಿಯಾಯಿತು. ಮಗಳ ಹೆಸರು ಹಿಡಿದು ಎಲ್ಲೆಡೆಯಲ್ಲೂ ಕೂಗಿದನು—ಗುಹೆಗಳು ಮಾತ್ರ ಅವನ ಕರೆಗೆ ಓಗೊಟ್ಟವು.

ಅವನು ಕಳವಳ, ಹೆದರಿಕೆಗಳಿಂದ ಎಲ್ಲೆಡೆಯಲ್ಲೂ ಮಗಳಿಗಾಗಿ ಶೋಧಿಸಿ ದನು. ಎಲ್ಲೂ ಅವಳು ಪತ್ತೆಯಾಗಲಿಲ್ಲ. ಅವನಿಗೆ ಇದ್ದಕ್ಕಿದ್ದಂತೆ ಮಧ್ಯಾಹ್ನ

ಭೆಟ್ಟಿಯಾದ ಆಗಂತುಕನ ನೆನಪಾಯಿತು—ಅವನ ಸಂಶಯಾಸ್ಪದ ನೆನಪಿಗೆ ಬಂದಿತು. ಅವನೇನಾದರೂ ರಾತ್ರಿ ದೇವಲದೇವಿಯನು ಹಿಡಿದುಕೊಂಡು ಹೋಗಿದ್ದರೆ ಎಂದು ಯೋಚಿಸಿದನು.

ಅವನ ನಿರೀಕ್ಷೆ ಸುಳ್ಳಾಗಿರಲಿಲ್ಲ. ದೇವಲದೇವಿಯು ಯುವ ಸಿಕ್ಕಿ ಬಿದ್ದಿದ್ದಳು ಈ ಸುದ್ದಿ ತಿಳಿದಾಗ ಕರ್ಣನು ಮೂರ್ಛೆ ಹೋದನು

ಬೆಳಗಾಯಿತು. ಎಲ್ಲೆಡೆಯಲೂ ಬೆಳಕು ತುಂಬಿತು. ಆದರೆ ಬಾಳಿನಲ್ಲಿ ಕವಿದಿದ್ದ ಕತ್ತಲೆ ಮಾತ್ರ ಹರಿದಿರಲಿಲ್ಲ.